ಶ್ರೀ ವೇದವ್ಯಾಸ ಪ್ರಣೀತ

# ಶಿವ ಪುರಾಣ

(ಸಂಕ್ಷಿಪ್ತ ಸಂಗ್ರಹಾನುವಾದ)

**ನಾಗೇಶ**

(ದಿ. ನಾಗೇಶ ರಂಗೋ ಕುಲಕರ್ಣಿ)



: ಪ್ರಕಾಶಕರು :

ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

**ಪ್ರಕಾಶಕರು :**
ಸಮಾಜ ಪುಸ್ತಕಾಲಯ,
ಶಿವಾಜಿ ಬೀದಿ,
ಧಾರವಾಡ – ೧.

**ಮಾರಾಟಗಾರರು:**

**ಸ ಮಾ ಜ ಪು ಸ್ತ ಕಾ ಲ ಯ**

ಕೊಪ್ಪೀಕರ ಬೀದಿ,
ಹುಬ್ಬಳ್ಳಿ

ಸುಭಾಸ ಬೀದಿ,
ಧಾರವಾಡ

ಶಿವಾಜಿ ಬೀದಿ,
ಧಾರವಾಡ
ಫೋ : ೨೭೯೧೬೧೬

ಪ್ರಥಮ ಮುದ್ರಣ : ೧೯೯೫
ದ್ವಿತೀಯ ಮುದ್ರಣ : ೨೦೧೦
ತೃತೀಯ ಮುದ್ರಣ : ೨೦೧೨



DTP : Alur Computers, 9845900705-Btg-Gdg-02.

**ಮುದ್ರಕರು :**
ಜಗದೀಶ ಫಾಣೇಕರ ಬಿ.ಇ. (ಪ್ರಿಂಟೆಕ್)
ಸರಸ್ವತಿ ಆಫ್‌ಸೆಟ್ ಪ್ರಿಂಟರ್ಸ್,
ಶಿವಾಜಿ ಬೀದಿ, ಧಾರವಾಡ – ೧.

# ಪರಿವಿಡಿ

| ವಿಷಯ | ಪುಟ |
| --- | --- |

# ಪುರಾಣಗಳ ಪುರಾಣ

ಪುರಾಣ ಸಾಹಿತ್ಯವು ವೈದಿಕವಾಙ್ಮಯದ ಪರಂಪರೆಗೆ ಸೇರಿದುದು. ವೇದಗಳ ಅರ್ಥವಿಸ್ತಾರಕ್ಕಾಗಿ ಬ್ರಾಹ್ಮಣಗಳೂ ಆರಣ್ಯಕಗಳೂ ಉಪನಿಷತ್ತುಗಳೂ ರಚಿತವಾದಂತೆ, ಪುರಾಣಗಳೂ ಪ್ರಚಲಿತವಾದುವು. ವೇದ ವಾಙ್ಮಯದೊಳಗಿನ ತಾತ್ವಿಕನಿರೂಪಣೆಯು ವಿದ್ವಾಂಸರಿಗಷ್ಟೇ ವೇದ್ಯವಾಗುತ್ತಿತ್ತು. ಆದರೆ ಜನಸಾಮಾನ್ಯನಿಗೂ ಅವುಗಳೊಳಗಿನ ಜ್ಞಾನವು ಪ್ರಾಪ್ತವಾಗಬೇಕೆಂದು ಪುರಾಣಗಳ ರಚನೆಯಾಯಿತು. ಅಂತೆಯೇ ಇತಿಹಾಸದ ದೃಷ್ಟಾಂತಗಳ ಮೂಲಕ ವೈದಿಕ ಪ್ರಮೇಯಗಳನ್ನು, ಉಪಮಾ–ರೂಪಕ–ದೃಷ್ಟಾಂತಾದಿ ಕಾವ್ಯಲಕ್ಷಣಗಳಿಂದ ಜನಪದದ ಮೇಲೆ ಬಿಂಬಿಸುವುದು ಅವುಗಳ ಮೂಲೋದ್ದೇಶವಾಗಿತ್ತು.

ಸ್ವರ್ಗ (ಸೃಷ್ಟಿ), ಪ್ರತಿಸರ್ಗ (ಪ್ರತಿ ಸೃಷ್ಟಿ), ವಂಶ, ಮನ್ವಂತರ ಮತ್ತು ವಂಶಾನುಚರಿತವೆಂದು ಪುರಾಣವು ಪಂಚಲಕ್ಷಣಗಳಿಂದ ಯುಕ್ತವಾಗಿರುವುದೆಂದು ವಿಷ್ಣುಪುರಾಣದಲ್ಲಿ "ಪುರಾಣ" ಶಬ್ದದ ವ್ಯಾಖ್ಯೆಯನ್ನು ಹೇಳಲಾಗಿರುವುದು. ಈ ಸೃಷ್ಟಿಯು ಉತ್ಪನ್ನವಾದ ಬಗೆ, ಅದರ ವಿಸ್ತಾರ, ಬೇರೆ ಬೇರೆ ಯುಗಗಳಲ್ಲಿನಡೆದ ಅದರ ಅಭಿವೃದ್ಧಿ, ಬೇರೆ ಬೇರೆ ರಾಜವಂಶಗಳು ಪೃಥ್ವಿಯನ್ನು ಆಳಿದ ರೀತಿ, ಅವರಲ್ಲಿ ಸಾತ್ವಿಕರು ಯಾರು? ದುರಾಚಾರಿಗಳು ಯಾರು? ಅವರು ತಮ್ಮ ಆಚರಣೆಗಳಿಗೆ ತಕ್ಕ ಫಲಗಳನ್ನು ಅನುಭವಿಸಿದುದು ಹೇಗೆ?–ಇವೇ ಮೊದಲಾದ ವಿಷಯಗಳು ವಿಸ್ತಾರವಾಗಿ ಪುರಾಣಗಳಲ್ಲಿ ಕಂಡು ಬರುವುವು. ಪುರಾಣಗಳು 'ಪಂಚಮವೇದ'ವೆಂದು ಕರೆಯಲ್ಪಟ್ಟುದರ ವೈಶಿಷ್ಟ್ಯ ಇದೇ ಆಗಿದೆ. ಅವು "ವೈದಿಕಧರ್ಮದ ವಿಶ್ವಕೋಶ"ಗಳೆಂದರೂ ಸಲ್ಲುವುದು.

ವೈದಿಕ ವಾಙ್ಮಯದಲ್ಲಿ ೧೮ (ಅಷ್ಟಾದಶ) ಪುರಾಣಗಳೂ ೧೮ ಉಪಪುರಾಣಗಳೂ ಹಲವಾರು ಸ್ಥಳ ಪುರಾಣಗಳೂ ಅಡಕವಾಗಿವೆ. ಪುರಾಣಗಳ ಮೂಲಸ್ವರೂಪವನ್ನು ಬ್ರಾಹ್ಮಣಗಳಲ್ಲಿ ಗುರುತಿಸಬಹುದು. ಮೂಲದಲ್ಲಿ ಒಂದೇ

ಪುರಾಣವಿದ್ದುದು ನಂತರ ಕಾಲಕಾಲಕ್ಕೆ ವಿಸ್ತಾರಗೊಂಡು ೧೮ ಪುರಾಣಗಳಾಗಿ ವಿಭಾಗಿತವಾಗಿರಬಹುದೆಂದು ವಿದ್ವಾಂಸರ ತರ್ಕ–ಮತ.

ಈ ೧೮ ಮಹಾಪುರಾಣಗಳ ಹೆಸರುಗಳು ಇಂತಿವೆ :

೧. ಬ್ರಹ್ಮಪುರಾಣ
೨. ಪದ್ಮಪುರಾಣ
೩. ವಿಷ್ಣುಪುರಾಣ
೪. ಶಿವ (ವಾಯು) ಪುರಾಣ
೫. ಭವಿಷ್ಯ–ಪುರಾಣ
೬. ನಾರದ ಪುರಾಣ
೭. ಅಗ್ನಿ ಪುರಾಣ
೮. ಬ್ರಹ್ಮವೈವರ್ತಕ–ಪುರಾಣ
೯. ಮಾರ್ಕಂಡೇಯ ಪುರಾಣ
೧೦. ಲಿಂಗ ಪುರಾಣ
೧೧. ವರಾಹ ಪುರಾಣ
೧೨. ವಾಮನ ಪುರಾಣ
೧೩. ಕೂರ್ಮ ಪುರಾಣ
೧೪. ಮತ್ಸ್ಯ ಪುರಾಣ
೧೫. ಗರುಡ ಪುರಾಣ
೧೬. ಸ್ಕಂದ ಪುರಾಣ
೧೭. ಬ್ರಹ್ಮಾಂಡ ಪುರಾಣ
೧೮. ಭಾಗವತ ಪುರಾಣ*

---

* ಭಾಗವತದಲ್ಲಿ ೧. ಶ್ರೀಕೃಷ್ಣ ಮಹಿಮೆಯನ್ನು ಸಾರುವ "ಭಾಗವತ"
೨. ಶ್ರೀದೇವಿಯ ಮಹಿಮೆಯನ್ನು ತಿಳಿಸುವ "ದೇವೀಭಾಗವತ" ಎಂಬುದಾಗಿ ಎರಡು ವಿಧಗಳು. ಇವೆರಡರ ಪೈಕಿ ಯಾವುದನ್ನು ಮಹಾ ಪುರಾಣದಲ್ಲಿ ಗಣಿಸುವುದು? ಎಂಬ ಬಗ್ಗೆ ವಿದ್ವಾಂಸರಲ್ಲಿ ಮತಭೇದವಿದೆ.

ಹದಿನೆಂಟು ಪುರಾಣಗಳನ್ನು ವ್ಯಾಸ ಮಹರ್ಷಿಯೇ (ಕೃಷ್ಣ ದ್ವೈಪಾ-ಯನನೇ) ರಚಿಸಿ, ತನ್ನ ಮಗನಾದ ಶುಕಮುನಿಗೆ ಬೋಧಿಸಿದನೆಂದು ಪ್ರತೀತಿ ಇದೆ. ೧೮ ಪುರಾಣ, ೧೮ ಉಪಪುರಾಣಗಳಲ್ಲದೆ ವೇದಾಂತ-ದರ್ಶನ ಹಾಗೂ ಪಾತಂಜಲಯೋಗಸೂತ್ರಗಳ ಭಾಷ್ಯಕಾರರೂ ಮಹಾಭಾರತವನ್ನು ರಚಿಸಿದವರೂ ವ್ಯಾಸರೇ ಆಗಿದ್ದಾರೆಂಬ ಭಾವನೆಯೊಡನೆ 'ವ್ಯಾಸೋಚ್ಛಿಷ್ಟಮ್ ಜಗತ್ಸರ್ವಮ್' ಎಂಬ ಲೋಕೋಕ್ತಿಯೂ ವ್ಯಾಸ-ಸಾಹಿತ್ಯ ವಿಸ್ತಾರವನ್ನು ಪ್ರಚುರಪಡಿಸುತ್ತದೆ. ಆದರೆ ಈ ಮಾತು ಸಾಧುವಾಗಿಯೂ ಸಾಧ್ಯವಾಗಿಯೂ ತೋರುವುದಿಲ್ಲ. ಆದರೆ ಪುರಾಣಗಳಿಗೆಲ್ಲ ಮೂಲ ಆಕರವಾಗಿರಬಹುದಾದ ಮೂಲ ಪುರಾಣವೊಂದನ್ನು ಸತ್ಯವತೀ ಪುತ್ರ ವೇದವ್ಯಾಸರು ರಚಿಸಿರುವುದರಲ್ಲಿ ಶಂಕೆಯಿಲ್ಲ. ಈ ಮನ್ವಂತರದಲ್ಲಿ ಒಟ್ಟಿಗೆ ಸಪ್ತ ವಿಂಶತಿ (೨೭) ವ್ಯಾಸರು (ಋಷಿಕವಿಗಳು) ಆಗಿ ಹೋದರೆಂದೂ ಕಾಲಕಾಲಕ್ಕೆ ಅವರು ಪುರಾಣ ಸಂಹಿತೆಗಳನ್ನು ಪ್ರತಿಯೊಂದು ಯುಗದಲ್ಲಿಯೂ ಬರೆದಿದ್ದಾರೆಂದೂ 'ದೇವೀ ಭಾಗವತ ಪುರಾಣ'ದಲ್ಲಿ ಹೇಳಿರುವುದನ್ನು ನಾವು ಗಮನಿಸಿದರೆ, ಪುರಾಣ ಕರ್ತೃಗಳಾದ ಋಷಿಕವಿಗಳಿಗೆ "ವ್ಯಾಸ" ಎಂಬ ಸಂಜ್ಞೆ ಇದ್ದಿರಬಹುದೆಂದು ಊಹಿಸಬಹುದು. ಹೀಗೆ ಹಲವಾರು ವ್ಯಾಸರ ಬೃಹತ್ಕೃತಿಗಳೇ ಪುರಾಣಗಳಾಗಿವೆಯೆಂಬುದನ್ನು ಮನಗಾಣಬಹುದು.

ಪುರಾಣಗಳೆಲ್ಲ ಒಂದೇ ಕಾಲದಲ್ಲಿ ಬರೆದವುಗಳಲ್ಲವೆಂಬ ಮಾತನ್ನು ಸಪ್ತ ವಿಂಶತಿ ವ್ಯಾಸರ ಬರವಣಿಗೆಯ ವಿಧಾನದಿಂದ ಕಂಡುಕೊಳ್ಳಬಹುದು. ಆಯಾ ಪುರಾಣಗಳಲ್ಲಿ ಉಕ್ತವಾದ ವಿವಿಧ ಐತಿಹಾಸಿಕ ರಾಜವಂಶಗಳ ಸತ್ಯತೆಯಿಂದಲೂ ಹಲ ವಿಧದ ವೈಶಿಷ್ಟ್ಯಗಳಿಂದಲೂ ಹಲವಾರು ಕಥೆ ಹಾಗೂ ಅವುಗಳ ಕಥನದಲ್ಲಿ ಕಂಡುಬರುವ ವಿಪರ್ಯಾಸ ಹಾಗೂ ಪರಸ್ಪರ ವಿರೋಧೀ ಅಂಶಗಳನ್ನು ಗಮನಿಸಿದಾಗಲೂ ಈ ವಿಷಯ ಮನದಟ್ಟಾಗುವುದು.

ಇವನ್ನೆಲ್ಲ ಸೂಕ್ಷ್ಮವಾಗಿ ಗಮನಿಸಿದಾಗ, ಪ್ರತಿಯೊಂದು ಪುರಾಣವೂ ಪ್ರತ್ಯೇಕವಾಗಿ ರಚಿತವಾಯಿತೆಂದು ಅನ್ನುವುದಕ್ಕಿಂತ, ಪುರಾಣ ಸಾಹಿತ್ಯವು ನೂರಾರು ವರ್ಷಗಳ ವರೆಗೆ ಹಲವು ಮುಖಗಳಿಂದ ಬೆಳೆದು, ಕೊನೆಗೊಂದು ವ್ಯಾಸ ಸಮುದಾಯವು (ವೇದಪಾರಂಗತ ವಿದ್ವತ್ ಸಮುದಾಯ) ಅವುಗಳನ್ನು ಪೃಥಃಕರಿಸಿ, ಹದಿನೆಂಟು ಪುರಾಣಗಳನ್ನಾಗಿ ಸಂಕಲಿಸಿರಬಹುದೆಂದು ಭಾವಿಸುವುದು ಹೆಚ್ಚು ಸಮಂಜಸವೆನಿಸುವುದು.

ಪುರಾಣರಚನಾ ಕಾಲವನ್ನು ಮುಖ್ಯವಾಗಿ ಮೂರು ಖಂಡಗಳಾಗಿ ವಿಭಾಗಿಸುವರು :

೧. ಮಹಾಭಾರತ ಯುದ್ಧದಿಂದ ಮಹಾಪದ್ಮನಂದನ ವರೆಗೆ ಕ್ಷತ್ರಿಯ ಕಾಲಖಂಡ.

೨. ಅಲ್ಲಿಂದ ಮುಂದಕ್ಕೆ ಸಮುದ್ರಗುಪ್ತನು ಗುಪ್ತ ಸಾಮ್ರಾಜ್ಯವನ್ನು ವಿಸ್ತರಿಸಿದ ಕಾಲದ ವರೆಗೆ (ಕ್ರಿ.ಪೂ. ೩೨೦ ರಿಂದ ಕ್ರಿ.ಶ. ೩೨೦) ಶೂದ್ರಕಾಲ ಖಂಡ.

೩. ಗುಪ್ತವಂಶದ ತರುವಾಯದ ಅವಧಿ– ಬ್ರಾಹ್ಮಣ ಕಾಲಖಂಡ.

ಶೂದ್ರ ಕಾಲಖಂಡದಲ್ಲಿ ವಿಸ್ತರಗೊಂಡ ಇತಿಹಾಸ, ಪುರಾಣಗಳೊಳಗಿನ ಅವೈದಿಕತೆಯನ್ನು ದೂರಪಡಿಸುವುದಕ್ಕೋಸ್ಕರ, ಈ ತೃತೀಯ ಕಾಲಖಂಡದಲ್ಲಿ ಅನೇಕ ಹೊಸ ಹೊಸ ಪುರಾಣಗಳು ರಚಿತವಾಗಿರುವಂತೆ ಪ್ರತೀತವಾಗುತ್ತದೆ. ಪುರಾಣಗಳಲ್ಲಿ ಬ್ರಾಹ್ಮ, ವೈಷ್ಣವ ಹಾಗೂ ಶೈವವೆಂಬ ಮೂರು ಶಾಖೆಗಳೂ (ಏಕಂ ಸತ್– ಒಬ್ಬನೇ ದೇವನ ಮೂರು ವಿವಿಧ ಸ್ವರೂಪಗಳ ಸೃಷ್ಟಿ–ಸ್ಥಿತಿ–ಲಯಗಳ ವೈಶಿಷ್ಟ್ಯಪೂರ್ಣ ಶಾಖೆಗಳು) ಈ ಕಾಲದಲ್ಲಿಯೇ ಉದಯಿಸಿದವು.

– **ನಾಗೇಶ**

ಶ್ರೀ ವೇದವ್ಯಾಸ ಪ್ರಣೀತ

**ಸಂಕ್ಷಿಪ್ತ ಶಿವಪುರಾಣ**

# ಶಿವಪುರಾಣ ಮಹಾತ್ಮೆ

**ಏಕ ಏವ ತದಾ ರುದ್ರೋ ದ್ವಿತೀಯೋಽಸ್ತಿ ನ ಕಶ್ಚನ ।**

**ಸಂಸೃಜ್ಯ ವಿಶ್ವಭುವನಂ ಗೋಪ್ತಾಂತೇ ಸಂಚುಕೋಚಯಃ ॥**

(ಶಿವಪುರಾಣ ವಾ. ಸಂ. ಪೂ. ೫೦.)

ಸೃಷ್ಟಿಯ ಆರಂಭದಲ್ಲಿ ರುದ್ರದೇವನೊಬ್ಬನೇ ವಿದ್ಯಮಾನನಿರುವನು, ಬೇರೆ ಯಾವುದೂ ಇಲ್ಲ. ಅವನು ಜಗತ್ತನ್ನು ಸೃಷ್ಟಿಸಿ ಅದರ ರಕ್ಷಣೆ ಮಾಡುವನು. ಅಂತ್ಯದಲ್ಲಿ ಎಲ್ಲವನ್ನೂ ಲಯ ಮಾಡುವನು.

**ಹರಿಹರಯೋಃ ಪ್ರಕೃತಿರೇಕಾ ಪ್ರತ್ಯಯಭೇದೇನ ರೂಪಭೇದೋಽಯಂ।**

**ಏಕಸ್ಯೈವ ನಟಸ್ಯಾನೇಕವಿಧಾ ಭೂಮಿಕಾ ಭೇದಾತ್ ॥**

ಹರಿ–ಹರರಲ್ಲಿ ಮೂಲತಃ ಭೇದವಿರುವದಿಲ್ಲ. ಪ್ರತ್ಯಯದಲ್ಲಿ ಈ ರೂಪದ ಭೇದವಾಗುತ್ತದೆ. ನಾಟಕದಲ್ಲಿ ಅಭಿನೇತೃವು ವಿಭಿನ್ನರೂಪವನ್ನು ಧಾರಣ ಮಾಡುತ್ತಿದ್ದರೂ ವಸ್ತುತಃ ಅವನು ಯಾವನಿರುವನೋ ಅವನೇ ಇರುವನು.

ಭಗವಾನ್ ನಾರಾಯಣನು ತನ್ನ ದಿವ್ಯ ವೈಕುಂಠದಲ್ಲಿ ನಿದ್ರಿಸುತ್ತಿದ್ದಾಗ ಕೋಟಿಕೋಟಿ ಚಂದ್ರರ ಕಾಂತಿಯಿಂದ ಯುಕ್ತನೂ, ತ್ರಿಶೂಲ, ಡಮರು ಧಾರಿಯೂ ಸ್ವರ್ಣಾಭೂಷಣಗಳಿಂದ ವಿಭೂಷಿತನೂ ಸುರೇಂದ್ರವಂದಿತನೂ ಅಣಿಮಾದಿ ಸಿದ್ಧಿಗಳಿಂದ ಸುಸೇವಿವತನೂ ಆದ ತ್ರಿಲೋಚನ ಭಗವಾನ್ ಶಿವನು ನೃತ್ಯ ಮಾಡತೊಡಗಿದ್ದನ್ನು ಸ್ವಪ್ನದಲ್ಲಿ ಕಂಡನು. ಆಗ ಅವನು ಎಚ್ಚತ್ತು, ಭಗವತಿ ಲಕ್ಷ್ಮೀದೇವಿಗೆ ಈ ಸಂಗತಿಯನ್ನು ತಿಳಿಸಿ, ತನ್ನ ಸ್ಮರಣೆ ಮಾಡುತ್ತಿರುವ ಕೈಲಾಸ

ಪತಿಯನ್ನು ಭೆಟ್ಟಿಯಾಗಬೇಕೆಂಬ ಇಚ್ಛೆಯಿಂದ ಕೈಲಾಸಕ್ಕೆ ಪತ್ನೀಸಹಿತನಾಗಿ ತೆರಳಿದನು. ಆಗ ಅವನಿಗೆ ಮಾರ್ಗದಲ್ಲಿಯೆ ಭಗವಾನ್ ಚಂದ್ರಶೇಖರನು ಭಗವತಿ ಉಮಾದೇವಿಯೊಡನೆ ದರ್ಶನ ಕೊಟ್ಟನು. ಶಿವನ ಸ್ವಪ್ನದಲ್ಲಿ ಭಗವಾನ್ ವಿಷ್ಣುವು ದರ್ಶನ ಕೊಟ್ಟಿದ್ದರಿಂದ ಅವನು ವಿಷ್ಣುವಿನ ಭೆಟ್ಟಿಗಾಗಿ ಕೈಲಾಸದಿಂದ ವೈಕುಂಠಕ್ಕೆ ಹೊರಟನು. ಅವರಿಬ್ಬರೂ ಆನಂದದಿಂದ ಮಾತಾಡತೊಡಗಿದರು. ಇಬ್ಬರೂ ತಮ್ಮ ತಮ್ಮ ಸ್ವಪ್ನದ ಸಂಗತಿಯನ್ನು ತಿಳಿಸಿದರು. ಇಬ್ಬರ ನೇತ್ರಗಳಲ್ಲಿಯೂ ಆನಂದಾಶ್ರುಗಳು ಹರಿಯತೊಡಗಿದವು. ಆಗ ಪರಸ್ಪರರು ತಮ್ಮ ಲೋಕಕ್ಕೆ ಬರಬೇಕೆಂದು ಆಗ್ರಹದಿಂದ ಹೇಳತೊಡಗಿದರು. ಅವರ ಸಂಭಾಷಣೆಯನ್ನು ಕೇಳಿ ಭಗವತಿ ಉಮಾದೇವಿಯು ಉಭಯತರನ್ನುದ್ದೇಶಿಸಿ ಮಾತಾಡತೊಡಗಿದಳು :

'ನಾಥಾ, ಕೇಶವಾ, ನಿಮ್ಮಿಬ್ಬರ ನಿಶ್ಚಲ ಪ್ರೇಮವನ್ನು ಕಂಡು ನಾನು ನಿರ್ಧರಿಸಿರುವದೇನೆಂದರೆ, ನಿಮ್ಮಿಬ್ಬರ ನಿವಾಸಸ್ಥಾನಗಳು ಭಿನ್ನ ಭಿನ್ನವಾಗಿರುವದಿಲ್ಲ. ವೈಕುಂಠವೇ ಕೈಲಾಸವು, ಕೈಲಾಸವೇ ವೈಕುಂಠವು. ನಿಮ್ಮಿಬ್ಬರ ನಾಮಗಳೂ ದೇಹಗಳೂ ಬೇರೆ ಬೇರೆಯಾಗಿದ್ದರೂ ಆತ್ಮವು ಒಂದೇ ಆಗಿದೆ. ನಿಮ್ಮಿಬ್ಬರ ಭಾರ್ಯೆಯರೂ ಬೇರೆ ಬೇರೆಯಲ್ಲ; ಇಬ್ಬರೂ ಒಬ್ಬರೇ ಆಗಿರುವೆವು. ಇವಳು ಶ್ರೀಲಕ್ಷ್ಮಿಯು; ನಾನೂ ಶ್ರೀಲಕ್ಷ್ಮಿಯಾಗಿರುವೆನು. ನಾನು ಶ್ರೀಉಮೆಯು; ಇವಳೂ ಶ್ರೀಉಮೆಯಾಗಿರುವಳು. ನಿಮ್ಮಿಬ್ಬರಲ್ಲಿ ಭೇದವನ್ನು ಕಾಣುವವರು ನಿಶ್ಚಯವಾಗಿ ಪತನ ಹೊಂದುವರು. ನೀವಿಬ್ಬರೂ ನಿಮ್ಮ ನಿಮ್ಮ ಲೋಕಕ್ಕೆ ಹೊರಡಿರಿ. ಮಹೇಶ್ವರನು ತಾನು ವಿಷ್ಣುರೂಪದಿಂದ ವೈಕುಂಠಕ್ಕೆ ತೆರಳುವೆನೆಂದೂ ವಿಷ್ಣುವು ತಾನು ಶಿವರೂಪದಿಂದ ಕೈಲಾಸಕ್ಕೆ ತೆರಳುವೆನೆಂದೂ ಭಾವಿಸಿಬಿಟ್ಟರೆ ಸಮಸ್ಯೆಯೇ ಬಗೆಹರಿಯುವದು. ಒಂದೇ ನೀರು ಎರಡು ಪಾತ್ರಗಳಲ್ಲಿದ್ದ ಹಾಗೆ ನೀವು.'

ಭಗವತಿ ಉಮಾದೇವಿಯು ಹೀಗೆ ಹೇಳಿದ ಕೂಡಲೇ ಹರಿ-ಹರರು ನಕ್ಕರು. ಆಗ ಶಿವನು 'ನನ್ನ ಹೃದಯದಲ್ಲಿ ವಿಷ್ಣುವಿರುವನು; ವಿಷ್ಣುವಿನ ಹೃದಯಲ್ಲಿ ನಾನಿರುವೆನು. ನಮ್ಮಿಬ್ಬರಲ್ಲಿ ಭೇದವನ್ನು ಕಲ್ಪಿಸದವರು ನನಗೆ ಪ್ರಿಯರಾಗುವರು. ವಿಷ್ಣುವೇ, ನೀನು ರುದ್ರನ ಧ್ಯೇಯವಾಗಿರುವೆ; ರುದ್ರನು ನಿನ್ನ ಧ್ಯೇಯವಾಗಿರುವನು. ರುದ್ರನ ಭಕ್ತನಾಗಿ ನಿನ್ನನ್ನು ನಿಂದಿಸುವವನು ಎಲ್ಲ ಪುಣ್ಯವನ್ನು ನಾಶ ಮಾಡಿಕೊಳ್ಳುವನು.'

ಹೀಗೆ ಸದಾಶಿವನು ಹೇಳಿದ ಬಳಿಕ ಇಬ್ಬರೂ ಪರಸ್ಪರ ನಿರೋಪ ಪಡೆದು ತಮ್ಮ ತಮ್ಮ ಲೋಕಗಳಿಗೆ ತಮ್ಮ ತಮ್ಮ ಭಾರ್ಯಾಸಮೇತರಾಗಿ ತೆರಳಿದರು. ಉಮಾ–ಮಹೇಶ್ವರರೂ ಲಕ್ಷ್ಮಿ–ವಿಷ್ಣುವೂ ಅಭಿನ್ನರಾಗಿರುವರೆಂಬ ಸಂಗತಿಯು ಜಗದ್ವಿಖ್ಯಾತವಾಯಿತು. ಶ್ರೀಕೃಷ್ಣದ್ವೈಪಾಯನ ವೇದವ್ಯಾಸನ ಶಿಷ್ಯನಾದ ಸೂತ ಪುರಾಣಿಕನು ಶೌನಕಾದಿಮುನಿಗಳಿಗೆ ಇಪ್ಪತ್ತುನಾಲ್ಕು ಸಾವಿರ ಶ್ಲೋಕವುಳ್ಳ ಹಾಗೂ ಏಳು ಸಂಹಿತೆಗಳಿಂದ ಕೂಡಿದ ಶಿವಪುರಾಣವನ್ನು ಉಪದೇಶಿಸಲು ಪ್ರಾರಂಭಿಸಿದನು. ಆಗ ಸೂತಪುರಾಣಿಕನು ಶಿವಪುರಾಣ ಶ್ರವಣ ಮಾಡಿ ಉದ್ಧಾರ ಹೊಂದಿದ ದೇವರಾಜನ ಹಾಗೂ ಚೆಂಚುಲಾ ಎಂಬವಳ ಇತಿಹಾಸವನ್ನು ಅವರಿಗೆ ಹೇಳತೊಡಗಿದನು.

ಪ್ರಾಚೀನ ಕಾಲದಲ್ಲಿ ಕಿರಾತರ ನಗರವಾಸಿಯಾಗಿದ್ದ ದೇವರಾಜ ಬ್ರಾಹ್ಮಣನು ವೈದಿಕಧರ್ಮವಿಮುಖನಾಗಿ ವೈಶ್ಯವೃತ್ತಿಯಿಂದ ಉಪಜೀವನ ನಡೆಯಿಸಿದ್ದನು. ಅವನು ಜನರನ್ನು ಮೋಸಗೊಳಿಸಿ ಅಪಾರ ಧನಸಂಚಯ ಮಾಡಿದ್ದರೂ ತನ್ನ ಧನವನ್ನು ಧರ್ಮಕಾರ್ಯಗಳಿಗಾಗಿ ವಿನಿಯೋಗಿಸುತ್ತಿದ್ದಿಲ್ಲ. ದೇವರಾಜ ದ್ವಿಜನು ವೇಶ್ಯಾಗಾಮಿಯೂ ಧರ್ಮಭ್ರಷ್ಟನೂ ಆಗಿದ್ದನು. ಒಮ್ಮೆ ಅವನು ಪ್ರತಿಷ್ಠಾನ ನಗರಿಗೆ ಹೋದನು. ಅಲ್ಲಿಗೆ ಹೋದ ಕೂಡಲೆ ಅವನು ಜ್ವರ ಬಾಧೆಯಿಂದ ಬಳಲಿದವನಾಗಿ ಅಲ್ಲಿಯ ಒಂದು ಶಿವಾಲಯದಲ್ಲಿ ವಸತಿ ಮಾಡಿದನು. ಅಲ್ಲಿ ಅನೇಕ ಸಾಧು–ಸಂತರು ಇದ್ದರು. ಆ ದೇವಸ್ಥಾನದಲ್ಲಿ ಶಿವಪುರಾಣದ ಪ್ರವಚನವು ನಡೆದಿತ್ತು. ದೇವರಾಜನು ನಿತ್ಯವೂ ಪಾವನಕರ ಪುರಾಣ ಶ್ರವಣ ಮಾಡತೊಡಗಿದನು. ಹೀಗೆ ಒಂದು ಮಾಸ ಕಳೆಯುವಷ್ಟರಲ್ಲಿ ಅವನ ಪ್ರಾಣೋತ್ಕ್ರಮಣವಾಯಿತು. ಯಮರಾಜನ ದೂತರು ಅವನನ್ನು ಯಮಪುರಿಗೆ ಕರೆದೊಯ್ದರು. ಆಗ ಭಗವಾನ್ ಶಿವನ ಪಾರ್ಷದರು ಅಲ್ಲಿಗೆ ಬಂದರು. ದೇವರಾಜನು ಮಹಾಪಾತಕವನ್ನು ನಾಶಗೊಳಿಸುವ ಶಿವಪುರಾಣ ಶ್ರವಣ ಮಾಡಿರುವದರಿಂದ ಅವನ ಪಾತಕವು ನಾಶವಾಗಿರುವದು. ಆದುದರಿಂದ ಅವನನ್ನು ಶಿವಲೋಕಕ್ಕೆ ಕರೆದೊಯ್ಯಲು ತಾವು ಬಂದಿರುವೆವೆಂದು ಪಾರ್ಷದರು ಯಮರಾಜನಿಗೆ ತಿಳಿಸಿದರು. ಧರ್ಮರಾಜನು ಅವನನ್ನು ಪಾರ್ಷದಗಣದ ಸ್ವಾಧೀನದಲ್ಲಿ ಕೊಟ್ಟನು. ಪಾರ್ಷದರು ಪರಿಶುದ್ಧನಾಗಿದ್ದ ಆ ಬ್ರಾಹ್ಮಣನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಬಂದು ಭಗವಾನ್ ಶಂಕರನ ಸ್ವಾಧೀನಕ್ಕೆ

ಕೊಟ್ಟರು. ಶಿವಪುರಾಣ ಶ್ರವಣ ಮಾಡಿದ ಪುಣ್ಯದಿಂದ ಅವನು ಕೈಲಾಸ ವಾಸಿಯಾದನು.

ಸಮುದ್ರ ತೀರದ ನಿಕಟವರ್ತಿಪ್ರದೇಶದಲ್ಲಿ ಬಾಷ್ಕಲವೆಂಬ ಗ್ರಾಮವಿತ್ತು. ಅಲ್ಲಿ ವೈದಿಕ ಧರ್ಮವಿಮುಖನೂ ಖಳನೂ ಕುಟಿಲವೃತ್ತಿಯವನೂ ನೀತಿಬಾಹಿರನೂ ಆದ ಬಿಂದುಗನೆಂಬ ಬ್ರಾಹ್ಮಣನಿದ್ದನು. ಅವನ ಪತ್ನಿಯಾದ ಚಂಚುಲೆಯು ಪರಮ ರೂಪವತಿಯಾಗಿದ್ದಳು. ಅವಳು ಸದಾಚಾರಿಯೂ ಸಾಧ್ವೀಮಣಿಯೂ ಆಗಿದ್ದಳು. ಹೀಗಿದ್ದರೂ ಬಿಂದುಗನು ವೇಶ್ಯಾಗಾಮಿಯಾಗಿ ಪತ್ನಿಯನ್ನು ತಿರಸ್ಕರಿಸಿದನು. ಪತಿಯು ಅಧಮನೂ ಕುಕರ್ಮಿಯೂ ಆದುದನ್ನು ನೋಡಿ ಆ ಸಾಧ್ವಿಯು ಕ್ಲೇಶಗೊಂಡಳು. ಅವಳು ದೀರ್ಘಕಾಲದ ವರೆಗೆ ಧರ್ಮಭ್ರಷ್ಟಳಾಗದೆ ತನ್ನ ಸತೀತ್ವವನ್ನು ಕಾಯ್ದುಕೊಂಡಿದ್ದಳು. ಆದರೆ ದುರಾಚಾರಿ ಪತಿಯು ತನ್ನನ್ನು ಪೂರ್ಣವಾಗಿ ಮರೆತದ್ದರಿಂದ ಅವಳು ನೀತಿಭ್ರಷ್ಟಳಾದಳು. ಕೆಲವು ಕಾಲದಲ್ಲಿ ಬಿಂದುಗನು ಮೃತ್ಯುವಶನಾದನು. ಅವನು ತನ್ನ ಪಾತಕಕ್ಕಾಗಿ ನರಕವಾಸವನ್ನನುಭವಿಸಿ ಪಿಶಾಚಿಯಾದನು.

ದೈವಯೋಗದಿಂದ ಒಮ್ಮೆ ಪುಣ್ಯಪರ್ವವು ಪ್ರಾಪ್ತವಾಯಿತು. ಚಂಚುಲೆಯು ತೀರ್ಥಸ್ನಾನಕ್ಕಾಗಿ ಶ್ರೀಕ್ಷೇತ್ರ ಗೋಕರ್ಣಕ್ಕೆ ಹೋದಳು. ಅವಳು ತೀರ್ಥಸ್ನಾನ ಮಾಡಿ ಶಿವದರ್ಶನಕ್ಕಾಗಿ ಶಿವಾಲಯವನ್ನು ಪ್ರವೇಶಿಸಿದಳು. ದೇವದರ್ಶನ ಪಡೆದು ಅಲ್ಲಿ ನಡೆದಿದ್ದ ಶಿವಕಥಾ ಪ್ರವಚನ ಕೇಳಲು ಅಲ್ಲಿ ಕುಳಿತಳು. ವ್ಯಭಿಚಾರಿಣಿಯರಾದ ಸ್ತ್ರೀಯರು ಯಮಲೋಕದಲ್ಲಿ ಭೀಕರ ದಂಡನೆಗೆ ಗುರಿಯಾಗುವರೆಂದು ಬ್ರಾಹ್ಮಣನು ತನ್ನ ಪ್ರವಚನದಲ್ಲಿ ಹೇಳಿದನು. ವೈರಾಗ್ಯವು ಉತ್ಪನ್ನವಾಗುವಂತೆ ಅವನು ಶ್ರೋತೃಗಳಿಗೆ ಪುರಾಣವನ್ನು ಹೇಳತೊಡಗಿದ್ದನು. ಅವನು ಹೇಳಿದ ಯಮಯಾತನೆಯ ಸ್ವರೂಪವನ್ನು ತಿಳಿದ ಚಂಚುಲೆಯು ಭಯಭೀತಳಾದಳು. ಪ್ರಾಯದ ಮದದಲ್ಲಿ ತನ್ನಿಂದ ಘಟಿಸಿದ ದುರಾಚರಣೆಗಾಗಿ ಅವಳು ಪಶ್ಚಾತ್ತಾಪಪಡತೊಡಗಿದಳು. ಕಥಾ ಸಮಾಪ್ತಿಯಾದ ಬಳಿಕ ಶ್ರೋತೃಗಳೆಲ್ಲರೂ ಅಲ್ಲಿಂದ ಹೊರಟುಹೋದರು. ಚಂಚುಲೆಯು ಪುರಾಣವಾಚನ ಮಾಡುವ ಬ್ರಾಹ್ಮಣನ ಬಳಿಗೆ ಹೋಗಿ ವಂದಿಸಿ ತನ್ನಿಂದ ಘಟಿಸಿದ ಪ್ರಮಾದಗಳನ್ನು ವಿವರಿಸಿ, ತನ್ನನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಿದಳು.

ಬಳಿಕ ಬ್ರಾಹ್ಮಣನು : "ಚಂಚುಲೆ, ನೀನು ಅಂಜಬೇಡ, ಕೃತ ಕರ್ಮದ ಬಗ್ಗೆ ನೀನು ಪಶ್ಚಾತ್ತಾಪ ಹೊಂದಿರುವೆ. ಭಗವಾನ್ ಶಂಕರನ ವೈರಾಗ್ಯಯುಕ್ತ ಶಿವಪುರಾಣ ಶ್ರವಣದಿಂದ ನಿನ್ನಲ್ಲಿ ಸದ್ಬುದ್ಧಿಯು ಪ್ರಾದುರ್ಭವಿಸಿದೆ. ನೀನು ದಯಾಘನನಾದ ಶಿವನಿಗೆ ಶರಣು ಹೋಗಬೇಕು. ಪಶ್ಚಾತ್ತಾಪವು ಎಲ್ಲ ವಿಧದ ಪಾತಕಗಳಿಗೆ ಪ್ರಾಯಶ್ಚಿತ್ತವಾಗಿದೆ.

ಪಶ್ಚಾತ್ತಾಪಃ ಪಾಪಕೃತಾ ಪಾಪಾನಾಂ ನಿಷ್ಕೃತಿಃ ಪರಾ ।
ಸರ್ವೇಷಾಂ ವರ್ಣಿತಂ ಸದ್ಭಿಃ ಸರ್ವಪಾಪವಿಶೋಧನಂ ॥
ಪಶ್ಚಾತ್ತಾಪೇನೈವ ಶುದ್ಧಿಃ ಪ್ರಾಯಶ್ಚಿತ್ತಂ ಕರೋತಿ ಸಃ ।
ಯಥೋಪದಿಷ್ಟಂ ಸದ್ಭಿರ್ಹಿ ಸರ್ವಪಾಪವಿಶೋಧನಂ ॥

(ಶಿವಪುರಾಣ ಮಹಾತ್ಮೆ ಅಧ್ಯಾಯ ೩ ಶ್ಲೋಕ ೫–೬)

ಚಂಚುಲೆ, ತನ್ನ ಕುಕೃತ್ಯಕ್ಕಾಗಿ ಪಶ್ಚಾತ್ತಾಪ ಹೊಂದಿದವನು ಅವಶ್ಯವಾಗಿ ಉತ್ತಮ ಗತಿಯನ್ನು ಹೊಂದುವನು. ಶಿವಪುರಾಣ ಕಥಾಶ್ರವಣದಿಂದ ಚಿತ್ತ ಶುದ್ಧಿಯಾಗಿ ನೀನು ಪುನೀತಳಾಗುವೆ. ಶುದ್ಧಚಿತ್ತನಾದ ಮನುಷ್ಯನ ಹೃದಯ ಮಂದಿರದಲ್ಲಿ ಉಮಾ–ಶಂಕರರು ವಿರಾಜಮಾನರಾಗಿರುವರು. ನೀನು ಭಕ್ತಿ ಭಾವಗಳಿಂದೊಡಗೂಡಿ ಶಿವಕಥಾ ಶ್ರವಣ ಮಾಡು. ಅದರಿಂದ ನಿನಗೆ ಖಂಡಿತವಾಗಿ ಮುಕ್ತಿಯು ದೊರೆಯುವುದು" ಎಂದನು.

ಚಂಚುಲೆಯು ಧನ್ಯತೆಯನ್ನು ವ್ಯಕ್ತಪಡಿಸಿದಳು. ಅವಳು ನಿತ್ಯವೂ ಶಿವ ಪುರಾಣ ಶ್ರವಣ, ಶಿವಧ್ಯಾನದಲ್ಲಿ ತೊಡಗಿದಳು. ಸಮಯವೊದಗಿತು. ಭಕ್ತಿ, ವೈರಾಗ್ಯಯುಕ್ತಳಾದ ಅವಳು ಯಾವ ಯಾತನೆಯೂ ಇಲ್ಲದೆ ಭೌತಿಕ ಶರೀರವನ್ನು ತ್ಯಜಿಸಿದಳು. ಶಿವನು ಕಳುಹಿಸಿದ ವಿಮಾನವು ಅಲ್ಲಿಗೆ ಬಂದಿತು. ಶಿವಪಾರ್ಷದರು ಅವಳನ್ನು ವಿಮಾನದಲ್ಲಿ ಕರೆದುಕೊಂಡು ಹೋಗಿ ಶಿವನ ಸ್ವಾಧೀನ ಪಡಿಸಿದರು. ಶಿವನು ಅವಳನ್ನು ಭಗವತಿ ಜಗದಂಬೆಯ ಕಡೆಗೆ ಕಳುಹಿಸಿದನು. ಅವಳು ಪಾರ್ವತಿಯ ಸಖಿಯಾದಳು. ತನ್ನ ಪತಿಯಾದ ಬಿಂದುಗನಿಗೆ ಅವಳು ತುಂಬುರು ಮುನಿಯ ಸಹಾಯದಿಂದ ಪಿಶಾಚಿ ಜನ್ಮದಿಂದ ಮುಕ್ತಿಗೊಳಿಸಿ ಶಿವಸಾನ್ನಿಧ್ಯವನ್ನು ದೊರಕಿಸಿಕೊಟ್ಟಳು.

ತೇ ಜನ್ಮಭಾಜಃ ಖಲು ಜೀವಲೋಕೇ ಯೇ ವೈ
ಸದಾ ಧ್ಯಾಯಂತಿ ವಿಶ್ವನಾಥಂ ।
ವಾಣೀಗುಣಾನ್ ಸ್ತೌತಿ ಕಥಾಂ ಶೃಣೋತಿ ಶ್ರೋತ್ರದ್ವಯಂ ತೇ
ಭವಮುತ್ತರಂತಿ ॥

# ವಿದ್ಯೇಶ್ವರ ಸಂಹಿತೆ

ಆದ್ಯಂತಮಂಗಲಮಜಾತಸಮಾನಭಾವಮಾರ್ಥಂ
ತಮೀಶಮಜರಾಮರಮಾತ್ಮದೇವಂ ।
ಪಂಚಾನನಂ ಪ್ರಬಲಪಂಚವಿನೋದಶೀಲಂ ಸಂಭಾವಯೇ
ಮನಸಿ ಶಂಕರಮಂಬಿಕೇಶಂ ॥

ಆದ್ಯಂತ ಮಂಗಲಮಯನೂ ಅತುಲನೀಯನೂ ಆತ್ಮಸ್ವರೂಪವನ್ನು ಪ್ರಕಾಶಗೊಳಿಸುವವನೂ ಪಂಚಾನನನೂ ಪ್ರಬಲಪಂಚ ವಿನೋದಶೀಲನೂ ಅಜರಾಮರನೂ ಆದ ಅಂಬಿಕಾಪತಿ ಭಗವಾನ್ ಶಂಕರನನ್ನು ಮನದಲ್ಲಿ ಚಿಂತನೆ ಮಾಡುವೆನು.

ಮಂಗಲಮಯನಾದ ಭಗವಾನ್ ಶಂಕರನ ಸ್ತೋತ್ರಮಾಡಿ ಮಹರ್ಷಿ ವೇದವ್ಯಾಸನ ಪರಮಶಿಷ್ಯನಾದ ಸರ್ವಜ್ಞ ರೋಮಹರ್ಷಣನು ಪುಣ್ಯಮಯ ಕ್ಷೇತ್ರವಾದ ಪ್ರಯಾಗದಲ್ಲಿ ಮಹಾಮುನಿಗಳು ಆಯೋಜನ ಮಾಡಿರುವ ಜ್ಞಾನ ಯಜ್ಞದ ಸಮಾಚಾರವನ್ನು ಕೇಳಿ ಅಲ್ಲಿಗೆ ಬಂದನು. ಪೌರಾಣಿಕ ಶಿರೋಮಣಿ ಯಾದ ಸೂತಪುರಾಣಿಕನು ಆಗಮಿಸಿದ್ದರಿಂದ ಎಲ್ಲ ಋಷಿ–ಮಹರ್ಷಿಗಳು ಆನಂದ ಭರಿತರಾದರು. ಆಗ ಅವರು ರೋಮಹರ್ಷಣನಿಗೆ ವಿನಯಪೂರ್ವಕ ವಾಗಿ ಪ್ರಣಾಮಗಳನ್ನರ್ಪಿಸಿ ಸ್ವಾಗತಿಸಿದರು. ಆಗ ಶೌನಕಮಹರ್ಷಿಯು ಅವನನ್ನು ಬಹುಗೌರವದಿಂದ ಉಚಿತಾಸನದಲ್ಲಿ ಕುಳ್ಳಿರಿಸಿ 'ಸರ್ವಜ್ಞನಾದ ರೋಮ ಹರ್ಷಣಾ, ನೀನು ವ್ಯಾಸಮುಖದಿಂದ ಸಂಪೂರ್ಣ ಪುರಾಣಗಳ ಜ್ಞಾನವನ್ನು ಹೊಂದಿರುವೆ. ನಮ್ಮ ಸೌಭಾಗ್ಯದಿಂದ ಇಲ್ಲಿ ನಡೆಯಲಿರುವ ಜ್ಞಾನಸತ್ರಕ್ಕೆ ನೀನು

ಆಗಮನ ಮಾಡಿದೆ. ಲೋಕದಲ್ಲಿಯ ಜನರು ದುರಾಚಾರಿಗಳೂ ಪತಿತರೂ ಆಗಿ ಧರ್ಮಗ್ಲಾನಿಯು ಪ್ರಾದುರ್ಭವಿಸತೊಡಗಿರುವದು. ಯಾವ ಪುರಾಣವನ್ನು ಶ್ರವಣ ಮಾಡುವದರಿಂದ ಧರ್ಮದ ಜಾಗ್ರತಿಯಾಗುವದು? ನೀನು ತ್ರಿವೇಣಿ ಸಂಗಮದಲ್ಲಿ ನಡೆಯಲಿರುವ ಜ್ಞಾನಸತ್ರದಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸಬೇಕು' ಎಂದನು.

ರೋಮ ಹರ್ಷಣನು ಸೂತನೇ ಭಗವಾನ್ ವೇದವ್ಯಾಸ ಮುನೀಶ್ವರನು ನನಗೆ ಹದಿನೆಂಟು ಮಹಾಪುರಾಣಗಳನ್ನು ಉಪದೇಶಿಸಿರುವನು. ಅವುಗಳಲ್ಲಿ ವೇದಾಂತದ ಸಾರಸರ್ವಸ್ವವಾದ ಶಿವಪುರಾಣವು ಶ್ರೋತೃಗಳ ಪಾಪರಾಶಿಯನ್ನು ಕ್ಷಯಗೊಳಿಸುವದು. ಈ ಪುರಾಣ ಶ್ರವಣ ಮಾಡಿದವನಿಗೆ ಉತ್ತಮ ಗತಿಯು ಲಭಿಸುವದು. ಗುರುದೇವ ವ್ಯಾಸಮಹರ್ಷಿಯ ಸ್ಮರಣೆ ಮಾಡಿ ನಾನು ಶಿವಪುರಾಣ ಕಥನ ಮಾಡುವೆನು. ಧರ್ಮ, ಅರ್ಥ, ಕಾಮ, ಮೋಕ್ಷ–ಈ ನಾಲ್ಕೂ ಪುರುಷಾರ್ಥಗಳನ್ನು ಸಾಧಿಸಿಕೊಡುವ ಶಿವಪುರಾಣವು ಅಧ್ಯಯನಯೋಗ್ಯವಾಗಿದೆ. ಇದು ವೇದಗಳಿಗೆ ಸಮಾನವಾಗಿದೆ. ಇದರಲ್ಲಿ ವಿದ್ಯೇಶ್ವರ ಸಂಹಿತಾ, ರುದ್ರಸಂಹಿತಾ, ಶತ ರುದ್ರಸಂಹಿತಾ, ಕೋಟಿ ರುದ್ರ ಸಂಹಿತಾ, ಉಮಾಸಂಹಿತಾ, ಕೈಲಾಸಸಂಹಿತಾ, ವಾಯವೀಯ ಸಂಹಿತಾ ಎಂಬ ಏಳು ಸಂಹಿತೆಗಳಿದ್ದು, ಇಪ್ಪತ್ತು ನಾಲ್ಕು ಸಾವಿರ ಶ್ಲೋಕಗಳಿವೆ. ಮೂಲಪುರಾಣದ ಶ್ಲೋಕಸಂಖ್ಯೆಯು ಒಂದು ಲಕ್ಷ ಇದ್ದು, ಶೈವ ಶಿರೋಮಣಿ ಭಗವಾನ್ ವೇದವ್ಯಾಸನು ಈ ಪುರಾಣವನ್ನು ಸಂಕ್ಷೇಪಗೊಳಿಸಿ ಇಪ್ಪತ್ತು ನಾಲ್ಕು ಸಾವಿರ ಶ್ಲೋಕಗಳಲ್ಲಿ ಸಂಕಲಿತ ಮಾಡಿರುವನು.

ಶೌನಕಾದಿ ಮಹರ್ಷಿಗಳೆ, ಭಗವಾನ್ ಶಂಕರನ ಶ್ರವಣ, ಮನನ, ನಿದಿಧ್ಯಾಸಗಳು ಮಹತ್ತರವಾದ ಸಾಧನಗಳಾಗಿವೆ. ಇವು ವೇದಸಮ್ಮತವಾಗಿರುವುವು. ಅವನ ನಿರಾಕಾರಪೂಜೆಯು ಲಿಂಗಪೂಜೆಯಾಗಿದೆ. ಅವನ ಮೂರ್ತಿಯ ಪೂಜೆಯು ಸಾಕಾರಪೂಜೆಯಾಗಿದೆ. ಭಗವಾನ್ ಶಿವನ ಹೊರತು ಉಳಿದ ದೇವತೆಗಳ ಮೂರ್ತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಪೂಜೆಗೊಳ್ಳುತ್ತಿರುವದು. ನಿರಾಕಾರ ಪ್ರತೀಕ ಲಿಂಗಪೂಜೆಗೆ ಬಗ್ಗೆ ಮಂದರಾಚಲದ ಮೇಲೆ ಬ್ರಹ್ಮಪುತ್ರ ಸನತ್ಕುಮಾರನಿಗೆ ನಿರಾಕಾರ (ಲಿಂಗ) ಪೂಜೆಯ ವಿಷಯದಲ್ಲಿ ಹೇಳಿದ ಮಹಾತ್ಮೆಯನ್ನು ನಿಮಗೆ ಹೇಳುವೆನು. ನಂದಿಕೇಶ್ವರನು ಸನತ್ಕುಮಾರನಿಗೆ ಭಗವಾನ್ ಮಹಾದೇವನ ಆವಿರ್ಭಾವ ಪ್ರಸಂಗವನ್ನು ಹೇಳತೊಡಗಿದನು. ಬ್ರಹ್ಮ

ವಿಷ್ಣು ಇವರ ವಿವಾದವನ್ನು, ದೇವತೆಗಳು ಕೈಲಾಸ ಶಿಖರದ ಮೇಲೆ ಗಮನ ಮಾಡಿದ್ದನ್ನೂ, ಅವರು ಚಂದ್ರಶೇಖರ ಮಹಾದೇವನ ಸ್ತವನ ಮಾಡಿದ್ದನ್ನೂ ತಿಳಿಸಿ, ದೇವಾಧಿದೇವ ಮಹಾದೇವನು ಬ್ರಹ್ಮ, ವಿಷ್ಣು ಇವರ ಮಧ್ಯದಲ್ಲಿ ಜ್ಯೋತಿರ್ಮಯ ಅಗ್ನಿಸ್ತಂಭದಂತೆ ಆವಿರ್ಭವಿಸಿದ ಸಂಗತಿಯನ್ನು ಹೇಳಿದನು. ಆಗ ಬ್ರಹ್ಮ, ವಿಷ್ಣು ಹಾಗೂ ದೇವತೆಗಳು ಆ ಜ್ಯೋತಿರ್ಮಯ ಸ್ತಂಭಕ್ಕೆ ವಂದನೆ ಮಾಡಿದರು. ತರುವಾಯ ಸಾಕಾರಮೂರ್ತಿಯಾದ ಸಾಂಬಸದಾಶಿವನನ್ನು ಅವರು ಆಸನದಲ್ಲಿ ಕುಳ್ಳಿರಿಸಿ ಪೂಜಿಸಿದರು. ಅವರ ಪೂಜೆಯಿಂದ ತೃಪ್ತನಾದ ಮಹೇಶ್ವರನು ಅವರನ್ನುದ್ದೇಶಿಸಿ ಮಾತಾಡಿದನು :

"ಪುತ್ರರೆ, ಇಂದಿನ ದಿನವು ಮಹಾನ್ ಪರ್ವಕಾಲದ ದಿನವು. ಇಂದು ನೀವು ಭಕ್ತಿಪೂರ್ವಕವಾಗಿ ನನ್ನನ್ನು ಪತ್ರ ಪುಷ್ಪ-ಧೂಪ, ದೀಪಾದಿಗಳಿಂದ ಪೂಜಿಸಿದ್ದರಿಂದ ನಾನು ಪ್ರಸನ್ನನಾಗಿರುವೆನು. ಈ ದಿನವು ಶಿವರಾತ್ರಿಯೆಂಬ ಹೆಸರಿನಿಂದ ವಿಖ್ಯಾತವಾಗಿ ನನಗೆ ಪರಮಪ್ರಿಯ ದಿನವಾಗುವದು. ಇಂದಿನ ದಿನ ದಲ್ಲಿ ನಿರಾಹಾರಿಯಾಗಿದ್ದು, ಶಮ- ದಮೆಗಳಿಂದೊಡಗೂಡಿ ಪೂಜೆ ಮಾಡಿದರೆ, ಇಡೀ ಒಂದು ವರ್ಷ ಶಿವಪೂಜೆ ಮಾಡಿದ್ದರ ಫಲವು ದೊರೆಯುವದು. ನಾನು ಜ್ಯೋತಿರ್ಮಯ ಸ್ತಂಭರೂಪದಲ್ಲಿ ಪ್ರಕಟವಾದ ಈ ದಿನವು ಮಹಾ ಪವಿತ್ರ ದಿನವಾಗಿದ್ದು, ನನ್ನ ಪೂಜೆಯನ್ನು ಮೂರ್ತಿರೂಪದಲ್ಲಾಗಲಿ ಲಿಂಗರೂಪ ದಲ್ಲಾಗಲಿ ನೆರವೇರಿಸಬಹುದು. ಮಹಾಸ್ವರೂಪದಲ್ಲಿದ್ದ ಜ್ಯೋತಿರ್ಮಯ ಸ್ತಂಭವು ಸಣ್ಣದಾಗಿ ಜ್ಯೋತಿರ್ಲಿಂಗ ಸ್ವರೂಪವಾಗುವದು. ಜ್ಯೋತಿರ್ಲಿಂಗಗಳಿಂದಾಗಿ ಈ ಭೂತಲವು ಲಿಂಗಸ್ಥಾನವೆಂಬ ಹೆಸರಿನಿಂದ ಪ್ರಸಿದ್ಧವಾಗುವದು. ಜ್ಯೋತಿರ್ಲಿಂಗ ಗಳ ದರ್ಶನ, ಸ್ಪರ್ಶನ-ಧ್ಯಾನಗಳಿಂದ ಮನುಷ್ಯನು ಜನನ, ಮರಣಗಳಿಂದ ಮುಕ್ತನಾಗುವನು. ಜ್ಯೋತಿರ್ಮಯ ಸ್ತಂಭವು ಪ್ರಕಟವಾದ ಈ ಪ್ರದೇಶವು ಅರುಣಾಚಲವೆಂಬ ಹೆಸರಿನಿಂದ ಪ್ರಸಿದ್ಧವಾಗುವದು. ಬ್ರಹ್ಮಭಾವವು ನನ್ನ ನಿಷ್ಕಲ ರೂಪವು; ಮಹೇಶ್ವರಭಾವವು ಸಕಲರೂಪವು. ಇವೆರಡೂ ನನ್ನ ಸಿದ್ಧರೂಪ ಗಳಾಗಿವೆ."

ಮಹೇಶ್ವರನು ಹೀಗೆ ಹೇಳಿದ ಬಳಿಕ ವಿಷ್ಣು-ಬ್ರಹ್ಮರು, "ಪ್ರಭೋ, ಸೃಷ್ಟಿ ಮೊದಲಾದ ಐದು ಕೃತ್ಯಗಳ ಲಕ್ಷಣವೇನು? ಈ ಸಂಗತಿಯನ್ನು ನಮಗೆ ತಿಳಿಸ ಬೇಕು" ಎಂದರು.

ಭಗವಾನ್ ಶಿವನು : 'ನನ್ನ ಕರ್ತವ್ಯಗಳನ್ನರಿಯುವದು ಅತ್ಯಂತ ಗಹನವಾಗಿದೆ. ಆದರೂ ನಿಮ್ಮ ಸಲುವಾಗಿ ಆ ವಿಷಯವನ್ನು ಹೇಳುವೆನು. ಸೃಷ್ಟಿ, ಪಾಲನ, ಸಂಹಾರ, ತಿರೋಭಾವ, ಅನುಗ್ರಹ ಈ ಐದು ಜಗತ್ಸಂಬಂಧವಾದ ನನ್ನ ಕಾರ್ಯಗಳಾಗಿವೆ. ಇವು ನಿತ್ಯ ಸಿದ್ಧವಾಗಿರುವವು. ಸಂಸಾರ ರಚನೆಯ ಆರಂಭವು ಸೃಷ್ಟಿಯು, ನನ್ನಿಂದ ಪಾಲಿಸಲ್ಪಡುವ ಸೃಷ್ಟಿಯ ಸುಸ್ಥಿರರೂಪವೇ ಸ್ಥಿತಿಯು. ಅದರ ವಿನಾಶವೇ ಸಂಹಾರವು. ಪ್ರಾಣಗಳ ಉತ್ಕ್ರಮಣಕ್ಕೆ ತಿರೋಭಾವವೆನ್ನುವರು. ಎಲ್ಲದರಿಂದಲೂ ವಿಮುಕ್ತವಾಗುವದು ನನ್ನ ಅನುಗ್ರಹವು. ಈ ಪ್ರಕಾರವಾಗಿ ಐದು ಕೃತ್ಯಗಳಿರುವವು. ನನ್ನ ಭಕ್ತ ಜನರು ಈ ಐದೂ ಕೃತ್ಯಗಳನ್ನು ಪಂಚಭೂತಗಳಲ್ಲಿ ಕಾಣುವರು. ಸೃಷ್ಟಿಯು ಭೂತಳದಲ್ಲಿ, ಸ್ಥಿತಿಯು ಜಲದಲ್ಲಿ, ಸಂಹಾರವು ಅಗ್ನಿಯಲ್ಲಿ, ತಿರೋಭಾವವು ವಾಯುವಿನಲ್ಲಿ, ಅನುಗ್ರಹವು ಆಕಾಶದಲ್ಲಿ ಸ್ಥಿತವಾಗಿರುವದು. ಪೃಥ್ವಿಯಿಂದ ಸರ್ವವೂ ಸೃಷ್ಟಿಯಾಗುವದು. ಜಲದಿಂದ ವೃದ್ಧಿಯಾಗುವದು. ಜೀವನ ರಕ್ಷೆಯಾಗುವದು. ಅಗ್ನಿಯು ಎಲ್ಲವನ್ನೂ ದಹಿಸುವದು. ವಾಯುವು ಹಾರಿಸುವದು. ಆಕಾಶವು ಸರ್ವವನ್ನೂ ಅನುಗ್ರಹೀತಗೊಳಿಸುವದು. ವಿದ್ವಾನನಾದ ಪುರುಷನು ಇವುಗಳ ವಿಷಯವನ್ನು ಇದೇ ರೂಪದಲ್ಲಿ ಗ್ರಹಿಸಬೇಕು. ಈ ಐದು ಕೃತ್ಯಗಳ ಭಾರವಹನಕ್ಕಾಗಿಯೇ ನನಗೆ ಐದು ಮುಖ ಗಳಿರುವವು. ನಾನು ಪೂರ್ವಕಾಲದಲ್ಲಿ ನನ್ನ ಸ್ವರೂಪಭೂತವಾದ ಮಂತ್ರವನ್ನು ಉಪದೇಶ ಮಾಡಿರುವೆನು. ಅದು ಓಂಕಾರ ರೂಪದಿಂದ ಪ್ರಸಿದ್ಧವಾಗಿರುವದು. ಎಲ್ಲರಿಗಿಂತ ಮುಂಚಿತವಾಗಿ ನನ್ನ ಮುಖದಿಂದ 'ಓಂ' ಪ್ರಕಟವಾಯಿತು. ಅದು ನನ್ನ ಸ್ವರೂಪ ಬೋಧ ಮಾಡುವಂತಹದಿರುವದು. ಓಂ ಕಾರವು ವಾಚಕವಾಗಿದ್ದು, ನಾನು ವಾಚ್ಯನಿರುವೆನು. ಈ ಮಂತ್ರವು ನನ್ನ ಸ್ವರೂಪವಾಗಿದೆ. ಓಂಕಾರವನ್ನು ನಿರಂತರ ಶ್ರವಣ ಮಾಡಿದರೆ ನನ್ನ ಸ್ಮರಣೆ ಮಾಡಿದಂತಾಗುವದು. ಈ ಪ್ರಣವ ಮಂತ್ರದಿಂದ 'ಓಂ ನಮಃ ಶಿವಾಯ' ಪಂಚಾಕ್ಷರ ಮಂತ್ರದಿಂದ ಮಾತೃಕಾ ವರ್ಣಗಳು ಪ್ರಕಟವಾಗಿವೆ, ಅದರಿಂದ ತ್ರಿಪದಾ ಗಾಯತ್ರಿ ಮಂತ್ರವು ಪ್ರಾಕಟ್ಯಗೊಂಡಿದೆ. ಗಾಯತ್ರಿ ಮಂತ್ರದಿಂದ ಸಕಲ ವೇದಗಳು ಪ್ರಕಟವಾಗಿರುವವು.

ಬ್ರಹ್ಮನೂ ವಿಷ್ಣುವೂ ದೇವೇಶ್ವರ ಜಗದ್ಗುರು ಶಂಭುವಿನ ಈ ವಿವರಣೆಯಿಂದ ಅತ್ಯಂತ ಸಂತುಷ್ಟರಾದರು. ಆಗ ಅವರು ಕೈಜೋಡಿಸಿ ಮಹೇಶ್ವರನನ್ನು ಸ್ತೋತ್ರ ಮಾಡಿದರು.

ಬ್ರಹ್ಮ ವಿಷ್ಣು ನಮೋ ನಿಷ್ಕಲರೂಪಾಯ ನಮೋ ನಿಷ್ಕಲತೇಜಸೇ।

ನಮಃ ಸಕಲ ನಾಥಾಯ ನಮಸ್ತೇ ಸಕಲಾತ್ಮನೇ॥

ನಮಃ ಪ್ರಣವವಾಚ್ಯಾಯ ನಮಃ ಪ್ರಣವಲಿಂಗಿನೇ।

ನಮಃ ಸೃಷ್ಟ್ಯಾದಿ ಕರ್ತ್ರೇ ಚ ನಮಃ ಪಂಚಮುಖಾಯ ತೇ॥

ಪಂಚ ಬ್ರಹ್ಮಸ್ವರೂಪಾಯ ಪಂಚ ಕೃತ್ಯಾಯ ತೇ ನಮಃ।

ಆತ್ಮನೇ ಬ್ರಹ್ಮಣೇ ತುಭ್ಯಮನಂತಗುಣಶಕ್ತಯೇ॥

ಸಕಲಾಕಲ ರೂಪಾಯ ಶಂಭವೇ ಗುರವೇ ನಮಃ।

ಬ್ರಹ್ಮನ ಹಾಗೂ ವಿಷ್ಣುವಿನ ಸ್ತೋತ್ರದಿಂದ ಮಹೇಶ್ವರನು ಪ್ರಸನ್ನ ನಾದನು. ಅವನು ತನ್ನ ಆತ್ಮಲಿಂಗವನ್ನು ಓಂಕಾರ ಮಂತ್ರದಿಂದಲೂ ಮೂರ್ತಿಯನ್ನು ಪಂಚಾಕ್ಷರ ಮಂತ್ರದಿಂದಲೂ ಪೂಜಿಸಬೇಕೆಂದು ಅವರಿಗೆ ಉಪದೇಶಿಸಿ ಅಂತರ್ಧಾನನಾದನು. ತರುವಾಯ ಶಿವನ ಉಪದೇಶದಿಂದ ಸಂತುಷ್ಟರಾದ ವಿಷ್ಣು, ಬ್ರಹ್ಮರು ತಮ್ಮ ತಮ್ಮ ಲೋಕಗಳಿಗೆ ಬಿಜಯಂಗೈದರು.

ಶೌನಕಾದಿಮುನಿಗಳು ಶಿವಲಿಂಗದ ಸ್ಥಾಪನೆ, ಅದರ ಲಕ್ಷಣ, ಪೂಜನ ವಿಧಿ, ಶಿವಪದವನ್ನು ಪ್ರಾಪ್ತ ಮಾಡಿಕೊಡುವ ಸತ್ಕರ್ಮಗಳ ಬಗ್ಗೆ ವಿಚಾರಿಸಿದಾಗ ಸೂತ ಪುರಾಣಿಕ ಹೇಳತೊಡಗಿದನು : 'ಶೌನಕಾದಿ ಮಹರ್ಷಿಗಳೆ, ಪವಿತ್ರ ತೀರ್ಥ ಗಳಲ್ಲಿಯೂ ನದೀ ತಟದಲ್ಲಿಯೂ ಶಿವಲಿಂಗವನ್ನು ಸ್ಥಾಪಿಸಬೇಕು ಹಾಗೂ ನಿತ್ಯವೂ ಅದನ್ನು ಭಕ್ತಿ ಭಾವಗಳಿಂದ ಪೂಜಿಸಬೇಕು. ಪಾರ್ಥಿವ ದ್ರವ್ಯದಿಂದಾಗಲಿ, ಜಲಮಯ ದ್ರವ್ಯದಿಂದಾಗಲಿ, ತೈಜಸ ದ್ರವ್ಯದಿಂದಾಗಲಿ ಕಲ್ಪೋಕ್ತ ಲಕ್ಷಣಗಳಿಂದ ಯುಕ್ತವಾದ ಶಿವಲಿಂಗವನ್ನು ನಿರ್ಮಾಣ ಮಾಡಬೇಕು. ಉಪಾಸಕನು ನಿತ್ಯವೂ ಪಾರ್ಥಿವ ಲಿಂಗಪೂಜೆ ಮಾಡುವದರಿಂದ ಇಷ್ಟಾರ್ಥ ಫಲಸಿದ್ಧಿಯಾಗುವದು. ಸದ್ಯೋಜಾತಾದಿ ವೈದಿಕ ಮಂತ್ರಗಳಿಂದ ಶಿವಲಿಂಗದ ಐದು ಸ್ಥಾನಗಳಲ್ಲಿ ಕ್ರಮಶಃ ಪೂಜಿಸಬೇಕು.

ಓಂ ಸದ್ಯೋಜಾತಂ ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ।

ಭವೇ ಭವೇ ನಾತಿಭವೇ ಭವಸ್ವ ಮಾಂ ಭವೋದ್ಭವಾಯ ನಮಃ॥

ಓಂ ವಾಮದೇವಾಯ ನಮೋ ಜ್ಯೇಷ್ಠಾಯ ನಮಃ।

ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ।
ಕಲವಿಕರಣಾಯ ನಮಃ ಬಲವಿಕರಣಾಯ ನಮೋ
ಬಲಾಯ ನಮೋ ಬಲಪ್ರಮಥನಾಥಾಯ ನಮಃ ಸರ್ವಭೂತ
ದಮನಾಯ ನಮೋ ಮನೋನ್ಮಥಾಯ ನಮಃ ।
ಓಂ ಅಘೋರೇಭ್ಯೋಽಥ ಘೋರೇಭ್ಯೋ ಘೋರ ಘೋರ ತರೇಭ್ಯಃ
ಸರ್ವೇಭ್ಯಃ ಸರ್ವ ಶರ್ವೇಭ್ಯೋ ನಮಸ್ತೇಽಸ್ತು ರುದ್ರರೂಪೇಭ್ಯಃ ॥
ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ
ತನ್ನೋ ರುದ್ರಃ ಪ್ರಚೋದಯಾತ್ ।
ಓಂ ಈಶಾನಃ ಸರ್ವವಿದ್ಯಾನಾಂ ಈಶ್ವರಃ ಸರ್ವಭೂತಾನಾಂ
ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋಮೇಽಸ್ತು
ಸದಾಶಿವೋಮ್ ॥

'ಈ ಮಂತ್ರಗಳನ್ನು ಶಿವಪೂಜೆಗಾಗಿ ಉಪಯೋಗಿಸಬೇಕು. ತರುವಾಯ ಭಗವಾನ್ ಶಂಕರಲಿಂಗನಿಗೆ ವಂದಿಸಿ, ಒಂದೇ ಮನಸ್ಸಿನಿಂದ ಅವನ ಧ್ಯಾನ ಮಾಡಬೇಕು. ಲಿಂಗಪ್ರತಿಷ್ಠೆಗಾಗಿ ಪ್ರಣವ ಮಂತ್ರವನ್ನು ಉಪಯೋಗಿಸಬೇಕು. ಮಹಾದೇವನ ಮೂರ್ತಿಪ್ರತಿಷ್ಠೆಗಾಗಿ ಪಂಚಾಕ್ಷರ ಮಂತ್ರದ ಉಪಯೋಗ ಮಾಡಬೇಕು. ಮೃತ್ತಿಕೆಯಿಂದಾಗಲಿ, ಪಿಷ್ಟದಿಂದಾಗಲಿ, ಅನ್ನದಿಂದಾಗಲಿ ಪಾರ್ಥಿವ ಲಿಂಗವನ್ನು ರಚಿಸಬಹುದು. ಪ್ರತಿದಿನವೂ ಹತ್ತು ಸಹಸ್ರ ಪಂಚಾಕ್ಷರ ಮಂತ್ರವನ್ನು ಜಪಿಸುವವನು ಶಿವಪದವನ್ನು ಪ್ರಾಪ್ತ ಮಾಡಿಕೊಳ್ಳುವನು. ದಿನಾಲು ಒಂದು ಸಾವಿರದಂತೆ ಎಂಟು ಬಾರಿ ಗಾಯತ್ರಿ ಜಪ ಮಾಡಿದರೆ ಶಿವಪದವು ಪ್ರಾಪ್ತ ವಾಗುವದು.'

ಶೌನಕಾದಿ ಋಷಿಗಳು–ಸರ್ವಜ್ಞನಾದ ರೋಮಹರ್ಷಣ ಪುರಾಣಿಕನೇ, ಸ್ತ್ರೀ–ಪುರುಷರಿಗೆ ಶಿವಪದವನ್ನು ಪ್ರಾಪ್ತಿ ಮಾಡಿಕೊಡುವ ಪುಣ್ಯಕ್ಷೇತ್ರಗಳು ಯಾವವಿರುವವು ?

ಸೂತಪುರಾಣಿಕ–ಮಹರ್ಷಿಗಳಿಗೆ, ಭಗವಾನ್ ಶಿವನು ಅಲ್ಲಲ್ಲಿಯ ನಿವಾಸಿಗಳಿಗಾಗಿ ವಿಭಿನ್ನ ಸ್ಥಾನಗಳಲ್ಲಿ ಶಿವಕ್ಷೇತ್ರಗಳನ್ನು ನಿರ್ಮಿಸಿರುವನು. ಈ ಪುಣ್ಯ

ಕ್ಷೇತ್ರಗಳು ಶಿವಭಕ್ತರಿಗೆ ಮೋಕ್ಷಪ್ರದಾನ ಮಾಡುವಂತಹವುಗಳಿರುವವು. ಅನೇಕ ಕ್ಷೇತ್ರಗಳಲ್ಲಿ ಋಷಿಗಳು ಅಲ್ಲಿ ತಮ್ಮ ವಾಸಸ್ಥಾನಗಳನ್ನು ಮಾಡಿಕೊಂಡು ಅನುಗ್ರಹೀತ ಮಾಡಿರುವರು. ಆದುದರಿಂದ ಅವುಗಳಲ್ಲಿ ತೀರ್ಥತ್ವವು ಪ್ರಕಟವಾಗಿದೆ. ಅನೇಕ ತೀರ್ಥಕ್ಷೇತ್ರಗಳು ಲೋಕರಕ್ಷಣೆಗಾಗಿ ಸ್ವಯಂ ಪ್ರಾದುರ್ಭೂತವಾಗಿವೆ. ತೀರ್ಥಕ್ಷೇತ್ರಗಳಿಗೆ ಹೋದ ಭಕ್ತನು ಸ್ನಾನ, ದಾನ, ಜಪಗಳನ್ನು ನೆರವೇರಿಸಬೇಕು. ಅಲ್ಲಿ ಪುಣ್ಯ ಕಾರ್ಯಗಳನ್ನು ಮಾಡಬೇಕು.

**ಕ್ಷೇತ್ರೇ ಪಾಪಸ್ಯ ಕಾರಣಂ ದೃಢಂ ಭವತಿ ಭೂಸುರಾಃ ।**
**ಪುಣ್ಯಕ್ಷೇತ್ರೇ ನಿವಾಸೇ ಹಿ ಪಾಪಮಣ್ವಪಿ ನಾಚರೇತ್ ॥**

(ಶಿ.ಪು.ವಿ. ೧೨-೭)

ಅನ್ಯ ಕ್ಷೇತ್ರಗಳಲ್ಲಿ ಮಾಡಿದ ಪಾಪವು ಪುಣ್ಯಕ್ಷೇತ್ರಗಳಲ್ಲಿ ನಾಶವಾಗುವದು. ಪುಣ್ಯಕ್ಷೇತ್ರಗಳಲ್ಲಿ ಮಾಡಿದ ಪಾಪವು ವಜ್ರಲೇಪವಾಗುವದು. ಕ್ಷೇತ್ರದಲ್ಲಿ ಪಾಪದ ಕಾರಣವು ದೃಢವಾಗುವದು. ಭೂಸುರರು ಪುಣ್ಯಕ್ಷೇತ್ರ ನಿವಾಸ ಮಾಡಿರುವಾಗ ಅಣುಮಾತ್ರವಾದರೂ ಪಾಪಾಚರಣೆ ಮಾಡಬಾರದು.

ಸಿಂಧು, ಸರಸ್ವತಿ, ಶತದ್ರು (ಸತಲಜ್), ಗಂಗಾ, ಯಮುನಾ, ಶೋಣ, ಭದ್ರ, ಮಹಾನದಿ, ನರ್ಮದಾ, ಗೋದಾವರಿ, ಕೃಷ್ಣವೇಣಿ, ತುಂಗಭದ್ರಾ, ಕಾವೇರಿ ಮೊದಲಾದ ಪವಿತ್ರ ನದಿಗಳು ಭಾರತದಲ್ಲಿರುವವು. ಅವುಗಳಲ್ಲಿ ಸ್ನಾನ, ದಾನ ಮಾಡುವದರಿಂದ ಸ್ತ್ರೀ-ಪುರುಷರಿಗೆ ಒಳ್ಳೆಯ ಗತಿಯು ದೊರಕುವದು. ಭಾರತದ ತುಂಬ ಅಸಂಖ್ಯ ಶಿವಕ್ಷೇತ್ರಗಳಿವೆ. ಅಲ್ಲಿಯ ಶಿವನ ಪೂಜೆ, ಶಿವ ಜಪಗಳು ಮನುಷ್ಯನ ಪಾತಕಗಳನ್ನು ನಾಶ ಮಾಡುವವು.

ಸದಾಚಾರ ಪಾಲನೆ ಮಾಡುವ ವಿದ್ವಾನ್ ಬ್ರಾಹ್ಮಣನು ವಾಸ್ತವವಾಗಿ ಬ್ರಾಹ್ಮಣನೆಂದು ಕರೆಯಿಸಿಕೊಳ್ಳಲು ಅಧಿಕಾರಿಯಾಗುವನು. ವೇದೋಕ್ತ ಆಚಾರ ಮಾಡುವ ಹಾಗೂ ವೇದಾಭ್ಯಾಸ ಮಾಡಿದ ಬ್ರಾಹ್ಮಣನಿಗೆ ವಿಪ್ರನೆಂಬ ಸಂಜ್ಞೆಯಿರುವದು. ಸದಾಚಾರ, ವೇದಾಚಾರ ಹಾಗೂ ವಿದ್ಯೆ ಇವುಗಳಲ್ಲಿ ಒಂದೊಂದು ಗುಣದಿಂದ ಯುಕ್ತನಾಗಿದ್ದರೆ ದ್ವಿಜನೆಂದು ಅನ್ನುವರು. ತಕ್ಕಮಟ್ಟಿಗೆ ಆಚಾರ, ವೇದಾಧ್ಯಯನವಿದ್ದು, ರಾಜನ ಸೇವಕನಾಗಿದ್ದರೆ ಅವನಿಗೆ ಕ್ಷತ್ರಿಯ ಬ್ರಾಹ್ಮಣನೆನ್ನುವರು. ಕೃಷಿ-ವಾಣಿಜ್ಯಗಳನ್ನು ಮಾಡುವ ಅಲ್ಪಾಚಾರ,

ಅಲ್ಪಾಧ್ಯಯನವಿದ್ದ ಬ್ರಾಹ್ಮಣನಿಗೆ ವೈಶ್ಯ ಬ್ರಾಹ್ಮಣನೆನ್ನುವರು. ಕೃಷಿಯನ್ನು ತನ್ನ ಕೈಯಿಂದಲೇ ಮಾಡುತ್ತ ಉಪಜೀವನ ಮಾಡುವ ಬ್ರಾಹ್ಮಣನಿಗೆ ಶೂದ್ರ ಬ್ರಾಹ್ಮಣನೆನ್ನುವರು. ಬೇರೆಯವರ ದೋಷವನ್ನೇ ನೋಡುವವನು, ಪರರಿಗೆ ದ್ರೋಹ ಮಾಡುವವನು ಚಾಂಡಾಲ ದ್ವಿಜನೆನಿಸಿಕೊಳ್ಳುವನು. ಪೃಥ್ವೀ ಪರಿಪಾಲನೆ ಮಾಡುವವನು ರಾಜನು. ರಾಜತ್ವಹೀನರು ಕ್ಷತ್ರಿಯರೆನಿಸಿಕೊಳ್ಳು ವರು. ವೈಶ್ಯರಲ್ಲಿ ಕ್ರಯ, ವಿಕ್ರಯ ಮಾಡುವವರು ವೈಶ್ಯರೆನಿಸುವರು. ಉಳಿದವರು ವಣಿಕರೆನಿಸುವರು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ಸೇವೆಯಲ್ಲಿರುವವರು ಶೂದ್ರರು. ಅವರು ಕೃಷಿಕರ್ಮ ಮಾಡುತ್ತಿದ್ದರೆ ವೃಷಲರೆನಿಸಿಕೊಳ್ಳುತ್ತಾರೆ. ಸೇವೆ, ಶಿಲ್ಪ, ಕೃಷಿಗಳನ್ನು ಹೊರತುಪಡಿಸಿ, ಭಿನ್ನವೃತ್ತಿಯನ್ನು ಆಶ್ರಯಿಸಿದ ಶೂದ್ರನಿಗೆ ದಸ್ಯು ಎಂದೆನ್ನುವರು.

ರಾತ್ರಿಯ ಕೊನೆಯ ಪ್ರಹರಕ್ಕೆ ಉಷಃಕಾಲವೆನ್ನುವರು. ದ್ವಿಜನು ಉಷಃಕಾಲದಲ್ಲಿದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ನದಿ, ಪುಷ್ಕರಣಿಗಳಲ್ಲಿ ಸ್ನಾನ ಮಾಡಿ ಧೌತವಸ್ತ್ರವನ್ನು ಐದು ಕಚ್ಚೆಗಳಿಂದ ಧಾರಣ ಮಾಡಬೇಕು. ತರುವಾಯ 'ಅಗ್ನಿರಿತಿ ಭಸ್ಮ' ಮಂತ್ರದಿಂದ ತ್ರಿಪುಂಡ್ರ ಧಾರಣ ಮಾಡಬೇಕು. ತರುವಾಯ ಸಂಧ್ಯೋಪಾಸನೆ ಮಾಡಬೇಕು. ಸೂರ್ಯದೇವನಿಗೆ ಅರ್ಘ್ಯಕೊಟ್ಟು, ಗಾಯತ್ರಿ ಮಂತ್ರದ ಜಪ ಮಾಡಬೇಕು. ಪ್ರಣವ ಮಂತ್ರವನ್ನೂ ಜಪಿಸಬೇಕು.

ಶ್ರೀಮನ್ಮಹಾದೇವನು ಲೋಕೋಪಕಾರಕ್ಕಾಗಿ ಏಳು ವಾರಗಳನ್ನು ಕಲ್ಪಿಸಿದನು. ಸೂರ್ಯನು ಆರೋಗ್ಯವನ್ನೂ ಚಂದ್ರಮನು ಸಂಪತ್ತನ್ನೂ ಕೊಡುವನು. ಮಂಗಳನು ವ್ಯಾಧಿಯನ್ನು ನಿವಾರಿಸುವನು. ಬುಧನು ಪುಷ್ಟಿಯನ್ನು ಕೊಡುವನು. ಬೃಹಸ್ಪತಿಯು ಆಯುಷ್ಯವನ್ನು ವರ್ಧಿಸುವನು. ಶುಕ್ರನು ಭೋಗ ಕೊಡುವನು. ಶನೈಶ್ವರನು ಮೃತ್ಯುವನ್ನು ನಿವಾರಿಸುವನು. ಈ ಏಳು ವಾರಗಳ ಕ್ರಮಶಃ ಫಲವು ಹೇಳಲ್ಪಟ್ಟಿದೆ. ಆ ಫಲಗಳು ಆ ಆ ದೇವತೆಗಳ ಪ್ರೀತಿಯಿಂದ ಪ್ರಾಪ್ತವಾಗುವವು. ಅನ್ಯ ದೇವತೆಗಳ ಪೂಜಾಫಲವನ್ನು ಕೊಡುವವನು ಭಗವಾನ್ ಶಿವನೇ ಆಗಿರುವನು. ಆಯಾ ದೇವತೆಗಳನ್ನು ಜಪದಿಂದ ಪೂಜಿಸುವದು, ಹೋಮ–ಹವನ ಮಾಡುವದು, ದಾನ ಮಾಡುವದು, ತಪಾಚರಣೆ ಮಾಡುವದು, ಷೋಡಶೋಪಚಾರ ಪೂಜೆ ಮಾಡುವದು. ಈ ಐದು ಪ್ರಕಾರಗಳಿಂದ ಪೂಜಿಸುವದರಿಂದ ಫಲಪ್ರಾಪ್ತಿಯಾಗುವದು. ಪಾರ್ಥಿವ ಪ್ರತಿಮೆಗಳ ಪೂಜೆ

ಬಿಂದಲೂ ಮನೋರಥವು ಸಿದ್ಧಿಸುವದು. ಗಣೇಶ, ಸೂರ್ಯ, ವಿಷ್ಣು, ದುರ್ಗಾ, ಶಿವ ಮೊದಲಾದ ದೇವತೆಗಳ ಪ್ರತಿಮೆಯನ್ನು ಷೋಡಶೋಪಚಾರದಿಂದ ಪೂಜಿಸಬೇಕು ಸ್ತ್ರೀಯರಿಗೂ ಪೂಜಾಧಿಕಾರವಿರುವದು. ವೇದಮಾತಾ ಗಾಯತ್ರಿಯ ಜಪದಿಂದಲೂ ಪಂಚಾಕ್ಷರ ಮಂತ್ರ ಜಪದಿಂದಲೂ ಸದ್ಗತಿಯು ದೊರೆಯುವದು.

ಚರಾಚರ ಜಗತ್ತು ಬಿಂದುನಾದಸ್ವರೂಪವಾಗಿರುವದು. ಬಿಂದುವು ಶಕ್ತಿಯು, ನಾದವು ಶಿವ. ಈ ಬಗೆಯಿಂದ ಜಗತ್ತು ಶಿವಶಕ್ತಿಸ್ವರೂಪವಾಗಿರುವದು. ನಾದವು ಬಿಂದುವಿನ, ಬಿಂದುವು ಜಗತ್ತಿನ ಆಧಾರವಾಗಿರುವದು. ಬಿಂದು ನಾದಯುಕ್ತವಾದುದೆಲ್ಲ ಶಿವಸ್ವರೂಪವಾಗಿದೆ. ಯಾಕೆಂದರೆ ಅದು ಎಲ್ಲದರ ಆಧಾರವಾಗಿದೆ. ಆಧಾರದಲ್ಲಿ ಆ ಧ್ಯೇಯದ ಸಮಾವೇಶವು ಇಲ್ಲವೆ ಲಯವು ಆಗುವದು. ಇದೇ ಸಕಲೀಕರಣವು. ಸಕಲೀಕರಣದ ಸ್ಥಿತಿಯಿಂದ ಸೃಷ್ಟಿ ಕಾಲದಲ್ಲಿ ಜಗತ್ತಿನ ಪ್ರಾದುರ್ಭಾವವಾಗುವದು. ಶಿವಲಿಂಗವು ಬಿಂದುನಾದ ಸ್ವರೂಪವಾಗಿದೆ. ಆದುದರಿಂದ ಅದು ಜಗತ್ತಿನ ಕಾರಣವೆಂದು ಹೇಳಲಾಗಿದೆ. ಬಿಂದು ದೇವಿಯು, ನಾದವು ಶಿವನು. ಇವರಿಬ್ಬರ ರೂಪವು ಶಿವಲಿಂಗವಾಗಿದೆ. ಬಿಂದುರೂಪೆಯಾದ ಉಮೆಯು ಮಾತೆಯು; ನಾದರೂಪ ಭಗವಾನ್ ಶಿವನು ಪಿತೃವು.

ಮಾತಾ ದೇವೀ ಬಿಂದುರೂಪಾ ನಾದರೂಪಃ ಶಿವಃ ಪಿತಾ ॥
ಪೂಜಿತಾಭ್ಯಾಂ ಪಿತೃಭ್ಯಾಂ ತು ಪರಮಾನಂದ ಏವ ಹಿ ।
ಪರಮಾನಂದಲಾಭಾರ್ಥಂ ಶಿವಲಿಂಗಂ ಪ್ರಪೂಜಯೇತ್ ॥
ಸಾ ದೇವೀರ್ಜಗತಾಂ ಮಾತಾ ಸ ಶಿವೋ ಜಗತಃ ಪಿತಾ ।
ಪಿತ್ರೋಃ ಶುಶ್ರೂಷಕೇ ನಿತ್ಯಂ ಕೃಪಾಧಿಕ್ಯಂ ಹಿ ವರ್ಧತೇ ॥

(ಶಿ. ಪು. ೧೬/೯೧-೯೩)

ಶೌನಕಾದಿ ಋಷಿಗಳು-ಮಹಾತ್ಮಾ, ಷಡ್ಲಿಂಗ ಸ್ವರೂಪ ಪ್ರಣವದ ಮಹಾತ್ಮೆ, ಶಿವಪೂಜನದ ಪ್ರಕಾರವನ್ನು ತಿಳಿಸಬೇಕು.

ಸೂತ ಪುರಾಣಿಕ-ಶೌನಕಾದಿಋಷಿಗಳೆ, ನೀವೆಲ್ಲರೂ ತಪಸ್ಸಿನ ಒಡೆಯರು. ನೀವು ದೊಡ್ಡ ಸುಂದರವಾದ ಪ್ರಶ್ನೆಯನ್ನು ಮಾಡಿದಿರಿ. ಈ ಪ್ರಶ್ನೆಗೆ

ಸರಿಯಾದ ಉತ್ತರವನ್ನು ಶ್ರೀಮನ್ಮಹಾದೇವನು ತಿಳಿದಿರುವನು. ಆದರೂ ಶಿವಕೃಪೆಯಿಂದ ನಾನು ಈ ವಿಷಯದ ಬಗ್ಗೆ ಶಕ್ಯಾನುಸಾರ ವರ್ಣನೆ ಮಾಡುವೆನು. ಭಗವಾನ್ ಶಿವನು ನಮ್ಮೆಲ್ಲರ ರಕ್ಷಣೆಯ ಭಾರವನ್ನು ಗ್ರಹಣ ಮಾಡಿರುವನು. ಪ್ರಣವ ಮಂತ್ರಜಪದಿಂದ ಉಪಾಸಕನು ಮೋಕ್ಷವನ್ನು ಹೊಂದುವನು. ಪ್ರಣವ ಮಂತ್ರದಲ್ಲಿ ಸ್ಥೂಲ, ಸೂಕ್ಷ್ಮ ಎಂಬ ಎರಡು ಭೇದಗಳು. 'ಓಂ' ಇದು ಸೂಕ್ಷ್ಮ ಪ್ರಣವವು. 'ನಮಃ ಶಿವಾಯ' ಎಂಬುದು ಸ್ಥೂಲ ಪ್ರಣವವು. ಜೀವನ್ಮುಕ್ತಿ ಪುರುಷನಿಗಾಗಿ ಸೂಕ್ಷ್ಮ ಪ್ರಣವ ಜಪದ ವಿಧಾನವಿದೆ. ಅವನಿಗೆ ಈ ಜಪದ ಅವಶ್ಯಕತೆಯಿರದಿದ್ದರೂ ದೇಹಧಾರಣ ಮಾಡಿರುವ ವರೆಗೆ ಅವನು ಸೂಕ್ಷ್ಮ ಪ್ರಣವಮಂತ್ರದ ಜಪವನ್ನೂ, ಅದರ ಅರ್ಥಭೂತವಾದ ಪರಮಾತ್ಮನ ಅನುಸಂಧಾನವನ್ನೂ ಮಾಡುತ್ತಿರುವನು. ಒಂಭತ್ತು ಕೋಟಿ ಪ್ರಣವ ಜಪ ಮಾಡಿದರೆ ಮನುಷ್ಯನು ಶುದ್ಧನಾಗುವನು. ಒಂದೊಂದು ತತ್ವಕ್ಕೂ ಒಂಭತ್ತು ಕೋಟಿ ಜಪ ಮಾಡಿದರೆ ಗಂಧ, ರಸ, ರೂಪ, ಸ್ಪರ್ಶ, ಶಬ್ದ ಇವುಗಳ ಮೇಲೆ ವಿಜಯ ಹೊಂದುವನು. ಮತ್ತೆ ಒಂಭತ್ತು ಕೋಟಿ ಜಪ ಮಾಡಿದರೆ ಅಹಂಕಾರವನ್ನು ಜಯಿಸುವನು. ಒಟ್ಟು ಒಂದು ನೂರಾ ಎಂಟು ಕೋಟಿ ಜಪ ಮಾಡಿದರೆ ಮನುಷ್ಯನು ಜೀವನ್ಮುಕ್ತನಾಗುವನು. ಸದಾ ಕಾಲ ಪ್ರಣವ ಜಪವನ್ನೂ ಶಿವಧ್ಯಾನವನ್ನೂ ಮಾಡುತ್ತ ಮಾಡುತ್ತ ಸಮಾಧಿಯಲ್ಲಿ ಸ್ಥಿತನಾದ ಮಹಾಯೋಗಿ ಪುರುಷನು ಸಾಕ್ಷಾತ್ ಶಿವನಾಗಿರುವನು.

ಸಾಧಕನು ಐದು ಲಕ್ಷ ಪ್ರಣವ ಜಪ ಮಾಡಿದ ಬಳಿಕ ಭಗವಾನ್ ಶಿವನ ಪ್ರೀತ್ಯರ್ಥವಾಗಿ ಮಹಾಭಿಷೇಕ, ನೈವೇದ್ಯಗಳನ್ನು ನಿವೇದನೆ ಮಾಡಿ ಶಿವಭಕ್ತರನ್ನು ಪೂಜಿಸಬೇಕು. ಭಕ್ತರ ಪೂಜೆಯಿಂದ ಭಗವಾನ್ ಶಿವನು ಪ್ರಸನ್ನನಾಗುವನು. ಶಿವ ಹಾಗೂ ಶಿವಭಕ್ತರಲ್ಲಿ ಭೇದವಿಲ್ಲ. ಶಿವಭಕ್ತರು ಸಾಕ್ಷಾತ್ ಶಿವಸ್ವರೂಪರು. ಅವರು ಶಿವಮಂತ್ರದ ಧಾರಣಮಾಡಿ ಸಾಕ್ಷಾತ್ ಶಿವರೇ ಆಗಿರುವರು. ಶಿವಭಕ್ತರ ಶರೀರವು ಶಿವಸ್ವರೂಪವಾಗಿರುವದು. ಆದುದರಿಂದ ಜನರು ಅವರ ಸೇವೆಯಲ್ಲಿ ತತ್ಪರರಾಗಿರಬೇಕು. ಇವರು ವೇದಗಳ ಎಲ್ಲ ಕ್ರಿಯೆಗಳನ್ನು ಬಲ್ಲವರಾಗಿರುವರು. ಶಿವಭಕ್ತಳಾದ ಸ್ತ್ರೀಯು ದೇವೀ ಪಾರ್ವತಿಯ ಸ್ವರೂಪಳಾಗಿರುವಳು. ಅವಳು ಎಷ್ಟು ಪ್ರಣವ ಜಪ ಮಾಡುವಳೋ ಅಷ್ಟು ಅಷ್ಟು ದೇವಿಯ ಸಾನ್ನಿಧ್ಯವನ್ನು ಪ್ರಾಪ್ತಮಾಡಿಕೊಳ್ಳುವಳು. ಸಾಧಕನು ಸ್ವಯಂ ಶಿವಸ್ವರೂಪನಾಗಿ ಪರಾಶಕ್ತಿಯನ್ನು

ಪೂಜಿಸಬೇಕು. ಶಿವಲಿಂಗವನ್ನು ಶಿವನೆಂದೂ, ತನ್ನನ್ನು ಶಕ್ತಿ ಸ್ವರೂಪನೆಂದೂ, ಶಿವಲಿಂಗವನ್ನು ನಾದರೂಪವೆಂದೂ, ಶಕ್ತಿಯನ್ನು ಬಿಂದುರೂಪವೆಂದೂ ಭಾವಿಸಿ ಪೂಜಿಸುವವನು ಶಿವರೂಪನಾಗುವನು. ಶಿವಭಕ್ತರ ಸೇವೆ ಮಾಡಿ ಅವರನ್ನು ಸಂತುಷ್ಟಗೊಳಿಸುವವನಿಗೆ ಶಿವನು ಪ್ರಸನ್ನನಾಗುವನು. ಐದು, ಹತ್ತು, ನೂರು ಸಪತ್ನೀಕ ಶಿವಭಕ್ತರನ್ನು ಆಮಂತ್ರಿಸಿ ಭೋಜನಾದಿಗಳಿಂದ ಅವರನ್ನು ಸಮಾದರಿಸ ಬೇಕು. ಅವರನ್ನು ಶಿವಶಕ್ತಿ ಸ್ವರೂಪರೆಂದು ನಿಷ್ಕಪಟಭಾವದಿಂದ ಪೂಜಿಸಬೇಕು. ಹೀಗೆ ಮಾಡುವ ಪುರುಷನು ಪುನಃ ಭೂತಲದಲ್ಲಿ ಜನ್ಮ ಹೊಂದುವದಿಲ್ಲ.

ಶೌನಕಾದಿ ಋಷಿಗಳು–ಸರ್ವಜ್ಞರಲ್ಲಿ ಶ್ರೇಷ್ಠನಾದ ಸೂತಪುರಾಣಿಕನೆ, ಬಂಧನ, ಮೋಕ್ಷದ ಸ್ವರೂಪವೇನಿರುವದೆಂಬುದನ್ನು ತಿಳಿಸಬೇಕು.

ಸೂತ ಪುರಾಣಿಕ–ಮಹರ್ಷಿಗಳೆ, ಬಂಧನ–ಮೋಕ್ಷಗಳ ಸ್ವರೂಪವನ್ನೂ ಮೋಕ್ಷದ ಉಪಾಯವನ್ನೂ ಹೇಳುವೆನು. ನೀವು ಆದರಪೂರ್ವಕವಾಗಿ ಕೇಳಿರಿ. ಅಷ್ಟ ಬಂಧನಗಳಿಂದ ಕಟ್ಟಿ ಹಾಕಲ್ಪಟ್ಟ ಜೀವವು ಬದ್ಧ ಜೀವವೆನಿಸುವದು. ಈ ಬಂಧನಗಳಿಂದ ಬಿಡುಗಡೆ ಹೊಂದಿದ ಜೀವವು ಮುಕ್ತ ಜೀವವೆನಿಸುವದು. ಪ್ರಕೃತಿ ಮೊದಲಾದವುಗಳನ್ನು ವಶಮಾಡಿಕೊಳ್ಳುವದೇ ಮೋಕ್ಷವು. ಬಂಧನವು ಆಗಂತುಕವು. ಮೋಕ್ಷವು ಸ್ವತಃ ಸಿದ್ಧವು. ಬದ್ಧಜೀವವು ಬಂಧನದಿಂದ ಮುಕ್ತವಾದರೆ ಅದು ಮುಕ್ತ ಜೀವವು. ಪ್ರಕೃತಿ, ಬುದ್ಧಿ, ತ್ರಿಗುಣಾತ್ಮಕ ಅಹಂಕಾರ, ಐದು ತನ್ಮಾತ್ರೆಗಳು, ಇವುಗಳಿಗೆ ಜ್ಞಾನಿಗಳು ಪ್ರಕೃತ್ಯಾದ್ಯಷ್ಟಕವೆಂದು ಹೇಳುವರು. ಪ್ರಕೃತ್ಯಾದಿ ಅಷ್ಟ ತತ್ವಗಳ ಸಮೂಹದಿಂದ ದೇಹವು ಉತ್ಪನ್ನವಾಗಿರುವದು. ಅದು ಕರ್ಮಗಳಿಂದ ನೂತನ ದೇಹವನ್ನು ಪ್ರಾಪ್ತಮಾಡಿಕೊಳ್ಳುವದು, ಹೀಗೆ ಮೇಲಿಂದ ಮೇಲೆ ಜನ್ಮ ಕರ್ಮಗಳಾಗುತ್ತಿರುವವು. ಶರೀರವನ್ನು ಸ್ಥೂಲ, ಸೂಕ್ಷ್ಮ, ಕಾರಣಗಳ ಭೇದದಿಂದ ಮೂರು ಪ್ರಕಾರವೆಂದು ಭಾವಿಸಬೇಕು. ಸ್ಥೂಲಶರೀರವು ಜಾಗ್ರತಾವಸ್ಥೆಯಲ್ಲಿ ವ್ಯವಹಾರ ಮಾಡುವಂಥದು. ಸೂಕ್ಷ್ಮಶರೀರವು ಜಾಗ್ರತ ಹಾಗೂ ಸ್ವಪ್ನಾವಸ್ಥೆಯಲ್ಲಿ ಇಂದ್ರಿಯಭೋಗ ಮಾಡುವಂತಹದು, ಕಾರಣ ಶರೀರವು ಸುಷುಪ್ತಾವಸ್ಥೆಯಲ್ಲಿ ಆತ್ಮಾನಂದದ ಅನುಭೂತಿಯನ್ನು ಮಾಡು ವಂತಹದು ಆಗಿರುವದು. ಜೀವವು ಪ್ರಾರಬ್ಧಾನುಸಾರ ಸುಖ–ದುಃಖಗಳನ್ನು ಅನುಭವಿಸುವದು. ಕರ್ಮಪಾಶದಿಂದ ಬಂಧಿತವಾದ ಜೀವವು ತನ್ನ ತ್ರಿವಿಧ

ಶರೀರಗಳಿಂದ ಆಗುವ ಶುಭಾಶುಭ ಕರ್ಮಗಳ ದ್ವಾರವಾಗಿ ಯಾವಾಗಲೂ ಚಕ್ರದಂತೆ ಪರಿಭ್ರಮಣ ಮಾಡುತ್ತಿರುವದು. ಈ ಚಕ್ರಾಕಾರ ಭ್ರಮಣದ ನಿವೃತ್ತಿಗಾಗಿ ಚಕ್ರಕರ್ತನ ಸ್ತವನ, ಆರಾಧನೆಗಳನ್ನು ಮಾಡಬೇಕು.

ಶೌನಕಾದಿ ಮುನಿಗಳು–ಸರ್ವಜ್ಞನಾದ ಮಹಾತ್ಮಾ, ಪಾರ್ಥಿವಲಿಂಗದ ನಿರ್ಮಾಣದ ಹಾಗೂ ಪೂಜಾ ವಿಧಾನಗಳನ್ನು ತಿಳಿಸಬೇಕು.

ಸೂತಪುರಾಣಿಕ–ಶೌನಕಾದಿ ಮಹರ್ಷಿಗಳೆ, ಪಾರ್ಥಿವಲಿಂಗದ ಪೂಜೆಯು ಭೋಗ, ಮೋಕ್ಷಗಳನ್ನು ಕೊಡುವಂತಹದಿರುವದು. ಆಹ್ನಿಕ ಸೂತ್ರದಲ್ಲಿ ಹೇಳಿದಂತೆ ವಿಧಿಪೂರ್ವಕವಾಗಿ ಸ್ನಾನ, ಸಂಧ್ಯೋಪಾನೆಗಳನ್ನು ನೆರವೇರಿಸಿ, ಬ್ರಹ್ಮ ಯಜ್ಞ ಮಾಡಬೇಕು. ದೇವತರ್ಪಣ, ಪಿತೃ ತರ್ಪಣ ಮಾಡಬೇಕು. ತರುವಾಯ ಪಾರ್ಥಿವಲಿಂಗ ಪೂಜೆಯನ್ನು ವೇದೋಕ್ತವಿಧಿಯಿಂದ ನೆರವೇರಿಸಬೇಕು. ಪಾರ್ಥಿವಲಿಂಗವನ್ನು ಶುದ್ಧ ಸ್ಥಾನದಲ್ಲಿಯ ಮೃತ್ತಿಕೆಯಿಂದ ನಿರ್ಮಾಣ ಮಾಡಬೇಕು. ಸ್ನಾನಾನಂತರದಲ್ಲಿ ಭಸ್ಮ, ರುದ್ರಾಕ್ಷಧಾರಣ ಮಾಡಿದ ಭಕ್ತನು ಸುಂದರವಾಗಿ ಪಾರ್ಥಿವ ಲಿಂಗದ ರಚನೆ ಮಾಡಬೇಕು. ಅನಂತರದಲ್ಲಿ 'ನಮಸ್ತೇ ರುದ್ರ ಮನ್ಯವ ಉತೋತ ಇಷವೇ ನಮಃ' ಎಂಬ ಮಂತ್ರದಿಂದ ಶಿವಲಿಂಗದ ಅಭಿಷೇಕ ಮಾಡಬೇಕು. ಪೂಜೆಯಾದ ಬಳಿಕ ಗುರುವು ಉಪದೇಶಿಸಿದ ಪಂಚಾಕ್ಷರಿ ಮಂತ್ರವನ್ನು ವಿಧಿಪೂರ್ವಕವಾಗಿ ಜಪಿಸಬೇಕು.

> ಬ್ರಾಹ್ಮಣೋ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಪ್ರತಿಲೋಮಜಃ ।
> ಪೂಜಯೇತ್ ಸತತಂ ಲಿಂಗಂ ತತ್ತನ್ಮಂತ್ರೇಣ ಸಾದರಂ ॥
> ಕಿಂ ಬಹೂಕ್ತೇನ ಮುನಯಃ ಸ್ತ್ರೀಣಾಮಪಿ ತಥಾನ್ಯತಃ ।
> ಅಧಿಕಾರೋಽಸ್ತಿ ಸರ್ವೇಷಾಂ ಶಿವಲಿಂಗಾರ್ಚನೇ ದ್ವಿಜಾಃ ॥
>
> (ಶಿ. ಪು. ವಿ. ೨೧, ೩೯–೪೦)

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು, ವಿಲೋಮಜರು ಮೊದಲಾದವರು ತಮ್ಮ ಅಧಿಕಾರಕ್ಕನುಗುಣವಾಗಿ ಶಿವಲಿಂಗ ಪೂಜನ ಮಾಡಬೇಕು, ಶಿವಲಿಂಗ ಪೂಜೆ ಮಾಡುವ ಅಧಿಕಾರವು ಸ್ತ್ರೀಯರಿಗೂ ಇರುವದು.

ಶೌನಕಾದಿ ಋಷಿಗಳು–ಮಹಾಭಾಗ, ವ್ಯಾಸಶಿಷ್ಯ ಸೂತಪುರಾಣಿಕನೆ,

ನೀನು ಶಿವನ ನಾಮಮಹಾತ್ಮೆ, ಭಸ್ಮಮಹಾತ್ಮೆ, ರುದ್ರಾಕ್ಷ ಮಹಾತ್ಮೆ, ಮೊದಲಾದವುಗಳನ್ನು ಪ್ರಸನ್ನತೆಯಿಂದ ಪ್ರತಿಪಾದನ ಮಾಡಬೇಕು.

ಸೂತಪುರಾಣಿಕ– ಶೌನಕಮಹರ್ಷಿಯೆ, ಶಿವನಾಮಜಪದಿಂದ ಸಮಸ್ತ ಕುಲದ ಉದ್ಧಾರವಾಗುವದು. ಶಿವನ ಸ್ತೋತ್ರ ಮಾಡುವವನನ್ನು ಪಾತಕಗಳು ಸ್ಪರ್ಶ ಮಾಡುವದಿಲ್ಲ. ಮನುಷ್ಯನು ಪ್ರಸನ್ನತೆಯಿಂದ ಶಿವಲಿಂಗದ ದರ್ಶನವನ್ನು ಹೊಂದುವನೋ ಅವನ ಸಮಸ್ತ ಪಾತಕಗಳು ನಾಶ ಹೊಂದುವವು. ಶಿವನಾಮ, ವಿಭೂತಿ, ರುದ್ರಾಕ್ಷ ಇವು ಮೂರೂ ತ್ರಿವೇಣಿಗೆ ಸಮಾನವಾಗಿ ಪುಣ್ಯಮಯ ವಾಗಿವೆ. ಭಗವಾನ್ ಶಿವನ ನಾಮವು ಗಂಗಾಸಮಾನವಿರುವದು. ವಿಭೂತಿಯನ್ನು ಯಮುನೆಯೆಂದು ಭಾವಿಸಿರುವರು. ರುದ್ರಾಕ್ಷವು ಸರಸ್ವತಿ ಎಂದು ಗ್ರಹಿಸಲ್ಪಟ್ಟಿದೆ. ಈ ಮೂರೂ ಶುಭತರವಸ್ತುಗಳ ದರ್ಶನದಿಂದ ತ್ರಿವೇಣೀ ಸ್ನಾನದ ಫಲವು ಲಭಿಸುವದು. ಶಿವನಾಮ ಜಪದಿಂದ ಮಾನವನು ಪಾವಿತ್ರ್ಯ ಹೊಂದುವನು. ಶಿವನಾಮಜಪದಲ್ಲಿ ವಿಶ್ವಾಸವಿದ್ದವನು ಆಚರಿಸಿದ ಧರ್ಮಗಳು ತತ್ಕಾಲದಲ್ಲಿ ಫಲದಾಯಕವಾಗುವವು.

ಮಹರ್ಷಿಗಳೆ, ಭಸ್ಮವು ಸಂಪೂರ್ಣ ಮಂಗಲದಾಯಕವಾಗಿರುವದು. ಭಸ್ಮಗಳಲ್ಲಿ ಮಹಾಭಸ್ಮ, ಸ್ವಲ್ಪ ಭಸ್ಮ ಎಂದು ಎರಡು ವಿಧವಾದ ಭಸ್ಮಗಳಿರುವವು. ಶ್ರೌತ, ಸ್ಮಾರ್ತ, ಲೌಕಿಕ ಎಂಬ ಭೇದಗಳು ಮಹಾಭಸ್ಮದಲ್ಲಿರುವವು. ದ್ವಿಜನು ವೈದಿಕ ಮಂತ್ರದಿಂದ ಭಸ್ಮಧಾರಣೆ ಮಾಡಬೇಕು. ತ್ರಿಪುಂಡ್ರ ಭಸ್ಮಧಾರಣೆಯಿಂದ ಮೋಕ್ಷವು ಲಭಿಸುವದು. ತ್ರಿಪುಂಡ್ರದ ಒಂದೊಂದು ರೇಖೆಗೆ ಒಂಭತ್ತು ದೇವತೆ ಗಳಿರುವರು.

ಪೂರ್ವಕಾಲದಲ್ಲಿ ಭಗವಾನ್ ಸದಾಶಿವನು ಲೋಕೋಪಕಾರಕ್ಕಾಗಿ ದೇವಿ ಪಾರ್ವತಿಯ ಸಮ್ಮುಖದಲ್ಲಿ ರುದ್ರಾಕ್ಷದ ವರ್ಣನೆ ಮಾಡಿದನು –

ಭಗವಾನ್ ಶಿವ– ಮಹೇಶ್ವರಿ ಶಿವೇ, ಪೂರ್ವಕಾಲದಲ್ಲಿ ನಾನು ಸಾವಿರ ದಿವ್ಯ ವರ್ಷಗಳವರೆಗೆ ತಪಾಚರಣೆ ಮಾಡಿದೆನು. ಆಗ ನನ್ನ ಮನವು ಪ್ರಕ್ಷುಬ್ಧ ವಾಯಿತು. ನಾನು ಎರಡೂ ಕಣ್ಣುಗಳನ್ನು ತೆರೆದೆನು. ನನ್ನ ಕಣ್ಣುಗಳಿಂದ ಅಶ್ರುಬಿಂದುಗಳು ಭೂಮಿಗೆ ಉದುರಿದವು. ಕೂಡಲೆ ಅಲ್ಲಿ ರುದ್ರಾಕ್ಷವೆಂಬ ವೃಕ್ಷಗಳು ಉತ್ಪನ್ನವಾದವು. ಆ ವೃಕ್ಷದಲ್ಲಿಯ ರುದ್ರಾಕ್ಷಗಳನ್ನು ನಾನು ವಿಷ್ಣು ಭಕ್ತರಿಗಾಗಿಯೂ ನಾಲ್ಕೂ ವರ್ಣದವರಿಗಾಗಿಯೂ ಹಂಚಿದೆನು. ಗೌಡದೇಶ,

ಮಥುರಾ, ಅಯೋಧ್ಯಾ, ಲಂಕಾ, ಮಲಯಾಚಲ, ಸಹ್ಯಗಿರಿ, ಕಾಶಿ ಮೊದಲಾದ ಸ್ಥಳಗಳಲ್ಲಿ ರುದ್ರಾಕ್ಷ ವೃಕ್ಷಗಳು ಬೆಳೆದವು. ಜಾತಿಭೇದವಿಲ್ಲದೆ ಎಲ್ಲ ಜಾತಿಯವರೂ ಎಲ್ಲ ವರ್ಣದವರೂ ಪವಿತ್ರವಾದ ರುದ್ರಾಕ್ಷವನ್ನು ಧರಿಸಬೇಕು.

ಮಹೇಶ್ವರಿ, ರುದ್ರಾಕ್ಷವು ನೆಲ್ಲಿಯಕಾಯಿಯ ಗಾತ್ರದ್ದೂ ಆಗುವದು; ಗುಂಜಾಫಲದಷ್ಟೂ ಆಗುವದು. ಅದು ಮನುಷ್ಯನ ಅನಿಷ್ಟವನ್ನು ನಿವಾರಣೆ ಮಾಡುವದು. ಪಾಪದ ನಿವಾರಣೆಗಾಗಿ ರುದ್ರಾಕ್ಷ ಧಾರಣ ಮಾಡಬೇಕು. ದಾರ ಪೋಣಿಸುವಂತೆ ತನ್ನಿಂದ ತಾನೇ ಛಿದ್ರವಾದ ರುದ್ರಾಕ್ಷಿಗಳು ಉತ್ತಮವಾಗಿರುವವು. ಮನುಷ್ಯನಿಂದ ಛಿದ್ರೀಕರಿಸಿದ ರುದ್ರಾಕ್ಷಿಗಳು ಮಧ್ಯಮವೆನಿಸುವವು. ಕ್ರಿಮಿಯಿಂದ ದೂಷಿತವಾದ, ಒಡೆದ, ಸೊಟ್ಟಾದ, ಡೊಂಕಾದ, ದುಂಡಗೆ ಇರದ, ಬಲಿಯದ ರುದ್ರಾಕ್ಷಿಗಳು ತ್ಯಾಜ್ಯವಾಗಿರುವವು. ಪಾರ್ವತಿ, ಏಕಮುಖದ ರುದ್ರಾಕ್ಷಿಯು ಶಿವಸ್ವರೂಪವಾಗಿದೆ. ಅದು ಭೋಗ ಹಾಗೂ ಮೋಕ್ಷ ರೂಪಫಲವನ್ನು ಪ್ರದಾನ ಮಾಡುವದು. ರುದ್ರಾಕ್ಷ ಪೂಜೆಯಾಗುವಲ್ಲಿ ಲಕ್ಷ್ಮಿಯು ಸ್ಥಿರವಾಗುವಳು. ಎರಡು ಮುಖದ ರುದ್ರಾಕ್ಷಿಯು ದೇವದೇವೇಶ್ವರನೆನಿಸಿಕೊಳ್ಳುವದು. ಇದು ಸಂಪೂರ್ಣ ಕಾಮನೆಗಳನ್ನು ಈಡೇರಿಸುವದು. ಮೂರು ಮುಖದ ರುದ್ರಾಕ್ಷಿಯು ಎಲ್ಲ ಸಾಧನೆಗಳ ಫಲವನ್ನು ಕೊಡುವದು. ಇದರ ಪ್ರಭಾವದಿಂದ ಎಲ್ಲ ವಿದ್ಯೆಗಳೂ ಪ್ರತಿಷ್ಠಿತವಾಗುವವು. ನಾಲ್ಕು ಮುಖದ ರುದ್ರಾಕ್ಷಿಯು ಸಾಕ್ಷಾತ್ ಬ್ರಹ್ಮ ಸಮಾನವಾಗಿರುವದು. ಇದರ ದರ್ಶನದಿಂದ ಚತುರ್ವಿಧ ಪುರುಷಾರ್ಥಗಳು ಈಡೇರುವವು. ಪಂಚಮುಖದ ರುದ್ರಾಕ್ಷಿಯು ಸಾಕ್ಷಾತ್ ಕಾಲಾಗ್ನಿರುದ್ರರೂಪ ವಾಗಿರುವದು. ಇದು ಪಾಪನಾಶಕವಾಗಿದ್ದು ಮೋಕ್ಷದಾಯಕವಾಗಿದೆ. ಆರು ಮುಖದ ರುದ್ರಾಕ್ಷವು ಕಾರ್ತಿಕೇಯ ಸಮಾನವಾಗಿರುವದು. ಇದನ್ನು ಬಲಬಾಹುವಿನಲ್ಲಿ ಕಟ್ಟಿಕೊಂಡರೆ ಮಹಾಪಾತಕಗಳು ನಾಶವಾಗುವವು. ಮಹೇಶ್ವರಿ, ಏಳು ಮುಖದ ರುದ್ರಾಕ್ಷವು ಅನಂಗವೆಂಬ ಹೆಸರಿನಿಂದ ಪ್ರಸಿದ್ಧ ವಿರುವದು. ಇದನ್ನು ಧರಿಸಿದರೆ ದರಿದ್ರನು ಐಶ್ವರ್ಯಶಾಲಿಯಾಗುವನು. ಅಷ್ಟಮುಖದ ರುದ್ರಾಕ್ಷವು ಅಷ್ಟಮೂರ್ತಿ ಭೈರವರೂಪವಾಗಿದೆ. ಇದನ್ನು ಧಾರಣ ಮಾಡಿದರೆ ಪೂರ್ಣಾಯುವಾಗುವನು. ಒಂಭತ್ತು ಮುಖದ ರುದ್ರಾಕ್ಷವು ಭೈರವ ಹಾಗೂ ಕಪಿಲಮುನಿಯ ಪ್ರತೀಕವೆನಿಸಿರುವದು. ಒಂಭತ್ತು ರೂಪವನ್ನು ಧಾರಣ ಮಾಡುವ ಮಹೇಶ್ವರಿ ದುರ್ಗೆಯು ಅದರ ಅಧಿಷ್ಠಾತ್ರಿಯಾಗಿರುವಳು.

ಹತ್ತುಮುಖದ ರುದ್ರಾಕ್ಷವು ಭಗವಾನ್ ವಿಷ್ಣುವಿನ ಸ್ವರೂಪವಾಗಿದೆ. ಹನ್ನೊಂದು ಮುಖದ ರುದ್ರಾಕ್ಷವು ರುದ್ರರೂಪವಾಗಿರುವದು. ಅದನ್ನು ಧರಿಸುವವನು ಸರ್ವತ್ರ ವಿಜಯಿಯಾಗುವನು. ಹನ್ನೆರಡು ಮುಖದ ರುದ್ರಾಕ್ಷವನ್ನು ಕೇಶದಲ್ಲಿ ಧಾರಣ ಮಾಡಬೇಕು. ಹೀಗೆ ಧಾರಣ ಮಾಡಿದವನ ಮಸ್ತಕವು ಹನ್ನೆರಡು ಸೂರ್ಯರನ್ನು ಧಾರಣ ಮಾಡಿದಂತೆ ಪ್ರಭಾವಶಾಲಿಯಾಗುವದು. ಹದಿಮೂರು ಮುಖದ ರುದ್ರಾಕ್ಷವು ವಿಶ್ವೇದೇವರ ಸ್ವರೂಪದ್ದಾಗಿದೆ. ಅದನ್ನು ಧರಿಸಿದರೆ ಸರ್ವಾಭೀಷ್ಟವು ಸಿದ್ಧಿಸುವದು. ಹದಿನಾಲ್ಕು ಮುಖದ ರುದ್ರಾಕ್ಷವು ಶಿವ ರೂಪವಾಗಿದೆ. ಅದನ್ನು ಮಸ್ತಕದ ಮೇಲೆ ಧಾರಣ ಮಾಡುವದರಿಂದ ಸಮಸ್ತ ಪಾತಕಗಳು ನಾಶವಾಗುವವು. ರುದ್ರಾಕ್ಷಮಾಲೆಯನ್ನು ಧಾರಣ ಮಾಡುವವನ ಸರ್ವ ಮನೋರಥಗಳು ಸಿದ್ಧಿಸುವವು. ರುದ್ರಾಕ್ಷಮಾಲೆಯನ್ನು ಧರಿಸಿದವನ ಸಮೀಪದಲ್ಲಿ ಭೂತ, ಪ್ರೇತ, ಪಿಶಾಚ, ಡಾಕಿನಿ, ಶಾಕಿನಿ ಮೊದಲಾದವುಗಳ ಭಯವಿಲ್ಲ. ರುದ್ರಾಕ್ಷ ಮೂಲಾಧಾರಿ ಪುರುಷನನ್ನು ನೋಡಿ ಶಿವ, ಭಗವಾನ್ ವಿಷ್ಣು, ಗಣೇಶ, ದೇವೀದುರ್ಗೆ, ಸೂರ್ಯ ಮೊದಲಾದವರು ಪ್ರಸನ್ನ ರಾಗುವರು.

ಭಗವಾನ್ ಮಹಾದೇವನು ಭಗವತಿ ಪಾರ್ವತಿಗೆ ಹೇಳಿದ ರುದ್ರಾಕ್ಷ ಮಹಿಮೆಯನ್ನು ನಾನು ನಿಮಗೆ ಸಂಕ್ಷಿಪ್ತವಾಗಿ ತಿಳಿಸಿದೆನು, ಎಂದು ಸೂತ ಪುರಾಣಿಕನು ಶೌನಕಾದಿಮುನಿಗಳಿಗೆ ಭಕ್ತಿಪೂರ್ವಕವಾಗಿ ನಿವೇದನೆ ಮಾಡಿದನು.

ವಿದ್ಯೇಶ್ವರ ಸಂಹಿತಾ ಸಂಪೂರ್ಣ

## ರುದ್ರಸಂಹಿತಾ : ಪ್ರಥಮ (ಸೃಷ್ಟಿ) ಖಂಡ

## ನಾರದನ ಗರ್ವಭಂಗ

ಮುನಿಶಿರೋಮಣಿ ವಿಪ್ರವರ ನಾರದನು ತಪಸ್ಸು ಮಾಡಬೇಕೆಂಬ ಉದ್ದೇಶದಿಂದ ಗಂಗಾನದಿಯ ತೀರದಲ್ಲಿದ್ದ ಹಿಮಾಚಲದ ಒಂದು ಗುಹೆಗೆ ಹೋದನು. ಅದು ಶಿವನ ತಪೋಭೂಮಿಯಾಗಿತ್ತು. ಅಲ್ಲಿಯೇ ಭಗವಾನ್ ಶಿವನು ಕಾಮದೇವನನ್ನು ಭಸ್ಮ ಮಾಡಿದ್ದನು. ಆ ತಪೋಭೂಮಿಯಲ್ಲಿ ತಪಾಚರಣೆ

ಮಾಡುವ ತಪಸ್ವಿಗಳಿಗೆ ಕಾಮದೇವನ ಉಪದ್ರವವಾಗಕೂಡದೆಂದು ಶಿವನ ವರಪ್ರದಾನ ಮಾಡಿದ್ದನು. ಕರ್ಮ–ಧರ್ಮಸಂಯೋಗದಿಂದ ನಾರದನು ಅದೇ ಸ್ಥಳದಲ್ಲಿ ತಪಸ್ಸು ಮಾಡತೊಡಗಿದನು. ಶಿವಪಂಚಾಕ್ಷರಿ ಮಂತ್ರಜಪವನ್ನು ಅವನು ಪ್ರಾರಂಭಿಸಿದನು. ಅವನ ಉಗ್ರ ತಪಸ್ಸಿನ ಪ್ರಭಾವವನ್ನು ಕಂಡು ದೇವರಾಜ ಇಂದ್ರನು ಗಾಬರಿಯಾದನು. ಮಹಾ ತಪೋನಿಧಿಯಾದ ದೇವರ್ಷಿ ನಾರದನು ತನ್ನ ಸ್ವರ್ಗಸಾಮ್ರಾಜ್ಯವನ್ನು ಪಡೆಯಬೇಕೆಂಬ ಉದ್ದೇಶದಿಂದ ತಪವನ್ನಾಚರಿಸುತ್ತಿರುವನೆಂದು ಅವನು ಬಗೆದನು. ಕೂಡಲೇ ಅವನು ಕಾಮದೇವನನ್ನು ಕರೆಯಿಸಿ ನಾರದನ ತಪೋಭಂಗ ಮಾಡಬೇಕೆಂದು ತಿಳಿಸಿದನು. ಕಾಮನು ತನ್ನ ಗೆಳೆಯನಾದ ವಸಂತನೊಡನೆ ಹಿಮಾಚಲದ ಗುಹೆಯ ಬಳಿಗೆ ಬಂದನು. ಇಬ್ಬರೂ ನಾರದ ಮುನಿಯ ತಪವನ್ನು ಹಾಳು ಮಾಡಲು ವಿಶ್ವಪ್ರಯತ್ನ ಮಾಡಿದರು. ಶಿವನ ವರಪ್ರದಾನದ ಪರಿವೆಯು ಇಬ್ಬರಿಗೂ ಇದ್ದಿಲ್ಲ. ಸುದೀರ್ಘ ಸಾಹಸ ಮಾಡಿ ಅವರು ಹತಾಶರಾಗಿ, ದೇವರಾಜನ ಬಳಿಗೆ ಹೋಗಿ, ತಾವು ಪರಾಭವಗೊಂಡ ಅಪ್ರಿಯ ವೃತ್ತಾಂತವನ್ನರುಹಿದರು. ಇಂದ್ರನು ಸಹ ಭಗವಾನ್ ಶಿವನ ವರಪ್ರದಾನದ ಸಂಗತಿಯ ಬಗ್ಗೆ ವಿಸ್ಮೃತಿ ಹೊಂದಿದ್ದನು. ಆದುದರಿಂದ ನಾರದನ ಮಹಾತಪದ ಬಗ್ಗೆಯೂ ಅವನ ಶಮೆದಮೆಗಳ ಬಗ್ಗೆಯೂ ಅತಿರೇಕವಾಗಿ ಪ್ರಶಂಸೆ ಮಾಡಿದನು.

ಕೆಲವು ಕಾಲಕಳೆದ ಬಳಿಕ ನಾರದನು ತಪಶ್ಚರ್ಯದಿಂದ ವಿರತನಾದನು. ಕಾಮದೇವನನ್ನು ಪರಾಭವಗೊಳಿಸಿದೆನೆಂಬ ಅಹಂಕಾರವು ಅವನಲ್ಲಿ ಉತ್ಪನ್ನವಾಯಿತು. ಅವನಿಗೂ ಆ ಸ್ಥಳ ಮಹಾತ್ಮೆಯ ಅರಿವು ಉಂಟಾಗಲಿಲ್ಲ. ಎಲ್ಲವೂ ತನ್ನ ತಪಸ್ಸಿನ ಪ್ರಭಾವವೆಂದು ಅವನು ಭಾವಿಸಿದನು. ಆತ್ಮ ಸಮರ್ಪಣೆ ಮಾಡಿದ ಪರಮ ಭಕ್ತರನ್ನು ಮಾಯಾ, ಮೋಹಗಳು ಸ್ಪರ್ಶಿಸುವದಿಲ್ಲ. ಶಿವಭಕ್ತರನ್ನುಳಿದು ಎಲ್ಲ ಜಗತ್ತು ಮಾಯಾಪಹೃತವಾಗಿರುವದು. ಶಿವಭಕ್ತರ ಯೋಗ್ಯತೆಯೇ ಬೇರೆ.

ದುರ್ಜ್ಞೇಯಾ ಶಾಂಭವೀಮಾಯಾ ಸರ್ವೇಷಾಂ ಪ್ರಾಣಿನಾಮಿಹ ।
ಭಕ್ತಂ ವಿನಾರ್ಪಿತಾತ್ಮಾನಂ ತಯಾ ಸಮ್ಮೋಹ್ಯತೇ ಜಗತ್ ॥

(ಶಿ.ಪು. ರುದ್ರ ಸಂ. ೨–೨೫)

ನಾರದನು ಸರ್ವಾರ್ಪಣ ಬುದ್ಧಿಯಿಂದ ತಪಸ್ಸು ಮಾಡಿದವನೇ ಅಲ್ಲ.

ಸ್ಥಾನಮಹಿಮೆಯಿಂದ ಅನಾಯಾಸವಾಗಿ ದೊರೆತ ಕಾಮ ವಿಜಯದ ಬಗ್ಗೆ ಅವನು ವೃಥಾಭಿಮಾನವನ್ನು ತಳೆದು, ಶಮ-ದಮಗಳಿಂದ ತಾನು ಸಾಧಿಸಿದ ಪೌರುಷ ವನ್ನರುಹಲು ಅವನು ಭಗವಾನ್ ಶಂಕರನನ್ನು ಕಾಣಲು ಕೈಲಾಸಕ್ಕೆ ತೀವ್ರಗತಿ ಯಿಂದ ತೆರಳಿದನು. ಅವನು ಪರಮೇಶ್ವರನನ್ನು ಕಂಡು, ತಾನು ಸಾಧಿಸಿದ ಕಾಮ ಜಯದ ಬಗ್ಗೆ ಆತ್ಮಪ್ರಶಂಸೆ ಮಾಡಿಕೊಂಡನು. ಶಂಭುವು ಗಹಗಹಿಸಿ ನಕ್ಕನು. ನಾರದನಿಗೆ ನಗೆಯ ಅರ್ಥವಾಗದ್ದರಿಂದ ಬೆಪ್ಪನಂತೆ ನಿಂತನು.

ಶಿವ-ನಾರದಾ, ನೀನು ವಿದ್ವಾಂಸನಿರುವೆ. ಧನ್ಯವಾದಕ್ಕೆ ಪಾತ್ರನಿರುವೆ. ಆದರೆ ನೀನು ನನ್ನೆದುರಿನಲ್ಲಿ ಆಡಿದ ಮಾತುಗಳನ್ನು ಯಾರ ಮುಂದೆಯೂ ಹೇಳಬೇಡ. ಭಗವಾನ್ ವಿಷ್ಣುವಿನ ಸಾನ್ನಿಧ್ಯದಲ್ಲಂತೂ ಈ ವಿಷಯವನ್ನೆತ್ತಬೇಡ. ನಿನ್ನ ಈ ಸಿದ್ಧಿಯನ್ನು ಗುಪ್ತವಾಗಿರಿಸು. ನೀನು ನನ್ನ ಭಕ್ತನಿರುವೆ ಮತ್ತು ವಿಷ್ಣು ಭಕ್ತನಾದ ನೀನು ಪರಮ ವೈಷ್ಣವನೂ ಆಗಿರುವೆ. ನೀನು ವಿಷ್ಣು ಭಕ್ತನಿದ್ದರೂ ನನ್ನ ಅನುಗಾಮಿಯಾಗಿರುವೆ. ಆದುದರಿಂದ ನಿನ್ನ ಕಲ್ಯಾಣಕ್ಕಾಗಿ ಹೇಳುವದೇನೆಂದರೆ, ಕಾಮವಿಜಯವು ನಿನಗೆ ಸ್ಥಾನ ಮಹಿಮೆಯಿಂದ ದೊರೆತಿದೆ.

ಪರಮೇಶ್ವರನ ಉಪದೇಶದಿಂದ ನಾರದನಲ್ಲಿಯ ಅಹಂಕಾರವು ನಷ್ಟವಾಗಲಿಲ್ಲ. ಅವನು ತನ್ನ ತಂದೆಯಾದ ಬ್ರಹ್ಮದೇವನ ಭೆಟ್ಟಿಗಾಗಿ ಸತ್ಯಲೋಕಕ್ಕೆ ಧಾವಿಸಿ ಹೋದನು. ಅವನು ಬ್ರಹ್ಮನನ್ನು ಕಂಡು, ತಾನು ಸಾಧಿಸಿದ ಕಾಮ ವಿಜಯದ ವೃತ್ತಾಂತವನ್ನು ತಿಳಿಸಿದನು. ಬ್ರಹ್ಮದೇವನಾದರೂ ಶಿವನಂತೆಯೇ ಉಪದೇಶ ಮಾಡಿದನು. ಆದರೆ ಶಿವಮಾಯಾ ಪರಿವೃತನಾದ ನಾರದನಿಗೆ ಬ್ರಹ್ಮನ ಮಾತುಗಳು ರುಚಿಸಲಿಲ್ಲ. ಅವನು ತನ್ನ ಜಯಭೇರಿಯನ್ನು ಮೊಳಗಿಸಲು ವೈಕುಂಠಕ್ಕೆ ದ್ರುತಗತಿಯಿಂದ ತೆರಳಿದನು. ಅವನು ವೈಕುಂಠಪತಿಯಾದ ಶ್ರೀಹರಿಗೆ ಪ್ರಣಾಮಗಳನ್ನರ್ಪಿಸಿ, ತಾನು ಸಾಧಿಸಿದ ತಪಸ್ಸನ್ನೂ ಕಾಮವಿಜಯವನ್ನು ಪೂರ್ಣ ರೂಪದಿಂದ ಹೇಳಿದನು. ನಾರದನಿಗೆ ಕಾಮವಿಜಯವು ದೊರೆತದ್ದರ ಯಥಾರ್ಥ ಜ್ಞಾನವು ಶ್ರೀ ಹರಿಗೆ ಇತ್ತು. ತಪಾಚರಣೆ ಮಾಡಿ ಶಮ ದಮಗಳನ್ನು ಪೂರ್ಣವಾಗಿ ಸಾಧಿಸಿರುವನೆಂಬ ಅಹಂಕಾರವು ನಾರದನಲ್ಲಿ ಉತ್ಪನ್ನವಾಗಿರುವದೆಂಬುದನ್ನು ಅವನು ಅರಿತನು.

ಶ್ರೀವಿಷ್ಣು-ಮುನಿಶ್ರೇಷ್ಠ ನಾರದಾ, ನೀನು ಪರಮಧನ್ಯನು. ನೀನು ತಪಸ್ಸಿನ ಭಂಡಾರವೇ ಆಗಿರುವೆ. ಭಕ್ತಿ ಜ್ಞಾನ ವೈರಾಗ್ಯಗಳಿಲ್ಲದವರಿಗೆ ಕಾಮನ

ಕಾಟ. ಆದರೆ ನೀನು ನೈಷ್ಠಿಕ ಬ್ರಹ್ಮಚಾರಿಯಿರುವೇ; ಜ್ಞಾನ, ವೈರಾಗ್ಯನಿರತನಿರುವೆ. ನೀನು ಜನ್ಮದಿಂದ ನಿರ್ವಿಕಾರನೂ ಶುದ್ಧಬುದ್ಧಿಯವನೂ ಆಗಿರುವೆ. ನಿನ್ನಂತಹನ ಮುಂದೆ ಕಾಮನಾಟವು ಏನು ನಡೆದೀತು? ಮುನಿಶಿರೋಮಣಿ, ನಿನ್ನ ಶಮ, ದಮಗಳು ಪ್ರಶಂಸನೀಯವಿರುವವು.

ನಾರದ–ಭಗವನ್, ನಿನ್ನ ಕೃಪೆಯು ನನ್ನ ಮೇಲೆ ಇರುವಾಗ, ನನ್ನ ತಪೋಬಲದಿಂದ ಮಾಯಾ, ಮೋಹಗಳು ನಷ್ಟ ಹೊಂದಿರುವಾಗ ಆ ಕಾಮ ದೇವನ ಪ್ರಭಾವವು ಏನು ನಡೆದೀತು? ಎಂದು ಅವನು ಅಹಂಕಾರದಿಂದಲೇ ಮಾತಾಡಿ ಶ್ರೀಹರಿಯ ನಿರೋಪ ಹೊಂದಿ ವೈಕುಂಠದಿಂದ ಪಯಣ ಮಾಡಿದನು.

ಸೂತಪುರಾಣಿಕ–ಶೌನಕಾದಿ ಮಹರ್ಷಿಗಳೆ, ಶ್ರೀಹರಿಯು ಭಗವಾನ್ ಮಹಾದೇವನ ಪ್ರೇರಣೆಯಿಂದ ಮಾಯೆಯನ್ನು ನಿರ್ಮಾಣ ಮಾಡಿದನು. ನಾರದನು ಹೊರಟ ಮಾರ್ಗದಲ್ಲಿ ತನ್ನ ಮಾಯೆಯಿಂದ ಸುಂದರವಾದ ನಗರವನ್ನು ನಿರ್ಮಾಣ ಮಾಡಿದನು. ಅದು ವೈಕುಂಠಕ್ಕಿಂತಲೂ ಸುಂದರವಾಗಿತ್ತು. ಆ ನಗರಕ್ಕೆ ಶೀಲನಿಧಿಯೆಂಬ ಅಷ್ಟೈಶ್ವರ್ಯಯುಕ್ತ ರಾಜನಿದ್ದನು. ಅವನಿಗೆ ಅಪ್ಸರೆಯರಿಗಿಂತಲೂ ರೂಪವತಿಯಾದ ಶ್ರೀಮತಿ ಎಂಬ ಉಪವರ ಕನ್ಯೆಯಿದ್ದಳು. ರಾಜನು ತನ್ನ ಪುತ್ರಿಯ ಸ್ವಯಂವರವನ್ನು ಯೋಜಿಸಿದ್ದನು. ನಗರ ಪ್ರವೇಶ ಮಾಡಿದೊಡನೆಯೆ ನಾರದನಿಗೆ ಈ ಸಂಗತಿಯು ತಿಳಿಯಿತು. ಅವನು ರಾಜ ಮಂದಿರವನ್ನು ಪ್ರವೇಶಿಸಿ, ತನ್ನ ದೇವರ್ಷಿಪದದ ಹೆಗ್ಗಳಿಕೆಯಿಂದ ರಾಜನಾದ ಶೀಲನಿಧಿಯನ್ನೂ ರಾಜಕುಮಾರಿ ಶ್ರೀಮತಿಯನ್ನೂ ಸಂದರ್ಶಿಸಿದನು. ರಾಜನು ನಾರದಮುನಿಯನ್ನು ಪೂಜಿಸಿ, ಸತ್ಕರಿಸಿದನು. ತನ್ನ ಪುತ್ರಿಗೆ ಸ್ವಯಂವರದಲ್ಲಿ ಉತ್ತಮ ಪತಿಯು ದೊರಕುವಂತೆ ಆಶೀರ್ವದಿಸಬೇಕೆಂದು ಬೇಡಿಕೊಂಡನು. ಶ್ರೀಮತಿಯ ರೂಪ, ಲಾವಣ್ಯಾದಿಗಳಿಗೆ ನಾರದನು ಮೋಹಿತನಾದನು. ಅವನು ರಾಜನನ್ನು ಕುರಿತು–"ಮಹಾರಾಜಾ, ನಿನ್ನ ಪುತ್ರಿಗೆ ಭಗವಾನ್ ಶಂಕರನಿಗೆ ಸಮಾನನಾದ ಪತಿಯು ಲಭಿಸುವನು. ನಿನ್ನ ಪುತ್ರಿಯು ಭಗವತಿ ಲಕ್ಷ್ಮೀದೇವಿಗೆ ಸಮಾನ ರೂಪವತಿಯಾಗಿರುವಳು. ಇವಳನ್ನು ವಿಷ್ಣುವಿಗೆ ಸಮಾನನಾದ ವರನೇ ವರಿಸುವನು."

ನಾರದನು ಹೀಗೆ ಹೇಳಿ ರಾಜನ ನಿರೋಪ ಪಡೆದು ವೈಕುಂಠಕ್ಕೆ

ತೆರಳಿದನು. ಅವನು ವಿಷ್ಣುವನ್ನು ವಂದಿಸಿ, ಸ್ವಯಂವರಕ್ಕಾಗಿ ಸಿದ್ಧಳಾಗಿರುವ ಶ್ರೀಮತಿಯ ರೂಪಲಾವಣ್ಯಾದಿಗಳನ್ನು ವರ್ಣಿಸಿ ಹೇಳಿ, ಸ್ವಯಂವರದಲ್ಲಿ ವಿಶ್ವ ಮೋಹಿನಿಯಾದ ರಾಜಕುಮಾರಿಯು ಸಹಸ್ರಾರು ರಾಜಕುಮಾರರನ್ನು ಬಿಟ್ಟು ತನ್ನನ್ನೇ ವರಿಸುವಂತೆ ರೂಪವನ್ನು ಕೊಡಬೇಕೆಂದು ಬೇಡಿಕೊಂಡನು. ಅವಳಲ್ಲಿ ತನ್ನ ಪ್ರೇಮವು ನೆಲೆಗೊಂಡಿರುವ ಸಂಗತಿಯನ್ನು ತಿಳಿಸಿ, ನಿನ್ನ ರೂಪವನ್ನೇ ತನಗೆ ಕೊಡಬೇಕೆಂದು ಪ್ರಾರ್ಥಿಸಿದನು.

ಕಾಮವಿಜಯದ ಬಗ್ಗೆ ಹೆಮ್ಮೆ ಪಟ್ಟಿದ್ದ ನಾರದನು ಮಾಯಾ, ಮೋಹಗಳಲ್ಲಿ ಸಿಲುಕಿದ್ದನ್ನು ಕಂಡು, ಶ್ರೀಹರಿಯು ಕಾಮನ ಮಹಿಮೆಯನ್ನು ಮನಸಾರೆ ಹೊಗಳಿದನು. ಅವನು ನಾರದನನ್ನುದ್ದೇಶಿಸಿ–''ದೇವರ್ಷಿಗಳಲ್ಲಿ ವರಿಷ್ಠನೆನಿಸಿದ್ದ ನಿನ್ನ ರೋಗವನ್ನು ಪೂರ್ಣವಾಗಿ ನಾಶಮಾಡುವ ವೈದ್ಯನಾಗಿ ನಾನು ಶ್ರೀಮತಿಯ ಸ್ವಯಂವರ ಮಂಟಪದಲ್ಲಿ ಉಪಸ್ಥಿತನಾಗಿರುವೆನು. ನೀನು ಶೀಘ್ರ ವಾಗಿ ಅಲ್ಲಿಗೆ ತೆರಳು.''

ನಾರದನು ಸ್ವಯಂವರ ಮಂಟಪವನ್ನು ಪ್ರವೇಶಿಸಿದನು. ಅವನ ಶರೀರವು ವಿಷ್ಣುರೂಪವಾಗಿತ್ತು. ತನ್ನ ಸ್ವರೂಪವನ್ನು ಕಂಡು ಅವನು ಹಿರಿ ಹಿರಿ ಹಿಗ್ಗಿ ಶ್ರೀಹರಿಯನ್ನು ಕೊಂಡಾಡಿದನು. ಆದರೆ ಅವನ ಮುಖವು ವಾನರ ಮುಖ ವಾಗಿತ್ತು. ಅದನ್ನು ಅವನು ಗುರುತಿಸಲಿಲ್ಲ. ಶಿವನ ಆಜ್ಞೆಯಂತೆ ಸ್ವಯಂವರ ಮಂಟಪದಲ್ಲಿದ್ದ ಶಿವಪಾರ್ಷದರು ನಾರದನ ಕೋತಿಯಾಕಾರದ ಮೋತಿಯನ್ನು ಕಂಡು ಕಿಸ್ಸೆಂದು ನಕ್ಕರು. ನಾರದರು ಅವರನ್ನು ನೋಡಿ, 'ಹುಚ್ಚರು!' ಎಂದಂದನು.

ಶ್ರೀಮತಿಯು ಬಂಗಾರದ ಪುಷ್ಪಮಾಲೆಯನ್ನು ಕೈಯಲ್ಲಿ ಹಿಡಿದು ಕೊಂಡು ಸ್ವಯಂವರ ಮಂಟಪವನ್ನು ಪ್ರವೇಶಿಸಿದಳು. ಅವಳು ವಿಷ್ಣುವಿನಂತೆ ಶರೀರ ಸೌಂದರ್ಯವುಳ್ಳ ಕಪಿಮುಖದ ನಾರದನನ್ನು ಕಂಡು ಮುಗುಳು ನಗೆ ನಕ್ಕು ಮುಂದೆ ಸಾಗಿದಳು. ಅನೇಕ ರಾಜಕುಮಾರರ ಮುಂದೆ ನುಸುಳಿ ಹೋದಳು. ಅಲ್ಲಿ ದಿವ್ಯ ಕಾಂತಿಯುತನಾದ ದೇವಶಿಖಾಮಣಿ ಶ್ರೀಹರಿಯನ್ನು ಕಂಡು, ವರಮಾಲೆ ಯನ್ನು ಅವನ ಕೊರಳಿಗೆ ಹಾಕಿ ಪಾದಾರವಿಂದಗಳಿಗೆ ಪ್ರಣಾಮಗಳನ್ನರ್ಪಿಸಿದಳು. ಕೂಡಲೆ ಶ್ರೀಹರಿಯು ಶ್ರೀಮತಿಯನ್ನು ಸಂಗಡ ಕರೆದುಕೊಂಡು ಅಂತರ್ಧಾನ ನಾದನು.

ಆಗ ಶಿವಪಾರ್ಷದರು ನಾರದನ ಸಮ್ಮುಖದಲ್ಲಿ ಬಂದು–"ಕಾಮ ವಿಜಯಿ, ಮಹಾ ತಪೋಧನನಾದ ನಾರದಾ, ನಿನ್ನಂತಹನೂ ಶ್ರೀಮತಿಯ ಮಾಯೆಯಲ್ಲಿ ಸಿಲುಕಿದೆಯಾ? ನಿನ್ನ ದೇಹವು ವಿಷ್ಣುವಿನ ದೇಹದಂತೆ ಸುಂದರ ವಾಗಿದೆ. ಆದರೆ ನಿನ್ನ ಕಪಿಮುಖವನ್ನು ಈ ಕನ್ನಡಿಯಲ್ಲಿ ನೋಡಿ ಸಂತುಷ್ಟನಾಗು."

ನಾರದನು ತನ್ನ ಮುಖವನ್ನು ನೋಡಿ ನಾಚಿದನು. ಇದು ವಿಷ್ಣುವಿನ ಮಾಯೆಯೆಂದು ತಿಳಿದು ವೈಕುಂಠಕ್ಕೆ ತೆರಳಿ–"ನೀನು ನನ್ನನ್ನು ಶ್ರೀಮತಿಯ ವ್ಯಾಮೋಹದ ಚಿಂತೆಯಲ್ಲಿ ಕೆಡಹಿದೆ. ನೀನೂ ಪತ್ನಿವಿರಹದಿಂದ ದುಃಖಿತ ನಾಗುವೆ!" ಎಂದು ಶಾಪ ಕೊಟ್ಟನು. "ನಾರದಾ, ನೀನು ಕಂಡುದೆಲ್ಲವೂ ನನ್ನ ಮಾಯೆ!" ಎಂದು ಹೇಳಿ ವಿಷ್ಣುವು ಗಹಗಹಿಸಿ ನಕ್ಕನು. ನಾರದನಿಗೆ ಯಥಾರ್ಥ ಜ್ಞಾನವಾಯಿತು. ಅವನ ಸ್ವಪ್ನ ಸೃಷ್ಟಿಯು ಮಾಯವಾಯಿತು.

ಶ್ರೀಹರಿಯು ಪಶ್ಚಾತ್ತಾಪಗೊಂಡ ನಾರದನನ್ನುದೇಶಿಸಿ–"ದೇವರ್ಷಿಯೆ, ನೀನು ಮಹೇಶ್ವರನ ಆಜ್ಞೆಯನ್ನು ಉಲ್ಲಂಘಿಸಿ ತೊಂದರೆಗೊಳಗಾದೆ. ನೀನು ತೀರ್ಥಯಾತ್ರೆಗಳಿಗಾಗಿ ತೆರಳು. ಶಿವಕ್ಷೇತ್ರಗಳನ್ನು ಸಂಚರಿಸಿದ ಬಳಿಕ ನಿನ್ನ ಪಿತನಾದ ಬ್ರಹ್ಮದೇವನ ಬಳಿಗೆ ಹೋಗಿ ಶಿವನ ಪಾವನಕರ ಚರಿತೆಯನ್ನು ತಿಳಿದುಕೋ, ಶಿವತತ್ವಗಳನ್ನು ಅಭ್ಯಾಸ ಮಾಡು ಎಂದನು."

ನಾರದನು ಲೋಕಪಿತಾಮಹನಾದ ಬ್ರಹ್ಮದೇವನ ಬಳಿಗೆ ಬಂದು ವಂದಿಸಿ, ಶಿವಚರಿತ್ರೆ, ಶಿವತತ್ವಗಳನ್ನು ತಿಳಿಸಬೇಕೆಂದು ಬೇಡಿಕೊಂಡನು.

ಬ್ರಹ್ಮದೇವ–ದೇವಶಿರೋಮಣಿಯೆ, ನೀನು ಜಗತ್ತಿನ ಕಲ್ಯಾಣವನ್ನು ಚಿಂತಿಸುವವನಿರುವೆ. ನೀನು ಶಿವತತ್ವವನ್ನು ಅಭ್ಯಾಸ ಮಾಡಬೇಕು. ಜಗತ್ಪ್ರಳಯ ವಾದ ಬಳಿಕ ಸೂರ್ಯ, ಚಂದ್ರ, ನಕ್ಷತ್ರಾದಿಗಳು ಯಾವವೂ ಇರುವದಿಲ್ಲ. ಆಗ ಎಲ್ಲ ಕಡೆಯಲ್ಲಿ ಅಂಧಕಾರವೇ ವ್ಯಾಪಿಸಿತ್ತು. ಪಂಚಭೂತಗಳ ಸತ್ತೆಯೂ ಇದ್ದಿಲ್ಲ. ಆ ಸಮಯದಲ್ಲಿ 'ತತ್ಸದ್ಬ್ರಹ್ಮ' ಈ ಶ್ರುತಿಯಲ್ಲಿ 'ಸತ್' ಎಂಬದೊಂದೇ ಶೇಷ ವಾಗಿತ್ತು. ಅದು ಇದು ಎಂಬ ಭಾವನಾತ್ಮಕ ಜಗತ್ತು ಇದ್ದಿಲ್ಲ. ಯೋಗಿಜನರು ನಿರಂತರವಾಗಿ ತಮ್ಮ ಹೃದಯಾಕಾಶದಲ್ಲಿ ಕಾಣುವ ಸತ್ತತ್ವವು ಮನದ ವಿಷಯ ವಾಗುವದಿಲ್ಲ. ವಾಣಿಯಾದರೂ ಅಲ್ಲಿಗೆ ತಲುಪುವದಿಲ್ಲ. ಅದು ನಾಮ, ರೂಪ, ವರ್ಣಗಳಿಂದ ಶೂನ್ಯವಾಗಿರುವದು; ಸತ್ಯ, ಜ್ಞಾನ ಸ್ವರೂಪ, ಅನಂತ, ಪರಮಾನಂದಮಯ, ಪರಮಜ್ಯೋತಿಸ್ವರೂಪ, ಅಪ್ರಮೇಯ, ನಿರ್ಗುಣ, ನಿರಾ

ಕಾರ, ಮಾಯಾಶೂನ್ಯ, ಚಿನ್ಮಯವಾಗಿರುವದು. ಯಾವನು ಮೂರ್ತಿರಹಿತ ಪರಬ್ರಹ್ಮವಾಗಿರುವನೋ ಅವನು ಭಗವಾನ್ ಸದಾಶಿವನಾಗಿರುವನು. ಪ್ರಾಚೀನ ವಿದ್ವಾಂಸರು ಅವನಿಗೇ ಈಶ್ವರನೆನ್ನುವರು. ಅವನು ತನ್ನ ವಿಗ್ರಹದಿಂದ ಏಕಸ್ವರೂಪ ಭೂತಳಾದ ಶಕ್ತಿಯನ್ನು ಉತ್ಪನ್ನ ಮಾಡಿದನು. ತರುವಾಯ ಅವನು ಭಗವಾನ್ ಶ್ರೀಹರಿಯನ್ನು ಸೃಷ್ಟಿಸಿದನು. ವಿಷ್ಣುವಿನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನಾದ ನಾನು ಉದ್ಭವಿಸಿದೆನು. ನನ್ನ ಕುಮಾರನೇ ನೀನು. ಭಗವಾನ್ ಶಿವನು ದಯಾಮಯನು. ನೀನು ಅವನ ಆದೇಶದಂತೆ ನಡೆದಿದ್ದರೆ ಗಂಡಾಂತರದಲ್ಲಿ ಬೀಳುತ್ತಿದ್ದಿಲ್ಲ. ನೀನು ಅಹಂಕಾರದಿಂದ ಹಟಮಾರಿಯಾದುದಕ್ಕಾಗಿ ಶಿವನು ನಿನ್ನ ಗರ್ವಭಂಗ ಮಾಡಿದನು.

## ಸೃಷ್ಟಿ ನಿರ್ಮಾಣ

ಬ್ರಹ್ಮ–ಭಗವಾನ್ ವಿಷ್ಣುವೂ ನಾನೂ ಉತ್ಪನ್ನರಾದ ಬಳಿಕ ಭಗವಾನ್ ಮಹೇಶ್ವರನು ಜ್ಯೋತಿರ್ಲಿಂಗರೂಪದಿಂದ ನಮ್ಮೆದುರಿನಲ್ಲಿ ಪ್ರಕಟನಾದನು. ಆ ಲಿಂಗದಿಂದ 'ಓಂ, ಓಂ' ಶಬ್ದವು ಪ್ರಕಟವಾಯಿತು ಲಿಂಗದ ದಕ್ಷಿಣಭಾಗದಲ್ಲಿ ಸನಾತನ ಆದಿವರ್ಣವಾದ ಅಕಾರವು ಹೊರಟಿತು; ಉತ್ತರಭಾಗದಲ್ಲಿ ಉಕಾರವೂ, ಮಧ್ಯಭಾಗದಲ್ಲಿ ಮಕಾರವೂ ಹೊರಟು ಕೊನೆಯಲ್ಲಿ 'ಓಂ'ಕಾರ ನಾದದ ಅನುಭವವಾಯಿತು. ನಾರದಾ, ಅಷ್ಟರಲ್ಲಿ ಸ್ಫಟಿಕಮಣಿ ಸಮಾನವಾಗಿ ನಿರ್ಮಲ ಪ್ರಭೆಯಿಂದ ಯುಕ್ತವಾದ ತುರಿಯಾತೀತ, ಅಮಲ, ನಿಷ್ಕಲ, ನಿರ್ದ್ವಂದ್ವ, ಶೂನ್ಯಮಯ, ಆದಿಮಧ್ಯರಹಿತ, ಆನಂದಮಯ. ಅಮೃತ ಸ್ವರೂಪ ಪರಬ್ರಹ್ಮನ ದರ್ಶನವಾಯಿತು! ಪ್ರಣವದ ಏಕಾಕ್ಷರ ಅಕಾರದಿಂದ ಜಗತ್ತಿನ ಬೀಜಭೂತವಾದ ಅಂಡ ಜನ್ಮನಾಗಿದ್ದ ಭಗವಾನ್ ಬ್ರಹ್ಮನ ಬೋಧೆಯಾಗುವದು. ಉಕಾರದಿಂದ ಪರಮಕಾರಣರೂಪನಾದ ಶ್ರೀಹರಿಯ ಬೋಧವಾಗುವದು. ಮಕಾರದಿಂದ ಭಗವಾನ್ ನೀಲಲೋಹಿತ ಶಿವಜ್ಞಾನವಾಗುವದು. ಅಕಾರ ಸಂಜ್ಞಕ ಬ್ರಹ್ಮನಾದ ನನ್ನನ್ನು ಬೀಜರೂಪವೆನ್ನುವರು, ಉಕಾರ ನಾಮಧಾರಿ ಶ್ರೀಹರಿಯು ಯೋನಿಯಾಗಿರುವನು. ಮಕಾರವು ಅನುಗ್ರಹ ಮಾಡುವ ಶಿವಸ್ವರೂಪವಾಗಿದೆ. ಜ್ಯೋತಿರ್ಲಿಂಗ ಸ್ವರೂಪ ಸದಾಶಿವನು 'ಓಂ ಓಂ,' ಎಂದು ಉಚ್ಚಾರ ಮಾಡಿದನು. ಶ್ರೀಹರಿಯು ಮಹೇಶ್ವರನ ಸ್ತೋತ್ರ ಮಾಡಿದನು.

ಮಹೇಶ್ವರನು ಪ್ರಸನ್ನನಾದನು. ಅವನು ತನ್ನ ಶಬ್ದಮಯ ರೂಪವನ್ನು ಪ್ರಕಟಮಾಡಿದನು. ಅವನ ಮಸ್ತಕವು ಅಕಾರವೂ, ಲಲಾಟವು ಆಕಾರವೂ, ಇಕಾರವು ಬಲಗೈಯೂ ಈಕಾರವು ಎಡಗೈಯೂ, ಉಕಾರವು ಬಲಗಿವಿಯೂ ಊಕಾರವು ಎಡಗಿವಿಯೂ ಎಂದು ಹೇಳಲ್ಪಡುವವು. ಋಕಾರವು ಬಲಕಪೋಲವೂ ೠಕಾರವು ಎಡಕಪೋಲವೂ ಌ, ೡಕಾರಗಳು ಅವನ ನಾಸಿಕದ ಎರಡು ಛಿದ್ರಗಳು, ಎಕಾರವು ಶಿವನ ಮೇಲ್ತುಟಿಯು, ಐಕಾರವು ಕೆಳದುಟಿಯು. ಓಕಾರವು ಅವನ ಮೇಲಿನ ದಂತಪಂಕ್ತಿಗಳು, ಔಕಾರವು ಕೆಳಗಿನ ದಂತ ಪಂಕ್ತಿಗಳು ಅಂ, ಅಃ ಇವು ಭಗವಾನ್ ಶಿವನ ಎರಡು ತಾಲುಗಳು. ಕವರ್ಗವು ಅವನ ಬಲ ಹಸ್ತವು; ಚವರ್ಗವು ಎಡಹಸ್ತವು. ಟ, ತ ವರ್ಗಗಳು ಬಲಪಾದ, ಎಡಪಾದಗಳು. ಪಕಾರವು ಉದರವು. ಫಕಾರವು ಬಲಪಾರ್ಶ್ವವು; ಬಕಾರವು ಎಡ ಪಾರ್ಶ್ವವು ಭಕಾರವು ಸ್ಕಂಧವು, ಮಕಾರವು ಯೋಗೀಶ್ವರ ಮಹಾದೇವ ಶಂಭುವಿನ ಹೃದಯವಾಗಿದೆ. ಯಕಾರದಿಂದ ಸಕಾರಗಳವರೆಗೆ ಏಳು ಅಕ್ಷರಗಳು ಶಿವನ ಶಬ್ದಮಯ ಶರೀರದ ಏಳು ಧಾತುಗಳಾಗಿವೆ. ಹಕಾರವು ಅವನ ನಾಭಿಯು, ಕ್ಷಕಾರವು ಮೂತ್ರೇಂದ್ರಿಯ ವಾಗಿರುವದು.

ನಾರದಾ, ಈ ಪ್ರಕಾರವಾಗಿ ನಿರ್ಗುಣ, ಸಗುಣ ಸ್ವರೂಪನಾದ ಪರಮಾತ್ಮನ ಭಗವತಿ ಉಮಾದೇವಿಸಹಿತನಾದ ಶಬ್ದಮಯ ರೂಪವನ್ನು ಸಂದರ್ಶಿಸಿ ನಾನೂ ಶ್ರೀಹರಿಯೂ ಕೃತಾರ್ಥರಾದೆವು. ನಾವು ಇಬ್ಬರೂ ಶಬ್ದ ಬ್ರಹ್ಮಮಯ ಶರೀರಧಾರಿ ಮಹೇಶ್ವರ ಶಿವನಿಗೆ ಅನಂತ ಪ್ರಣಾಮಗಳನ್ನರ್ಪಿಸಿ ದೆವು. ತರುವಾಯ ಮೇಲೆ ನೋಡಿದೆವು, ಐದು ಕಲೆಗಳಿಂದ ಯುಕ್ತವಾದ ಓಂಕಾರ ಜನಿತ ಮಂತ್ರದ ಸಾಕ್ಷಾತ್ಕಾರವಾಯಿತು. ಪರಕ್ಷಣದಲ್ಲಿ ಚತುರ್ವಿಂಶ್ಯತ್ಯ ಕ್ಷರಗಳುಳ್ಳ ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸಿಕೊಡುವ ಗಾಯತ್ರಿ ಮಂತ್ರದರ್ಶನ ವಾಯಿತು. ಆಮೇಲೆ ಮೃತ್ಯುಂಜಯಮಂತ್ರ, ಪಂಚಾಕ್ಷರ ಮಂತ್ರ, ದಕ್ಷಿಣಾ ಮೂರ್ತಿ ಸಂಜ್ಞಕ ಚಿಂತಾಮಣಿ ಮಂತ್ರ ಮೊದಲಾದವುಗಳ ಸಾಕ್ಷಾತ್ಕಾರವಾಯಿತು. ಈ ಐದೂ ಮಂತ್ರಗಳ ಉಪಲಬ್ಧಿ ಮಾಡಿಕೊಂಡ ಶ್ರೀಹರಿಯು ಅವುಗಳನ್ನು ಜಪಿಸತೊಡಗಿದನು. ಋಕ್, ಯಜುಸ್ಸಾಮಗಳು ರೂಪವಾಗಿರುವ, ಈ ಶರಮುಕುಟಮಣಿ ಈಶನಾಗಿರುವ, ಆದಿಪುರುಷನಾದವನ, ಅಘೋರ ಸೌಮ್ಯ ಹೃದಯಿಯಾದ ಸರ್ವಗುಹ್ಯನಾದ ಸದಾಶಿವನ ಸರ್ವಾಂತರ್ಯಾಮಿಯಾದವನ

ತ್ರೈಲೋಕ್ಯಾಧಿಪತಿಯಾದವನ ಸೃಷ್ಟಿ ಸ್ಥಿತಿ ಲಯಾದಿಗಳಿಗೆ ಕಾರಣನಾದವನ ದರ್ಶನ ಹೊಂದಿ, ಆ ಸಾಂಬಶಿವನನ್ನು ನಾವಿಬ್ಬರೂ ಸ್ತವನ ಮಾಡತೊಡಗಿದೆವು. ಭಗವತಿ ಉಮಾ ಸಮೇತನಾಗಿದ್ದ ಪಾಪ ಹಾರಿ ಭಗವಾನ್ ಮಹೇಶ್ವರನು ಪ್ರಸನ್ನ ಚಿತ್ತನಾಗಿ ಶ್ರೀವಿಷ್ಣುವಿಗೆ ಶ್ವಾಸರೂಪದಿಂದ ವೇದೋಪದೇಶ ಮಾಡಿದನು. ತರುವಾಯ ಅವನು ಶ್ರೀಹರಿಗೆ ಗುಹ್ಯ ಜ್ಞಾನ ಪ್ರದಾನ ಮಾಡಿದನು. ನನಗೆ ಸಹ ಭಗವಂತನು ಜ್ಞಾನೋಪದೇಶ ಮಾಡಿದನು.

ಮಹೇಶ್ವರ–ಬ್ರಹ್ಮ ವಿಷ್ಣು ಮಹೇಶ್ವರರು ಬೇರೆ ಬೇರೆ ಅಲ್ಲ. ನಾವು ಒಂದೇ ಆಗಿರುವೆವು. ವಾಸ್ತವವಾಗಿ ನಾನು ನಿಷ್ಕಲನಾಗಿರುವೆನು. ಬ್ರಹ್ಮದೇವಾ, ನನ್ನ ಉತ್ಕೃಷ್ಟರೂಪವು ನಿನ್ನ ದೇಹದಿಂದ ಪ್ರಕಟವಾಗಿ ರುದ್ರ ನಾಮದಿಂದ ಪ್ರಸಿದ್ಧವಾಗುವದು. ನನ್ನ ಅಂಶದಿಂದ ಪ್ರಕಟವಾದ ರುದ್ರನ ಸಾಮರ್ಥ್ಯವು ನನಗಿಂತ ಕಡಿಮೆಯಾಗುವದಿಲ್ಲ. ಇದು ನನ್ನ ಶಿವರೂಪವು. ರುದ್ರರೂಪವು ಪ್ರಕಟವಾದಾಗ ಅದು ಶಿವತುಲ್ಯವೇ ಆಗುವದು. ಹಾಗಿದ್ದರೂ ನನ್ನ ಶಿವರೂಪವು ಸನಾತನವಾಗಿರುವದು. ಅದು ಎಲ್ಲ ಅವತಾರಗಳ ಮೂಲಭೂತವಾಗಿರುವದು. ಈ ನನ್ನ ಸ್ವರೂಪವು ಸತ್ಯ, ಜ್ಞಾನ, ಅನಂತ ಬ್ರಹ್ಮವಾಗಿದೆ. ನಾನು ನಿನ್ನ ಭ್ರುಕುಟಿ ಯಿಂದ ಉತ್ಪನ್ನನಾಗುವೆನು. 'ಹರನು ತಾಮಸಪ್ರಕೃತಿಯವನು' ಎಂದು ಗುಣವರ್ಣನೆ ಮಾಡಲ್ಪಡುವದು. ವಾಸ್ತವವಾಗಿ ಆ ಅಹಂಕಾರವನ್ನು ಕೇವಲ ತಾಮಸವೆಂದು ಭಾವಿಸಬಾರದು; ಅದು ಸಾತ್ವಿಕವೆಂದು ತಿಳಿಯಬೇಕು. ಈ ಸಾತ್ವಿಕ ತಾಮಸ ಭೇದಗಳು ನಾಮಮಾತ್ರವಾಗಿದ್ದು ಹಾಗೆ ವಸ್ತುತಃ ಇರುವದಿಲ್ಲ. ರುದ್ರನು ಪ್ರಳಯಕಾರಿಯಿರುವನು. ಉಮಾನಾಮದಿಂದ ಪ್ರಸಿದ್ಧಳಾದ ಪ್ರಕೃತಿ ದೇವಿಯು ಶಿವಶಕ್ತಿಯು. ಇವಳ ಶಕ್ತಿಭೂತಳಾದ ವಾಗ್ದೇವಿಯು ನಿನ್ನ ಸೇವನೆ ಮಾಡುವಳು. ಮತ್ತೊಂದು ಶಕ್ತಿರೂಪ ಲಕ್ಷ್ಮೀದೇವಿಯು ಭಗವಾನ್ ವಿಷ್ಣುವನ್ನು ಆಶ್ರಯಿಸುವಳು. ಕಾಲಿಯೆಂಬ ಶಕ್ತಿದೇವಿಯು ನನ್ನ ಅಂಶಭೂತನಾದ ರುದ್ರನನ್ನು ಸೇವಿಸುವಳು.

ಮಮೇವ ಹೃದಯೇ ವಿಷ್ಣುರ್ವಿಷ್ಣೋಶ್ಚ ಹೃದಮೇಹ್ಯಹಂ !
ಉಭಯೋರಂತಂ ಯೋ ವೈ ನ ಜಾನಾತಿ ಮತೋ ಮಮ

(ಶಿ.ಪು.ರು.ಸೃ. ೯ ೫೫–೫೬)

ಬ್ರಹ್ಮನಾದ ನೀನು ಸೃಷ್ಟಿ ಕಾರ್ಯ ಮಾಡು; ವಿಷ್ಣುವು ರಕ್ಷಣೆ ಮಾಡಲಿ, ರುದ್ರನು ಪ್ರಳಯ ಕಾರ್ಯ ನೆರವೇರಿಸುವನು. ನಾವು ಮೂವರೂ ವಸ್ತುತಃ ಒಂದೇ ಆಗಿರುವೆವು. ನನ್ನ ಹೃದಯದಲ್ಲಿ ವಿಷ್ಣುವಿರುವನು. ವಿಷ್ಣುವಿನ ಹೃದಯದಲ್ಲಿ ನಾನಿರುವೆನು. ಹರಿ–ಹರರಲ್ಲಿ ವಿಭೇದ ಮಾಡದವರು ನನಗೆ ಪ್ರಿಯರಾಗುವರು. ಹರಿಯೇ, ನೀನು ಲೋಕಕಲ್ಯಾಣಾರ್ಥವಾಗಿ ನಾನಾ ಪ್ರಕಾರದ ಅವತಾರ ತೆಗೆದುಕೊಂಡು ಧರ್ಮಸ್ಥಾಪನೆ ಮಾಡುವೆ. ರುದ್ರಭಕ್ತರಾದವರು ನಿನ್ನ ನಿಂದೆ ಮಾಡಿದರೆ ಅವರ ಪುಣ್ಯವು ನಷ್ಟವಾಗಿ ಹೋಗುವದು. ಪುರುಷೋತ್ತಮ ವಿಷ್ಣುವೇ, ನಿನ್ನ ದ್ವೇಷ ಮಾಡುವವರು ನರಕಭಾಜನರಾಗುವರು.

ಶಿವನು ಈ ಪ್ರಕಾರ ಹೇಳಿ, ಶಿವಪೂಜೆಯ ವಿಧಾನವನ್ನು ಅವರಿಗೆ ತಿಳಿಸಿ ಅಂತರ್ಧಾನನಾದನು. ನಾರದಾ, ಸೃಷ್ಟಿಯನ್ನು ಉತ್ಪನ್ನ ಮಾಡುವ ಇಚ್ಛೆಯಿಂದ ನಾನು ಭಗವಾನ್ ಶಿವ ಹಾಗೂ ವಿಷ್ಣು ಇವರನ್ನು ಸ್ಮರಿಸಿ ಅಂಜಲಿಯಿಂದ ನೀರನ್ನು ಮೇಲಕ್ಕೆ ತೂರಿದೆನು. ಆಗ ಅದರಲ್ಲಿ ಇಪತ್ತುನಾಲ್ಕು ತತ್ವಗಳ ಸಮೂಹವೆಂದು ಹೇಳಲ್ಪಡುವ ಒಂದು ಅಂಡವು ಪ್ರಕಟವಾಯಿತು. ಆ ವಿರಾಟ್ ಆಕಾರದ ಅಂಡವು ಜಡರೂಪವಾಗಿತ್ತು. ಆಗ ನಾನು ವಿಷ್ಣುವನ್ನು ಪ್ರಾರ್ಥಿಸಿದೆನು. ಅವನು ಪ್ರಸನ್ನತೆಯಿಂದ–ಬ್ರಹ್ಮನ್, ನೀನು ವರವನ್ನು ಕೇಳು. ಭಗವಾನ್ ಶಿವನ ಕೃಪೆಯಿಂದ ನಿನ್ನ ಸಲುವಾಗಿ ಅದೇಯವಾದುದು ಯಾವದೂ ಇಲ್ಲ.

ಬ್ರಹ್ಮಪ್ರಭುವೇ, ನನ್ನ ಮೇಲೆ ಕೃಪೆ ಮಾಡು. ಇಪ್ಪತ್ತುನಾಲ್ಕು ತತ್ವಗಳಿಂದ ಕೂಡಿದ ಈ ಅಂಡವು ಅಚೇತನವಾಗಿದೆ. ಇದನ್ನು ನೀನು ಚೇತನಗೊಳಿಸಬೇಕು.

ಕೂಡಲೆ ವಿಷ್ಣುವು ಅಂಡದಲ್ಲಿ ಪ್ರವೇಶ ಮಾಡಿದನು. ಸಹಸ್ರ ಮಸ್ತಕ, ಸಹಸ್ರ ನೇತ್ರ, ಸಹಸ್ರ ಪಾದಗಳಿಂದ ಕೂಡಿದ ಮಹಾವಿಷ್ಣುವು ಅಂಡದ ತುಂಬ ವ್ಯಾಪ್ತನಾದನು. ವಿರಾಟ್ ಅಂಡದಲ್ಲಿ ವ್ಯಾಪಿಸಿದ್ದರಿಂದ ಆ ಪ್ರಭುವು ವೈರಾಜ ಪುರುಷನೆಂದು ಕರೆಯಿಸಿಕೊಂಡನು. ಪಂಚಮುಖ ಪರಮೇಶ್ವರನು ತನಗಾಗಿ ಕೈಲಾಸ ನಗರವನ್ನು ನಿರ್ಮಾಣ ಮಾಡಿದನು. ವಿಷ್ಣುವಿಗಾಗಿ ವೈಕುಂಠ ನಗರವು ನಿರ್ಮಾಣವಾಯಿತು. ನನಗಾಗಿ ಸತ್ಯಲೋಕವು ಆವಿರ್ಭವಿಸಿತು. ನಾರದಾ, ಮೊದಲು ನನ್ನಿಂದ ತಾಮಸ ಸೃಷ್ಟಿಯು ನಿರ್ಮಾಣವಾಯಿತು. ತರುವಾಯ ವೃಕ್ಷಾದಿಗಳು ಪ್ರಾದುರ್ಭವಿಸಿದವು. ಬಳಿಕ ಪಶು ಪಕ್ಷಿಗಳು ಉತ್ಪನ್ನವಾದವು. ಅನಂತರದಲ್ಲಿ ಮನುಷ್ಯಸೃಷ್ಟಿಯು ಹುಟ್ಟಿತು. ಆಮೇಲೆ ಸನಕ–ಸನಂದನ,

ಸನತ್ಕುಮಾರ, ಸನತ್ಸುಜಾತರು ನನ್ನ ಮನದಿಂದ ಉತ್ಪನ್ನರಾದರು. ಈ ಮಾನಸ ಪುತ್ರರು ವಿರಾಗಿಗಳು. ಇವರಿಂದ ಸೃಷ್ಟಿ ಕಾರ್ಯವು ಸಾಗದಾಯಿತು. ತರುವಾಯ ನನ್ನ ಭ್ರುಕುಟಿಯಿಂದ ಭಗವಾನ್ ಶಿವನು ಅರ್ಧನಾರಿ ನಟೇಶ್ವರ ರೂಪದಿಂದ ಪ್ರಕಟಸಾದನು. ಬಳಿಕ ದೇವಾಧಿದೇವ ಮಹೇಶ್ವರನಿಗೆ ಸಮಾನರಾದ ಏಕಾದಶ ರುದ್ರರ ಸೃಷ್ಟಿಯಾಯಿತು.

ಮಹೇಶ್ವರ ವಿಧಾತಾ, ಜನನ–ಮರಗಳಿಂದ ಯುಕ್ತವಾದ ಅಶೋಭನ ಜೀವಿಗಳ ಸೃಷ್ಟಿಯನ್ನು ನಾನು ಮಾಡುವುದಿಲ್ಲ. ದುಃಖಸಾಗರದಲ್ಲಿ ಮುಳುಗಿದ ಜೀವಿಗಳನ್ನು ಉದ್ಧಾರ ಮಾಡುವ ಕಾರ್ಯವನ್ನು ಮಾತ್ರ ನಾನು ಮಾಡುವೆನು. ನೀನು ನಿನ್ನ ಇಷ್ಟವಿದ್ದಂತೆ ಸೃಷ್ಟಿ ಕಾರ್ಯವನ್ನು ಪ್ರಾರಂಭಿಸಬಹುದು.

ಮಹೇಶ್ವರನೂ ವಿಷ್ಣುವೂ ಅಂತರ್ಧಾನರಾದ ಬಳಿಕ ನಾನು ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಮೊದಲಾದವುಗಳನ್ನು ಸೃಷ್ಟಿಸಿದೆನು, ನಾರದಾ, ತರುವಾಯ ನಾನು ನೇತ್ರಗಳಿಂದ ಮರೀಚಿಯನ್ನೂ, ಹೃದಯದಿಂದ ಭೃಗುವನ್ನೂ, ಶಿರದಿಂದ ಅಂಗಿರಾನನ್ನೂ, ವ್ಯಾನ ವಾಯುವಿನಿಂದ ಪುಲಹನನ್ನೂ, ಉದಾನವಾಯುವಿನಿಂದ ಪುಲಸ್ತ್ಯನನ್ನೂ, ಸಮಾನವಾಯುವಿನಿಂದ ವಸಿಷ್ಠನನ್ನೂ, ಅಪಾನದಿಂದ ಕೃತುವನ್ನೂ ಎರಡೂ ಕಿವಿಗಳಿಂದ ಅತ್ರಿಯನ್ನೂ, ಪ್ರಾಣದಿಂದ ದಕ್ಷನನ್ನೂ, ತೊಡೆಯಿಂದ ನಿನ್ನನ್ನೂ, ಛಾಯೆಯಿಂದ ಕರ್ದಮನನ್ನೂ, ಸಂಕಲ್ಪಾದಿ ಸಮಸ್ತ ಸಾಧನಗಳಿಂದ ಧರ್ಮನನ್ನೂ ಉತ್ಪನ್ನ ಮಾಡಿದೆನು. ತರುವಾಯ ನನ್ನ ಅಂಗದಿಂದ ದೇವತೆಗಳೂ ಅಸುರರೂ ಹುಟ್ಟಿದರು. ತರುವಾಯ ನನ್ನ ಶರೀರದ ಅರ್ಧವು ಸ್ತ್ರೀ ರೂಪವಾಯಿತು. ಅರ್ಧವು ಪುರುಷ ರೂಪವಾಯಿತು. ಪುರುಷ ರೂಪವೇ ಸ್ವಾಯಂಭುವ ಮನುವು, ಸ್ತ್ರೀರೂಪಕ್ಕೆ ಶತರೂಪಾ ಎಂಬ ನಾಮವು ಪ್ರಾಪ್ತವಾಯಿತು. ಸ್ವಾಯಂಭುವ ಮನುವು ಶತರೂಪೆಯ ಪಾಣಿಗ್ರಹಣ ಮಾಡಿದನು. ಅವರು ಮೈಥುನಜನಿತ ಸೃಷ್ಟಿಯ ನಿರ್ಮಾಣಕರಾದರು. ಈ ದಂಪತಿಗಳಿಂದ ಪ್ರಿಯವ್ರತ, ಉತ್ತಾನಪಾದ ಎಂಬಿಬ್ಬರು ಪುತ್ರರೂ, ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂವರು ಕನ್ಯೆಯರೂ ಜನಿಸಿದರು. ಆಕೂತಿಯು ರುಚಿ ಪ್ರಜಾಪತಿಯನ್ನೂ, ದೇವಹೂತಿಯು ಕರ್ದಮ ಪ್ರಜಾಪತಿಯನ್ನೂ ಪ್ರಸೂತಿಯು ದಕ್ಷಪ್ರಜಾಪತಿಯನ್ನೂ ವಿವಾಹವಾದರು. ಅವರ ಸಂತಾನ ಪರಂಪರೆಯಿಂದ ಸಂಪೂರ್ಣ ಚರಾಚರ ಜಗತ್ತು ವ್ಯಾಪ್ತವಾಗಿರುವದು.

ರುಚಿ ಋಷಿಯಿಂದ ಆಕೂತಿಯ ಗರ್ಭದಲ್ಲಿ ಯಜ್ಞ ಮತ್ತು ದಕ್ಷಿಣಾ ಎಂಬ ಹೆಸರಿನ ಸ್ತ್ರೀ–ಪುರುಷರ ಜೋಡಿಯು ಉತ್ಪನ್ನವಾಯಿತು. ಯಜ್ಞ–ದಕ್ಷಿಣೆಯ ರಿಂದ ಹನ್ನೆರಡು ಪುತ್ರರು ಜನಿಸಿದರು. ನಾರದಾ, ಕರ್ದಮಋಷಿಯಿಂದ ದೇವಹೂತಿಯ ಗರ್ಭದಲ್ಲಿ ಬಹಳ ಪುತ್ರಿಯರಾದರು. ಕಪಿಲನೆಂಬ ಒಬ್ಬನೇ ಪುತ್ರನು ಜನಿಸಿದನು. ಪ್ರಸೂತಿಯು ದಕ್ಷನಿಂದ ಇಪ್ಪತ್ತು ನಾಲ್ಕು ಕನ್ಯೆಯರನ್ನು ಪಡೆದಳು. ದಕ್ಷನು ತನ್ನ ಶ್ರದ್ಧಾ ಮೊದಲಾದ ಹದಿಮೂರು ಕನ್ಯೆಯರನ್ನು ಧರ್ಮನಿಗೆ ಕೊಟ್ಟನು. ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ ಕ್ರಿಯಾ, ಬುದ್ಧಿ, ಲಜ್ಜಾ, ವಸು, ಶಾಂತಿ, ಸಿದ್ಧಿ, ಕೀರ್ತಿ ಇವರು ಹದಿಮೂರು ಜನರು ಧರ್ಮನ ಪತ್ನಿಯರು. ಉಳಿದ ಹನ್ನೊಂದು ಕನ್ಯೆಯರಲ್ಲಿ ಖ್ಯಾತಿಯನ್ನು ಭೃಗುವೂ, ಸತಿಯನ್ನು ಶಿವನೂ, ಸಂಭೂತಿಯನ್ನು ಮರೀಚಿಯೂ,ಸ್ಮೃತಿಯನ್ನು ಅಂಗಿರಾಮುನಿಯೂ, ಪ್ರೀತಿಯನ್ನು ಪುಲಸ್ತ್ಯನೂ, ಕ್ಷಮೆಯನ್ನು ಪುಲಹನೂ, ಸಂನ್ನತಿಯನ್ನು ಮುನಿಶ್ರೇಷ್ಠನಾದ ಕೃತುವೂ, ಅನಸೂಯೆಯನ್ನು ಅತ್ರಿಯೂ, ಊರ್ಜಾಳನ್ನು ವಸಿಷ್ಠನೂ, ಸ್ವಾಹಾ ಮತ್ತು ಸ್ವಧಾರನ್ನು ಅಗ್ನಿಯೂ ಮತ್ತು ಪಿತೃಗಳೂ ವಿವಾಹ ಮಾಡಿಕೊಂಡರು. ಭೃಗು ಮೊದಲಾದ ಮುನಿಶ್ರೇಷ್ಠರು ಸಾಧಕರಿರುವರು. ಅವರ ಸಂತಾನವು ಚರಾಚರ ಪ್ರಾಣಿಸಹಿತವಾಗಿ ತ್ರಿಲೋಕವನ್ನೆಲ್ಲ ವ್ಯಾಪಿಸಿರುವದು.

ನಾರದಾ, ಅಂಬಿಕಾಪತಿ ಮಹಾದೇವನ ಆಜ್ಞೆಯಿಂದ ಪಶುಪಕ್ಷಿ ಕ್ರಿಮಿ ಕೀಟಕಗಳೂ ಶ್ರೇಷ್ಠ ದ್ವಿಜರೂ ಉತ್ಪನ್ನರಾದರು. ಕಲ್ಪಭೇದದಿಂದ ದಕ್ಷನಿಗೆ ಅರವತ್ತು ಕನ್ಯೆಯರು ಜನಿಸಿದರು. ಧರ್ಮನು ಹತ್ತು ಕನ್ಯೆಯರನ್ನು, ಚಂದ್ರಮನು ಇಪ್ಪತ್ತೇಳು ಕನ್ಯೆಯರನ್ನು, ಕಶ್ಯಪನು ಹದಿಮೂರು ಕನ್ಯೆಯರನ್ನೂ, ನಾಲ್ಕು ಕನ್ಯೆಯರನ್ನು ತಾರ್ಕ್ಷ್ಯನೂ ವರಿಸಿದರು. ಇವರ ಸಂತಾನವು ತ್ರಿಲೋಕವನ್ನು ವ್ಯಾಪಿಸಿರುವದು. ಕಶ್ಯಪನ ಸಂತಾನ ಶೂನ್ಯವಾದದ್ದು ಸೃಷ್ಟಿಯಲ್ಲಿ ಯಾವುದೂ ಇಲ್ಲ.

ಮುನಿಶ್ರೇಷ್ಠ ನಾರದಾ, ಮಹೇಶ್ವರನ ಆಜ್ಞೆಯಂತೆ ನಾನು ಸೃಷ್ಟಿಯನ್ನು ನಿರ್ಮಾಣ ಮಾಡಿದೆನು. ದಕ್ಷಪುತ್ರಿಯಾದ ಸತಿದೇವಿಯು ಭಗವಾನ್ ಮಹೇಶ್ವರನ ಪಾಣಿಗ್ರಹಣ ಮಾಡಿದಳು. ಸತಿದೇವಿಯು ತಂದೆಯ ಯಜ್ಞದಲ್ಲಿ ಅಪಮಾನಿತಳಾಗಿ ತನ್ನ ಪಾರ್ಥಿವ ಶರೀರವನ್ನು ಯೋಗಾಗ್ನಿಯಿಂದ ಭಸ್ಮಗೊಳಿಸಿದಳು. ದೇವತೆಗಳ ಪ್ರಾರ್ಥನೆಯಿಂದ ಅವಳು ಪರ್ವತರಾಜನ ಪುತ್ರಿಯಾಗಿ ಜನಿಸಿ ಮಹಾದೇವನನ್ನು ಮದುವೆಯಾದಳು. ಈ ಜಗತ್ತಿನಲ್ಲಿ ಅವಳ ಸಹಸ್ರಾರು

ನಾಮಗಳು ಪ್ರಸಿದ್ಧವಾಗಿವೆ. ಕಾಲಿಕಾ, ಚಂಡಿಕಾ, ಭದ್ರಾ, ಚಾಮುಂಡಾ, ವಿಜಯಾ, ಜಯಾ, ಜಯಂತಿ, ಭದ್ರಕಾಳಿ. ದುರ್ಗಾ, ಭಗವತಿ, ಕಾಮಾಖ್ಯಾ, ಕಾಮದಾ, ಅಂಬಾ, ಮೃಡಾನಿ, ಸರ್ವಮಂಗಲಾ ಮೊದಲಾದ ಸಹಸ್ರಾರು ಸಂಖ್ಯೆಯಲ್ಲಿ ಅವಳ ನಾಮಾವಳಿಗಳಿರುವವು. ದೇವಋಷಿಯೆ, ಶ್ರೀಮನ್ಮಹಾದೇವನ ಆಜ್ಞೆಯಂತೆ ನಾನು ಸೃಷ್ಟಿ ನಿರ್ಮಾಣ ಮಾಡಿದೆನು.

## ಕೈಲಾಸ ಗಮನ

ನಾರದ–ಭಗವನ್, ಭಕ್ತವತ್ಸಲ ಭಗವಾನ್ ಶಂಕರನು ಕೈಲಾಸ ಪರ್ವತದ ಮೇಲೆ ಯಾವಾಗ ಹೋದನು? ಪರಿಪೂರ್ಣಮಂಗಲವಿಗ್ರಹ ಮಹಾದೇವನು ಅಲ್ಲಿ ಏನು ಮಾಡಿದನು? ಕುಬೇರನೊಡನೆ ಅವನ ಮೈತ್ರಿಯು ಯಾವಾಗ ಆಯಿತು? ಎಲ್ಲ ಸಂಗತಿಯನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವು ನನ್ನಲ್ಲಿ ಉತ್ಪನ್ನವಾಗಿದೆ.

ಬ್ರಹ್ಮ–ನಾರದಾ, ಭಗವಾನ್ ಚಂದ್ರಮೌಳಿ ಶಂಕರನ ಚರಿತ್ರವನ್ನು ನಿನಗೆ ತಿಳಿಸುವೆನು. ಕಾಂಪಿಲ್ಯ ನಗರದಲ್ಲಿ ಯಜ್ಞದತ್ತನೆಂಬ ಬ್ರಾಹ್ಮಣನಿದ್ದನು. ಅವನು ಸದಾಚಾರಿಯಾಗಿದ್ದನು. ಅವನಿಗೆ ಗುಣನಿಧಿಯೆಂಬ ಮಗನಿದ್ದನು. ಗುಣನಿಧಿಯು ದುರಾಚಾರಿಯೂ ಜೂಜುಗಾರನೂ ಆಗಿದ್ದನು. ಆದುದರಿಂದ ಯಜ್ಞದತ್ತನು ಪುತ್ರನನ್ನು ತ್ಯಾಗ ಮಾಡಿದನು. ಗುಣನಿಧಿಯು ಹಸಿವೆಯಿಂದ ಕಂಗಾಲಾದನು. ಶಿವಮಂದಿರದಲ್ಲಿ ನೈವೇದ್ಯವಿರಬಹುದೆಂಬ ಭಾವನೆಯಿಂದ ಅವನು ಮಂದಿರ ಪ್ರವೇಶ ಮಾಡಿದನು. ಗರ್ಭಗಾರದಲ್ಲಿ ಅಂಧಕಾರವಿತ್ತು. ಆಗ ಅವನು ತನ್ನ ವಸ್ತ್ರಕ್ಕೆ ಬೆಂಕಿಯನ್ನು ಹಚ್ಚಿ ಬೆಳಕು ಮಾಡಿದನು. ತರುವಾಯ ಚೌರ್ಯದ ಅಪರಾಧಕ್ಕಾಗಿ ಅವನಿಗೆ ಪ್ರಾಣದಂಡನೆಯಾಯಿತು. ಕುಕರ್ಮಕ್ಕಾಗಿ ಯಮ ದೂತರು ಅವನನ್ನು ಬಂಧಿಸಿದರು. ಅಷ್ಟರಲ್ಲಿ ಭಗವಾನ್ ಶಂಕರನ ಪಾರ್ಷದರು ಅಲ್ಲಿ ಬಂದು ಗುಣನಿಧಿಯನ್ನು ಬಿಡಿಸಿದರು. ಶಿವಗಣದ ಸಂಗದಿಂದ ಅವನ ಹೃದಯವು ಶುದ್ಧವಾಯಿತು. ಪರಮೇಶ್ವರನಿಗೆ ದೀಪದಾನ ಮಾಡಿದ್ದರಿಂದ ಅವನು ಪುಣ್ಯಮಯನಾಗಿದ್ದನು. ಶಿವಗಣದ ಸಹವಾಸದಿಂದ ಅವನ ಮನವೂ ಪವಿತ್ರವಾಗಿತ್ತು, ಅವನು ಶಿವಲೋಕದಲ್ಲಿ ದಿವ್ಯಭೋಗಗಳನ್ನು ಅನುಭವಿಸಿದನು.

ಕಾಲಾಂತರದಿಂದ ಕಲಿಂಗರಾಜ ಅರಿಂದವನ ಪುತ್ರನಾಗಿ ಜನಿಸಿದನು. ಅವನ ಹೆಸರು ದಮನೆಂದಿತ್ತು. ದಮನು ನಿರಂತರವಾಗಿ ಶಿವಪೂಜೆ, ಶಿವಭಜನೆ, ಶಿವಜಪಗಳಲ್ಲಿ ಮಗ್ನನಾಗಿರುತ್ತಿದ್ದನು. ಅವನು ತಂದೆಯ ತರುವಾಯ ಸಿಂಹಾಸನವನ್ನೇರಿದನು. ಅವನು ರಾಜ್ಯದಲ್ಲಿಯ ಪ್ರತಿಯೊಂದು ಶಿವಾಲಯದಲ್ಲಿಯೂ ದೀಪಗಳನ್ನು ಪ್ರಜ್ವಲಿಸುವಂತೆ ಮಾಡಿದನು. ದೀಪದಾನದ ಫಲವಾಗಿ ಅವನು ಜನ್ಮಾಂತರದಲ್ಲಿ ಅಲಕಾವತಿನಗರದ ಸ್ವಾಮಿಯಾದನು. ಅವನಿಗೆ ದಿಕ್ಪಾಲಕ ಪದವೂ ದೊರೆಯಿತು. ಶಿವಾಲಯಗಳಲ್ಲಿ ದೀಪದಾನ ಮಾಡಿದ್ದರಿಂದಲೂ, ಶಿವಪೂಜೆ, ಶಿವಜಪ, ಶಿವಭಜನೆಗಳಿಂದಲೂ ಅವನು ಮಹಾಪದವಿಯನ್ನು ಹೊಂದಿದ್ದಲ್ಲದೆ, ಶಿವನ ಮೈತ್ರಿಯನ್ನು ನಿರಂತರವಾಗಿ ದೊರಕಿಸಿಕೊಂಡನು. ಶಿವನು ಅವನ ಮೇಲೆ ಪ್ರಸನ್ನನಾದನು.

ನಾರದಾ, ಪದ್ಮಕಲ್ಪದಲ್ಲಿಯ ಸಂಗತಿಯನ್ನು ಹೇಳುವೆನು, ಕೇಳು. ನನ್ನ ಮಾನಸಪುತ್ರ ಪುಲಸ್ತ್ಯನಿಂದ ವಿಶ್ರಾವನು ಜನಿಸಿದನು. ವಿಶ್ರವನ ಪುತ್ರನು ವೈಶ್ರವಣ (ಕುಬೇರ)ನು. ಇವನು ತ್ರಿನೇತ್ರಧಾರಿ ಮಹಾದೇವನ ಆರಾಧನೆ ಮಾಡಿದನು. ಅವನಿಗೆ ಅಲಕಾಪುರಿಯ ಆಧಿಪತ್ಯವು ದೊರೆಯಿತು. ಪದ್ಮಕಲ್ಪವು ಮುಗಿದೊಡನೆಯೆ ಮೇಘವಾಹನಕಲ್ಪವು ಪ್ರಾರಂಭವಾಯಿತು. ಆ ಕಲ್ಪದಲ್ಲಿ ಕುಬೇರನು ಯಜ್ಞದತ್ತನ ಪುತ್ರನಾದನು. ಅವನು ಕಾಶೀಪುರಿಯಲ್ಲಿ ತನ್ಮಯತೆ ಯಿಂದ ಶಿವನ ಧ್ಯಾನದಲ್ಲಿ ಮಗ್ನನಾದನು. ಅವನು ಶಿವಲಿಂಗ ಪ್ರತಿಷ್ಠೆ ಮಾಡಿ ಬಹುಕಾಲದವರೆಗೆ ತಪಾಚರಣೆ ಮಾಡಿದ ಬಳಿಕ ಶಿವನು ಪ್ರಸನ್ನನಾದನು. ಭಗವಾನ್ ವಿಶ್ವನಾಥನು ವಿಶಾಲಾಕ್ಷಿ ಉಮಾದೇವಿಯೊಡನೆ ಯಜ್ಞದತ್ತ ಪುತ್ರನ ಬಳಿಗೆ ಬಂದು, ತನ್ನ ಮೆಚ್ಚುಗೆಯನ್ನು ವ್ಯಕ್ತಮಾಡಿ ಇಚ್ಛಿತ ವರವನ್ನು ಬೇಡಬೇಕೆಂದು ತಿಳಿಸಿದನು.

ಮಹೇಶ್ವರನು ಹೀಗೆ ನುಡಿದ ಕೂಡಲೆ ಕುಬೇರನು ಕಣ್ತೆರೆದನು. ಉಮಾವಲ್ಲಭ ಶ್ರೀಕಂಠನು ಸಹಸ್ರ ಸೂರ್ಯರಂತೆ ಪ್ರಕಾಶಮಾನವಾಗಿ ಎದುರಿಗೆ ನಿಂತಿದ್ದನು. ಭಗವಂತನ ದಿವ್ಯಪ್ರಕಾಶದಿಂದ ಕುಬೇರನ ಕಣ್ಣು ಕುಕ್ಕಿದವು. ಆಗ ಕುಬೇರನು ಅವನಿಗೆ ಪ್ರಣಾಮಗಳನ್ನರ್ಪಿಸಿ—ದೇವಾ, ನಿನ್ನನ್ನು ಕಣ್ತುಂಬ ನೋಡುವಂತೆ ದೃಷ್ಟಿಯನ್ನನುಗ್ರಹಿಸು. ಚಂದ್ರಶೇಖರಾ, ಬೇರೆ ವರಗಳಿಂದ ನನಗೆ ಪ್ರಯೋಜನವೇನಿದೆ?

ಮಹೇಶ್ವರನು ಅವನ ತಲೆಯ ಮೇಲೆ ಹಸ್ತವನ್ನಿಟ್ಟನು. ಕೂಡಲೆ ಅವನಿಗೆ ದಿವ್ಯದೃಷ್ಟಿಯು ಪ್ರಾಪ್ತವಾಯಿತು. ಆಗ ಅವನು ಶಿವನ ಬಳಿಯಲ್ಲಿದ್ದ ಉಮೆಯನ್ನು ದಿಟ್ಟಿಸಿನೋಡಹತ್ತಿದನು. ಒಬ್ಬ ಸುಂದರ ತರುಣಿಯು ಮಹಾದೇವನ ಬಳಿಯಲ್ಲಿದ್ದುದನ್ನು ಕಂಡು ಅವನಿಗೆ ವಿಸ್ಮಯವಾಯಿತು. ಈ ಸ್ತ್ರೀಯು ಯಾವ ದೊಡ್ಡ ತಪಾಚರಣೆ ಮಾಡಿರುವಳೆಂದು ಶಿವಸನ್ನಿಧಿಯಲ್ಲಿ ವಾಸವಾಗಿರುವಳು ? ನನಗಿಂತಲೂ ಇವಳ ತಪಸ್ಸು ದೊಡ್ಡದಿದ್ದೀತೇ, ಎಂದು ಅವನು ಉಮೆಯನ್ನು ದಿಟ್ಟಿಸಿ ನೋಡತೊಡಗಿದನು.

ಉಮೆ–ಪ್ರಭೋ, ಈ ದುಷ್ಟ ತಪಸ್ವಿಯು ಒಂದೇ ಸಮನಾಗಿ ನನ್ನನ್ನೇ ದಿಟ್ಟಿಸಿ ನೋಡುತ್ತಿರುವವನಲ್ಲ! ಇವನಿಗೆ ನೀನು ದಿವ್ಯದೃಷ್ಟಿಯನ್ನು ಕೊಟ್ಟಿದ್ದೇ ತಪ್ಪು!

ಶಿವ–ಉಮೇ, ಯಜ್ಞದತ್ತ ಕುಮಾರನಾದ ಇವನು ನಿನ್ನ ಪುತ್ರನೇ ಇರುವನು. ಇವನ ದೃಷ್ಟಿಯಲ್ಲಿ ಯಾವ ವಿಕಾರಗಳೂ ಇಲ್ಲ. ನಿನ್ನನ್ನು ನೋಡುವ ಇವನ ಎಡಗಣ್ಣೇ ಒಡೆದುಹೋಯಿತು. ಅವನು ನಿನ್ನ ತಪಸಿನ ವರ್ಣನೆ ಮಾಡುತ್ತಿರುವನು, ಎಂದು ಶಿವನು ಉಮೆಗೆ ಹೇಳಿ, ಯಜ್ಞದತ್ತಕುಮಾರನನ್ನುದ್ದೇಶಿಸಿ–ನೀನು ಅಲಕಾವತಿನಗರಿಗೆ ಒಡೆಯನಾಗುವೆ. ನಿನ್ನ ನಗರದ ಸಮೀಪದಲ್ಲಿದ್ದ ಕೈಲಾಸದಲ್ಲಿ ವಾಸಮಾಡುವೆನು. ನೀನು ನನ್ನ ಪರಮ ಭಕ್ತನೂ ಇರುವೆ; ಮಿತ್ರನೂ ಹೌದು. ನಿನ್ನ ವಾಮನೇತ್ರವು ಒಡೆದಿರುವದರಿಂದ ನೀನು ಪಿಂಗಲನೇತ್ರನಾಗುವೆ. ನೀನು ಕುಬೇರನೆಂದು ಪ್ರಸಿದ್ಧನಾಗುವೆ.

ಶಿವನು ಹೀಗೆ ಹೇಳಿ ಉಮೆಯೊಡನೆ ಕೈಲಾಸಕ್ಕೆ ತೆರಳಿದನು. ಕುಬೇರನು ಅಲಕಾವತಿ ನಗರಿಗೆ ಪ್ರಯಾಣ ಮಾಡಿದನು. ಭಗವಾನ್ ಶಿವನು ಕುಬೇರನಿಗೆ ಧನಾಧಿಪತಿಯ ಸ್ಥಾನವನ್ನು ಕೊಟ್ಟನು. ಶಿವನು ತನ್ನ ಪ್ರಮಥಗಣದೊಡನೆ ಕೈಲಾಸದಲ್ಲಿ ವಾಸಮಾಡತೊಡಗಿದನು. ಅವನು ದಕ್ಷಕುಮಾರಿಯಾದ ಸತಿದೇವಿಯನ್ನು ವಿವಾಹವಾದನು. ಭಗವಾನ್ ಶಂಭುವು ಸರ್ವತಂತ್ರ ಸ್ವತಂತ್ರನಿದ್ದು, ಯೋಗ ಪರಾಯಣನೂ, ಧ್ಯಾನ್ಯತತ್ಪರನೂ ಆಗಿ ಕೈಲಾಸಪರ್ವತದಲ್ಲಿ ಪತ್ನಿಯಾದ ಸತಿದೇವಿಯೊಡನೆ ವಾಸ ಮಾಡಿದನು.

## ರುದ್ರ ಸಂಹಿತಾ : ದ್ವಿತೀಯ (ಸತೀ) ಖಂಡ

# ಅರುಂಧತಿ

ನಾರದ–ಬ್ರಹ್ಮದೇವಾ, ಸತಿದೇವಿಯು ದಕ್ಷಪತ್ನಿಯ ಗರ್ಭದಿಂದ ಹೇಗೆ ಉತ್ಪನ್ನಳಾದಳು? ದಕ್ಷಪ್ರಜಾಪತಿಯ ರೋಷದಿಂದ ಅವಳೂ ಶರೀರ ತ್ಯಾಗವನ್ನು ಹೇಗೆ ಮಾಡಿದಳು? ಮುಂದೆ ಅವಳು ಹಿಮಾಲಯನ ಕನ್ಯೆಯಾಗಿ ಹೇಗೆ ಜನಿಸಿದಳು? ಶಿವನು ಕಾಮದೇವನನ್ನು ಹೇಗೆ ದಹನ ಮಾಡಿದನು? ಇವೆಲ್ಲ ಸಂಗತಿಗಳನ್ನು ನೀನು ಹೇಳಬೇಕು.

ಬ್ರಹ್ಮ–ನಾರದಾ, ನಿನಗೆ ದೇವೀಸತಿಯ ಹಾಗೂ ಪಾರ್ವತಿಯ ಪರಮ ಪಾವನಕರವಾದ ಕಥೆಗಳನ್ನು ತಿಳಿಸುವೆನು. ಯಥಾವಕಾಶವಾಗಿ ಕೇಳಬಹುದು. ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಅಂಗಿರಾ, ಕ್ರತು, ವಸಿಷ್ಠ, ನಾರದ, ದಕ್ಷ, ಭೃಗು ಮೊದಲಾದ ಮಾನಸಪುತ್ರರನ್ನು ಉತ್ಪನ್ನಮಾಡಿದ ಬಳಿಕ ನನ್ನ ಹೃದಯದಿಂದ ಮನೋಹರ ರೂಪದ ಒಬ್ಬ ಸುಂದರ ನಾರಿಯು ಉತ್ಪನ್ನಳಾದಳು. ಸಾಯಂಕಾಲ ದಲ್ಲಿ ಅವಳ ರೂಪ, ಸೌಂದರ್ಯಗಳು ಅತ್ಯಂತ ವಿಕಸಿತವಾಗುತ್ತಿದ್ದವು. ಅವಳು ನಿರಂತರವಾಗಿ ಮಂತ್ರ, ಜಪಗಳಲ್ಲಿ ನಿಮಗ್ನಳಾಗಿರುತ್ತಿದ್ದಳು. ಅವಳನ್ನು ನೋಡಿದರೆ ಮಹಾತಪಸ್ವಿಗಳು ಕೂಡ ಮೋಹಿತರಾಗುತ್ತಿದ್ದರು. ಅವಳ ಹೆಸರು ಸಂಧ್ಯೆ.

ತರುವಾಯ ನನ್ನ ಮನದಿಂದ ಒಬ್ಬ ಮನೋಹರ ಪುರುಷನು ಪ್ರಕಟನಾದನು. ಅವನು ಅತ್ಯಂತ ಸುಂದರನಾಗಿದ್ದನು. ಅವನ ಮೈಗೆ ಕೇಶರವು ಪೂಸಲ್ಪಟ್ಟಿತ್ತು. ಅದರ ಸುಗಂಧವು ನಾಸಿಕವನ್ನು ತಣಿಸುತ್ತಿತ್ತು. ಆ ಪುರುಷನು ನನ್ನನ್ನು ನೋಡಿ ಪ್ರಣಾಮ ಮಾಡಿ : ಬ್ರಹ್ಮನ್, ನಾನು ಯಾವ ಕಾರ್ಯ ಮಾಡಲಿ? ಎಂದು ವಿಚಾರಿಸಿದನು.

ಬ್ರಹ್ಮ–ಭದ್ರಪುರುಷಾ, ನೀನು ಪುಷ್ಪಗಳಿಂದ ರಚಿತವಾದ ಪಂಚ ಬಾಣಗಳಿಂದ ಪ್ರಾಯದ ಸ್ತ್ರೀ, ಪುರುಷರನ್ನು ಮೋಹಿತರನ್ನಾಗಿ ಮಾಡುತ್ತ ಸೃಷ್ಟಿಯ ಸನಾತನ ಕಾರ್ಯವನ್ನು ನೆರವೇರಿಸು. ಈ ಚರಾಚರ ತ್ರಿಭುವನದಲ್ಲಿ ಯಾವ ಜೀವವೂ ನಿನ್ನನ್ನೂ ತಿರಸ್ಕರಿಸಲಾರದು. ನೀನು ಗುಪ್ತವಾಗಿ ಪ್ರಾಣಿಗಳ ಹೃದಯದಲ್ಲಿ ಸಂಚಾರ ಮಾಡಿ ಅವರನ್ನು ಉನ್ಮತ್ತಗೊಳಿಸುವೆ. ನೀನು ಮನವನ್ನು ಮಥಿಸುವದರಿಂದ ನಿನ್ನ ಹೆಸರು ಮನ್ಮಥನೆಂದಾಗುವದು. ಮನೋಭವಾ, ನೀನು

ತ್ರಿಲೋಕಸುಂದರನಾಗಿರುವದರಿಂದ ನಿನ್ನನ್ನು ಕಾಮನೆಂದೂ, ತರುಣ ಸ್ತ್ರೀ-ಪುರುಷರನ್ನು ಮದೋನ್ಮತ್ತಗೊಳಿಸುವದರಿಂದ ಮದನನೆಂದೂ, ದರ್ಪದಿಂದ ಕೂಡಿರುವದರಿಂದ ದರ್ಪಕನೆಂದೂ, ಸದರ್ಪನಾಗಿರುವದರಿಂದ ಕಂದರ್ಪನೆಂದೂ, ನೀನು ರಹಸ್ಯವಾಗಿರುವದರಿಂದ ಅನಂಗನೆಂದೂ ಸಂಬೋಧಿಸಿ ಕೊಳ್ಳುವೆ. ನಾನು ಹೀಗೆ ಹೇಳಿದ ಬಳಿಕ ದಕ್ಷಪ್ರಜಾಪತಿಯು ತನ್ನ ಸ್ವೇದದಿಂದ ನಿರ್ಮಾಣ ಮಾಡಿದ ಜಗನ್ಮೋಹಿನಿಯಾದ ಸ್ತ್ರೀಯನ್ನು ಮನ್ಮಥನಿಗೆ ಒಪ್ಪಿಸಿದನು. ಅವಳ ಹೆಸರು ರತಿದೇವಿಯೆಂದೂ ಅವಳನ್ನು ವಿವಾಹವಾಗಿ ಸುಖಿಯಾಗಬೇಕೆಂದೂ ತಿಳಿಸಿದನು. ತರುವಾಯ ರತಿ-ಮನ್ಮಥರು ತಮ್ಮ ಸ್ಥಾನಕ್ಕೆ ಹೊರಟು ಹೋದರು.

ನಾರದ-ವಿಧಾತಾ, ಪಿತೃಗಳನ್ನು ಉತ್ಪನ್ನ ಮಾಡುವ ಸಂಧ್ಯೆಯ ಚರಿತ್ರವನ್ನು ತಿಳಿಸಬೇಕು.

ಬ್ರಹ್ಮ-ವಿಪ್ರಶ್ರೇಷ್ಠಾ, ನನ್ನ ಮಾನಸಪುತ್ರಿಯಾದ ಸಂಧ್ಯಾದೇವಿಯು ವಿರಕ್ತಳಾಗಿ ಚಂದ್ರಭಾಗಾ ನದಿಯು ಪ್ರಾದುರ್ಭವಿಸಿದ ಚಂದ್ರಭಾಗ ಪರ್ವತದಲ್ಲಿ ತಪಸ್ಸು ಮಾಡತೊಡಗಿದಳು. ಆಗ ನಾನು ನನ್ನ ಜ್ಞಾನಯೋಗಿ ಮಾನಸ ಪುತ್ರನಾದ ವಸಿಷ್ಠನನ್ನು ಕರೆದು, ಸಂಧ್ಯಾಕುಮಾರಿಗೆ ತಪದ ವಿಧಾನವನ್ನು ಉಪದೇಶಿಸಿ ಬರಬೇಕೆಂದು ತಿಳಿಸಿದೆನು. ತರುವಾಯ ವಸಿಷ್ಠನು ಬ್ರಹ್ಮಚಾರಿಯ ವೇಷದಿಂದ ನನ್ನ ಮಾನಸ ಪುತ್ರಿ ಸಂಧ್ಯಾದೇವಿಯು ತಪಸ್ಸು ಮಾಡುತ್ತಿದ್ದ ಚಂದ್ರಭಾಗ ಪರ್ವತಕ್ಕೆ ಹೋಗಿ ಅವಳನ್ನು ಭೆಟ್ಟಿಯಾಗಿ, ಭಗವಾನ್ ಶಂಭುವನ್ನು ಹೃದಯದಲ್ಲಿ ಧಾರಣಮಾಡಿ 'ಓಂ ನಮಃ ಶಂಕರಾಯ ಓಂ' ಮಂತ್ರವನ್ನು ಏಕಾಗ್ರಚಿತ್ತದಿಂದ ಜಪಿಸಬೇಕೆಂದು ಉಪದೇಶ ಮಾಡಿದನು. ತರುವಾಯ ಸಂಧ್ಯೆಯು ಅಲ್ಲಿಂದ ಬೃಹಲ್ಲೋಹಿತ ಸರೋವರ ತಟದಲ್ಲಿ ತಪಶ್ಚರ್ಯ ಮಾಡತೊಡಗಿದಳು. ಅವಳು ವಿಧ್ಯುಕ್ತವಾಗಿ ಭಗವಾನ್ ಶಂಕರನ ನಾಮ ಸ್ಮರಣೆ ಮಾಡತೊಡಗಿದಳು. ಅವಳು ಬಹು ಕಾಲದವರೆಗೆ ತಪಸ್ಸು ಮಾಡಿದ ಬಳಿಕ ಶಿವನು ಅವಳಿಗೆ ಪ್ರಸನ್ನನಾಗಿ ದರ್ಶನ ಕೊಟ್ಟನು. ಆಗ ಸಂಧ್ಯೆಯು ಯಾವ ಮಾತುಗಳನ್ನೂ ಆಡದೆ ಮೌನವಾಗಿ ಕುಳಿತಳು. ಮಹೇಶ್ವರನಿಗೆ ಅವಳ ಮನೋಭಾವವು ತಿಳಿಯಿತು. ಕೂಡಲೆ ಅವನು ಅವಳಿಗೆ ದಿವ್ಯದೃಷ್ಟಿಯನ್ನೂ ಜ್ಞಾನವನ್ನು ಕೊಟ್ಟು, ಅವಳ ಹೃದಯವನ್ನು ಪ್ರವೇಶಿಸಿದರು.

ತರುವಾಯ ಸಂಧ್ಯೆಯು ಮಹೇಶ್ವರನನ್ನು ಸ್ತುತಿಸತೊಡಗಿದಳು. ಅವಳು ಭಗವಂತನಿಗೆ ಅನಂತ ಪ್ರಣಾಮಗಳನ್ನರ್ಪಿಸಿದಳು. ತರುವಾಯ ಅವನನ್ನು ಸ್ತುತಿಸತೊಡಗಿದಳು:

ನಿರಾಕಾರಂ ಜ್ಞಾನಗಮ್ಯಂ ಪರಂಯನ್ನೈವ ಸ್ಥೂಲನ್ನಾಪಿ ಸೂಕ್ಷ್ಮಂ
ನಚೋಚ್ಚಂ ।
ಅಂತಶ್ಚಿಂತ್ಯಂ ಯೋಗಿಭಿಸ್ತಸ್ಯ ರೂಪಂ ತಸ್ಮೈ ತುಭ್ಯಂ ಲೋಕಕರ್ತ್ರೇ
ನಮೋಽಸ್ತು ॥
ಶರ್ವಂ ಶಾಂತಂ ನಿರ್ಮಲಂ ನಿರ್ವಿಕಾರಂ ಜ್ಞಾನಗಮ್ಯಂ
ಸ್ವಪ್ರಕಾಶೇಽವಿಕಾರಂ ।
ಖಾಧ್ವ ಪ್ರಖ್ಯಂ ಧ್ವಾಂತ ಮಾರ್ಗಾತ್ಪರಸ್ತಾದ್ ರೂಪಂ ಯಸ್ಯ ತ್ವಾಂ
ನಮಾಮಿ ಪ್ರಸನ್ನಂ ॥
ಏಕಂ ಶುದ್ಧಂ ದೀಪ್ಯಮಾನಂ ವಿನಾಜಾಂ ಚಿದಾನಂದಂ ಸಹಜಂ
ಚಾವಿಕಾರೀ ।
ನಿತ್ಯಾನಂದಂ ಸತ್ಯಭೂತಿಪ್ರಸನ್ನಂ ಯಸ್ಯ ಶ್ರೀದಂ ರೂಪಮಸ್ಮೈ ನಮಸ್ತೇ ॥
(ಶಿ. ಪು. ರು. ಸಂ. ಸ. ಖಂ. ೬ ೧೨–೧೪)

ನಿರಾಕಾರನೂ, ಜ್ಞಾನಗಮ್ಯನೂ, ಅಸ್ಥೂಲನೂ, ಅಸೂಕ್ಷ್ಮನೂ, ಉಚ್ಚನಲ್ಲದವನೂ, ಅನಂತನೂ, ಯೋಗಿಗಳ ಹೃದಯದಲ್ಲಿ ಚಿಂತನಸ್ವರೂಪನಾದವನೂ, ಲೋಕ ಸ್ರಷ್ಟಾರನೂ ಆದ ಭಗವಾನ್ ಶಿವನಿಗೆ ನಮಸ್ಕಾರವು. ಶರ್ವನೂ, ಶಾಂತ ಸ್ವರೂಪನೂ, ನಿರ್ಮಲನೂ, ನಿರ್ವಿಕಾರನೂ, ಜ್ಞಾನಗಮ್ಯನೂ, ಸ್ವಪ್ರಕಾಶಕನೂ, ನಿರ್ವಿಕಾರನೂ, ಆಕಾಶಪಥದಂತೆ ನಿರ್ಗುಣನೂ, ನಿರಾಕಾರನೂ, ಅಜ್ಞಾನಾಂಧಕಾರದಲ್ಲಿ ಕಾಣದಂತಹನೂ, ನಿತ್ಯ ಪ್ರಸನ್ನನೂ ಆದ ಶಿವನಿಗೆ ಪ್ರಣಾಮಗಳು. ಅದ್ವಿತೀಯರೂಪನೂ, ಶುದ್ಧನೂ, ಮಾಯೆಯ ಹೊರತು ಪ್ರಕಾಶಮಾನನಾದವನೂ, ಸಚ್ಚಿದಾನಂದಮಯನೂ, ಸಹಜ ನಿರ್ವಿಕಾರನೂ, ನಿತ್ಯಾನಂದಮಯನೂ, ಸತ್ಯನೂ, ಐಶ್ವರ್ಯಯುಕ್ತನೂ, ಪ್ರಸನ್ನನೂ, ಲಕ್ಷ್ಮೀದಾತನೂ ಆದ ಶಿವನಿಗೆ ನಮಸ್ಕಾರವು.

ನಾರದಾ, ಸಂಧ್ಯಾದೇವಿಯ ಸ್ತುತಿ ಪೂರ್ಣ ವಚನಗಳನ್ನು ಕೇಳಿ ಭಕ್ತವತ್ಸಲ ಪರಮೇಶ್ವರ ಶಂಕರನು ಪ್ರಸನ್ನನಾದನು. ಅವನು ದಯಾದ್ರವಿತನಾಗಿ ಹೇಳಿದನು :

ಮಹೇಶ್ವರ–ಭದ್ರೇ, ನಿನ್ನ ಉತ್ತಮ ತಪಶ್ಚರ್ಯಕ್ಕಾಗಿ ನಾನು ಪ್ರಸನ್ನ ನಾಗಿರುವೆನು. ನಿನಗೆ ಇಷ್ಟವಾದ ವರವನ್ನು ಕೇಳು. ನಾನು ನಿನ್ನ ಇಚ್ಛೆಯನ್ನು ಅವಶ್ಯವಾಗಿ ಈಡೇರಿಸಿಕೊಡುವೆನು.

ಸಂಧ್ಯಾದೇವಿ–ಮಹಾದೇವಾ, ನೀನು ನನ್ನ ಮೇಲೆ ಪ್ರಸನ್ನನಾದುದನ್ನು ಕಂಡು, ನಾನು ವರವನ್ನು ಕೇಳಲು ಪಾತ್ರಳಾಗಿರುವೆನೆಂದು ಭಾವಿಸುವೆನು. ಜಗತ್ತಿನಲ್ಲಿ ಎಲ್ಲ ಪ್ರಾಣಿಗಳೂ ಶೈಶವದಲ್ಲಿ ಕಾಮಾಸಕ್ತರಾಗಬಾರದು. ನನ್ನಲ್ಲಿ ಸಕಾಮ ದೃಷ್ಟಿಯು ಉತ್ಪನ್ನವಾಗಬಾರದು. ಯಾವ ಪುರುಷನಾದರೂ ನನ್ನನ್ನು ಕಾಮುಕ ದೃಷ್ಟಿಯಿಂದ ಅವಲೋಕನ ಮಾಡಿದರೆ ಅವನು ಷಂಢನಾಗಬೇಕು.

ಮಹೇಶ್ವರ–ದೇವಿ, ನಿನ್ನ ಮನಸ್ಸಿನಂತೆ ನಿನಗೆ ವರಗಳನ್ನು ಕೊಟ್ಟಿರುವೆನು. ದಿವ್ಯರೂಪ ಸಂಪನ್ನನೂ, ತಪಸ್ವಿಯೂ ಮಹಾಭಾಗನೂ ಆದ ಮಹರ್ಷಿಯು ನಿನಗೆ ಪತಿಯಾಗುವನು. ನೀನು ಈ ಭೌತಿಕ ದೇಹವನ್ನು ಅಗ್ನಿಗೆ ಸಮರ್ಪಣೆ ಮಾಡುವ ಪ್ರತಿಜ್ಞೆಯನ್ನು ಹಿಂದೆಯೇ ಮಾಡಿರುವೆ. ಚಂದ್ರಭಾಗಾನದಿಯ ತಟದಲ್ಲಿಯ ತಪಸ್ಯಾಶ್ರಮದಲ್ಲಿ ಮುನಿವರ ಮೇಧಾತಿಥಿಯು ಹನ್ನೆರಡು ವರ್ಷಗಳವರೆಗೆ ಮಹಾಯಜ್ಞವನ್ನು ಇದೀಗ ಪ್ರಾರಂಭಿಸಿರುವನು. ನೀನು ಅಲ್ಲಿಗೆ ಹೋಗಿ, ಈ ದೇಹವನ್ನು ಅಗ್ನಿಗೆ ಆಹುತಿ ಕೊಡು. ಅಲ್ಲಿ ನಿನ್ನನ್ನು ಯಾರೂ ಕಾಣಲಾರರು. ನೀನು ಅಗ್ನಿ ಪ್ರವೇಶ ಮಾಡಿದ ಕೂಡಲೆ ಅಗ್ನಿ ಜ್ವಾಲೆಯಲ್ಲಿ ತಪ್ತ ಸುವರ್ಣವರ್ಣದಂತೆ ಕಾಂತಿಯುಳ್ಳ ಬಾಲಿಕೆಯು ಪ್ರಾದುರ್ಭವಿಸಿದಳು. ಬಾಲಿಕೆಯು ದೊಡ್ಡವಳಾದ ಕೂಡಲೆ ಬ್ರಹ್ಮನ ಮಾನಸಪುತ್ರನಾದ ವಸಿಷ್ಠ ಮಹರ್ಷಿಯೊಡನೆ ವಿವಾಹವಾಯಿತು. ಭಗವಾನ್ ಶಂಕರನೂ,ಶ್ರೀಹರಿಯೂ, ನಾನೂ ಈ ವಿವಾಹ ಸಮಾರಂಭವನ್ನು ನೆರವೇರಿಸಿದೆವು. ಸಂಧ್ಯೆಯ ಪುನರ್ಜನ್ಮದ ಬಾಲಿಕೆಗೆ ಅರುಂಧತಿಯೆಂಬ ಹೆಸರು ಪ್ರಾಪ್ತವಾಯಿತು. ಇವಳು ಸತಿಶಿರೋ ಮಣಿಯರಲ್ಲಿ ಅಗ್ರೇಸರಳಾದಳು.

# ಸತೀದೇವಿ

ಬ್ರಹ್ಮ–ನಾರದಾ, ಮಹಾದೇವನು ಒಬ್ಬ ಕಮನೀಯ ಕಾಮಿನಿಯ ಪಾಣಿಗ್ರಹಣ ಮಾಡಬೇಕೆಂದು ನಾನು ಯೋಚಿಸಿದೆನು. ಆಗ ನಾನು ಮದನನನ್ನೂ, ಅವನ ಗೆಳೆಯ ವಸಂತನನ್ನೂ ಮಾರಗಣವನ್ನೂ ಭಗವಾನ್ ಶಿವನ ತಪೋಭಂಗ ಮಾಡುವ ಉದ್ದೇಶದಿಂದ ಕಳುಹಿಸಿದೆನು. ಆದರೆ ಯೋಗ ಯೋಗೇಶ್ವರನಾದ ಶಂಭುವನ್ನು ಮೋಹದಲ್ಲಿ ಕೆಡಹುವದು ಅವರಿಂದ ಸಾಧಿಸಲಿಲ್ಲ. ಆಗ ಅವರು ನನ್ನ ಬಳಿಗೆ ಬಂದು, ತಮ್ಮ ಅಸಮರ್ಥತೆಯನ್ನು ಒಪ್ಪಿಕೊಂಡು ಪ್ರಣಾಮ ಮಾಡಿ ಹೊರಟು ಹೋದರು. ಆಗ ನಾನು ದಕ್ಷ ಪ್ರಜಾಪತಿಯನ್ನು ಕರೆದು, ಭಗವತಿ ಜಗದಂಬೆಯನ್ನು ಪ್ರಾರ್ಥಿಸಿ, ಅವಳು ನಿನ್ನ ಪುತ್ರಿಯಾಗಿ ಜನಿಸುವಂತೆ ವರವನ್ನು ಪಡೆಯಬೇಕೆಂದು ಹೇಳಿಕಳುಹಿಸಿನೆನು. ಆಗ ಶಂಭುವು ವಿಷ್ಣುವಿನೊಡನೆ ಪ್ರತ್ಯಕ್ಷನಾಗಿ, ವಿಧಾತಾ, ನಿನ್ನ ಮನೋದಯವು ತಿಳಿಯಿತು. ನನ್ನ ಉತ್ಕೃಷ್ಟ ಸ್ವರೂಪವು ನಿನ್ನ ಅಂಗದಿಂದ ಪ್ರಕಟವಾಗುವದು. ಅವನಿಗೆ ರುದ್ರನೆಂದೆನ್ನುವರು. ಅದು ನನ್ನ ಪೂರ್ಣ ರೂಪವು. ತ್ರಿಮೂರ್ತಿಗಳಾದ ನಾವು ಮೂವರೂ ಒಂದೇ ರೂಪವಾಗಿರುವೆವು. ಉಮೆಯಾದರೂ ಮೂರು ರೂಪವಾಗುವಳು. ಒಂದು ರೂಪವು ಲಕ್ಷ್ಮಿಯು, ಮತ್ತೊಂದು ರೂಪವು ಸರಸ್ವತಿಯು, ಮೂರನೆಯ ರೂಪ ಸತಿಯು. ಸತಿಯನ್ನು ರುದ್ರನು ವರಿಸುವನು. ಲಕ್ಷ್ಮಿಯು ವಿಷ್ಣುವನ್ನೂ, ಸರಸ್ವತಿಯು ಬ್ರಹ್ಮನನ್ನೂ ವಿವಾಹವಾಗುವರು. ಸದಾಶಿವನು ಹೀಗೆ ಬ್ರಹ್ಮನಿಗೆ ಹೇಳಿ ಕೈಲಾಸಕ್ಕೆ ತೆರಳಿದನು. ವಿಷ್ಣುವು ವೈಕುಂಠಕ್ಕೆ ಹೊರಟುಹೋದನು.

ದೇವರ್ಷಿಯೆ, ದಕ್ಷ ಪ್ರಜಾಪತಿಯು ಕ್ಷೀರಸಾಗರದ ಉತ್ತರ ತಟದಲ್ಲಿ ಭಗವತಿ ಜಗದಂಬೆಯನ್ನು ಕುರಿತು ತಪಶ್ಚರ್ಯ ಮಾಡಿದನು. ಅವನು ಕೆಲವು ಕಾಲ ನೀರು ಕುಡಿದು ತಪಾಚರಣೆ ಮಾಡಿದನು. ಕೆಲವು ಕಾಲ ಕೇವಲ ವಾಯುವನ್ನು ಸೇವಿಸುತ್ತ ತಪಸ್ಸನ್ನು ಮಾಡಿದನು.

ಪ್ರಸೀದ ಭಗವತ್ಯಾದ್ಯೇ ಪ್ರಸೀದ ಶಿವರೂಪಿಣೆ ।
ಪ್ರಸೀದ ಭಕ್ತವರದೇ ಜಗನ್ಮಾಯೇ ನಮೋಽಸ್ತುತೇ ॥

(ಶಿ. ಪು. ರು. ಸಂ. ೩೦. ೧೨–೧೪)

ಜಗದಂಬೆ, ಮಹಾಮಾಯೇ, ಜಗದೀಶೇ, ಮಹೇಶ್ವರಿ, ನಿನಗೆ ಪ್ರಣಾಮಗಳು. ನನ್ನ ಮೇಲೆ ದಯಮಾಡು. ಶಿವಸ್ವರೂಪಿಣಿ, ಪ್ರಸನ್ನಳಾಗು. ಎಂದು ದಕ್ಷ ಪ್ರಜಾಪತಿಯು ಭಗವತಿ ಜಗದಂಬೆಯನ್ನು ಪ್ರಾರ್ಥಿಸತೊಡಗಿದನು.

ಭಗವತಿ ಜಗದಂಬೆಯು ದಕ್ಷ ಪ್ರಜಾಪತಿಯ ತಪಸ್ಸಿಗೆ ಮೆಚ್ಚಿದಳು. ಅವಳು ಅವನ ಸಮ್ಮುಖದಲ್ಲಿ ಸಾಕ್ಷಾತ್ಕಾರಳಾಗಿ, ವರಗಳನ್ನು ಕೇಳಿಕೊಳ್ಳಬೇಕೆಂದು ತಿಳಿಸಿದಳು.

ದಕ್ಷ–ಜಗದಂಬೆ, ಮಹಾಮಾಯೆ, ತಾಯೆ, ನೀನು ಪ್ರಸನ್ನಳಾದದ್ದೇ ನಿಜವಾಗಿದ್ದರೆ ನನ್ನ ಇಚ್ಛೆಯನ್ನು ಪೂರ್ಣ ಮಾಡಬೇಕು. ಭಗವಾನ್ ಶಿವನು ರುದ್ರನಾಮವನ್ನು ಧಾರಣಮಾಡಿ ಬ್ರಹ್ಮದೇವನ ಪುತ್ರರೂಪದಿಂದ ಅವತರಿಸಿ ರುವನು. ರುದ್ರನು ಪರಮಾತ್ಮನಾದ ಶಿವನ ಪೂರ್ಣರೂಪನಾಗಿರುವನು. ನೀನು ನನ್ನ ಪುತ್ರಿಯಾಗಿ ಅವತರಿಸಿ ಮಹಾದೇವನ ಪತ್ನಿಯಾಗಬೇಕು. ನಿನ್ನ ಹೊರತು ಯಾವ ಸ್ತ್ರೀಯೂ ರುದ್ರದೇವನನ್ನು ಮೋಹಿತಗೊಳಿಸಲು ಸಮರ್ಥಳಾಗುವದಿಲ್ಲ.

ದಕ್ಷ ಪ್ರಜಾಪತಿಯ ಮಾತು ಕೇಳಿ ಭವಾನಿಯು ಗಹಗಹಿಸಿ ನಕ್ಕಳು. ಅವಳು ಶಿವನನ್ನು ಮನಸಾ ಸ್ಮರಿಸಿ ದಕ್ಷನಿಗೆ ಹೇಳಿದಳು :

ದೇವಿ–ದಕ್ಷ ಪ್ರಜಾಪತಿಯೇ, ನಿನ್ನ ಭಕ್ತಿಗಾಗಿ ನಾನು ಪ್ರಸನ್ನಳಾಗಿರುವದ ರಿಂದ ನಾನು ನಿನ್ನ ಮನೋವಾಂಛಿತವನ್ನು ಪೂರ್ಣಗೊಳಿಸುವೆನು. ನಾನು ನಿನ್ನ ಪುತ್ರಿಯಾಗಿ ಅವತೀರ್ಣಳಾಗುವೆನು. ನಾನು ದುಸ್ಸಹ ತಪಸ್ಸು ಮಾಡಿ ಮಹಾದೇವನನ್ನು ಮೆಚ್ಚಿಸಿ ಅವನ ಪತ್ನಿಯಾಗುವೆನು. ಭಗವಾನ್ ಸದಾಶಿವನು ಸರ್ವಥಾ ನಿರ್ವಿಕಾರನಿರುವನು. ಅವನು ಬ್ರಹ್ಮ, ವಿಷ್ಣುಸೇವ್ಯನಿದ್ದು ನಿತ್ಯ ಪರಿ ಪೂರ್ಣರೂಪನಾಗಿರುವನು. ಯಾವ ಜನ್ಮಗಳಲ್ಲಿಯಾದರೂ ನಾನಾ ರೂಪಧಾರಿ ಯಾದ ಶಂಭುವು ನನಗೆ ಸ್ವಾಮಿಯಾಗುವನು. ಭಗವಾನ್ ಸದಾಶಿವನು ಈಗ ಬ್ರಹ್ಮನ ಭ್ರುಕುಟಿಯಿಂದ ರುದ್ರನಾಗಿ ಅವತರಿಸಿರುವನು. ನಾನಾದರೂ ನಿನ್ನ ಉದರದಿಂದ ಅವತೀರ್ಣಳಾಗುವೆನು. ನಾನು ನಿನಗೆ ಒಂದು ಕಟ್ಟಳೆಯನ್ನು ಮಾಡುವೆನು; ಏನೆಂದರೆ, ನೀನು ಎಂದು ನನಗೆ ಅನಾದರ ಮಾಡುವೆಯೋ ಆದೇ ಸಮಯದಲ್ಲಿ ನಾನು ನನ್ನ ಶರೀರವನ್ನು ತ್ಯಜಿಸಿ ಬಿಡುವೆನು. ಪ್ರತಿಯೊಂದು ಕಲ್ಪದಲ್ಲಿಯೂ ನಾನು ನಿನಗೆ ಪುತ್ರಿಯಾಗಿ ಮಹಾದೇವನನ್ನು ವಿವಾಹವಾಗುವೆನು.

ಭಗವತಿ ಜಗದಂಬೆಯು ದಕ್ಷ ಪ್ರಜಾಪತಿಗೆ ಹೀಗೆ ವರಪ್ರದಾನ ಮಾಡಿ ಅಂತರ್ಧಾನಳಾದಳು. ತರುವಾಯ ದಕ್ಷನು ಅಲ್ಲಿಂದ ತನ್ನ ಲೋಕಕ್ಕೆ ತೆರಳಿದನು. ದೇವಿಯಿಂದ ವರವನ್ನು ಪಡೆದುದಕ್ಕಾಗಿ ನನಗೆ ಸಂತೋಷವಾಯಿತು–ನಾರದಾ, ದಕ್ಷ ಪ್ರಜಾಪತಿಯು ನನ್ನ ಬಳಿಗೆ ಬಂದನು.

ದಕ್ಷ–ಬ್ರಹ್ಮದೇವಾ, ಮಾನಸಿಕ ಸೃಷ್ಟಿಯಿಂದ ಪ್ರಜಾಭಿವೃದ್ಧಿಯಾಗುವದಿಲ್ಲ. ಪ್ರಜಾಭಿವೃದ್ಧಿಗಾಗಿ ಏನು ಮಾಡಬೇಕು ?

ಬ್ರಹ್ಮ–ನೀನು ಪ್ರಜಾಪತಿ ಪಂಚಜನನ ಸುಂದರ ಪುತ್ರಿಯಾದ ಅಸಿಕ್ನಿ (ಪ್ರಸೂತಿ)ಯನ್ನು ಪತ್ನಿರೂಪದಿಂದ ಸ್ವೀಕರಿಸು. ನೀನು ಆ ಸ್ತ್ರೀಯೊಡನೆ ಮೈಥುನ ಧರ್ಮವನ್ನಾಶ್ರಯಿಸಿ ಪ್ರಜಾಸರ್ಗವನ್ನು ವರ್ಧಮಾನಗೊಳಿಸು. ಸುಂದರಿಯಾದ ಅಸಿಕ್ನಿಯಲ್ಲಿ ನೀನು ಬಹುವಾಗಿ ಸಂತಾನವನ್ನು ಉತ್ಪನ್ನ ಮಾಡುವೆ.

ದಕ್ಷನು ಅಸಿಕ್ನಿಯನ್ನು ಪತ್ನಿಯನ್ನಾಗಿ ಸ್ವೀಕರಿಸಿ, ಹತ್ತುಸಾವಿರ ಹರ್ಯಸ್ವರೆಂಬ ಪುತ್ರರನ್ನು ಉತ್ಪನ್ನ ಮಾಡಿದನು. ಅವರು ತಂದೆಯ ಆಜ್ಞೆಯ ಮೇರೆಗೆ ಪ್ರಜಾಭಿವೃದ್ಧಿಗಾಗಿ ತಪಸ್ಸಿಗೆ ತೆರಳಿದರು. ಅವರು ಸಿಂಧುನದಿಯು ಸಮುದ್ರ ಸಂಗಮವಾಗುವಲ್ಲಿದ್ದ ನಾರಾಯಣ ಸರದ ತಟಾಕದಲ್ಲಿ ತಪಾಚರಣೆ ಮಾಡ ತೊಡಗಿದ್ದಾಗ ನೀನು ಅಲ್ಲಿಗೆ ಹೋಗಿ ಅವರನ್ನು ಪ್ರವೃತ್ತಿ ಮಾರ್ಗದಿಂದ ನಿವೃತ್ತಿಗೊಳಿಸಿದೆ. ಆಗ ದಕ್ಷನು ದುಃಖಿತನಾದನು. ಸ್ವಲ್ಪ ಕಾಲದಲ್ಲಿ ನಾನು ಹತ್ತುಸಾವಿರ ಶಬಲಾಶ್ವರೆಂಬ ಪುತ್ರರನ್ನು ಉತ್ಪನ್ನ ಮಾಡಿದೆನು. ಶಬಲಾಶ್ವರು ಪ್ರಜಾವೃದ್ಧಿಯಾಗಬೇಕೆಂಬ ಉದ್ದೇಶದಿಂದ ತಪಸ್ಸಿಗೆ ತೆರಳಿದರು. ನೀನು ಅವರನ್ನು ನಿವೃತ್ತಿ ಮಾರ್ಗಕ್ಕೆ ಹಚ್ಚಿದೆ. ತನ್ನ ಪುತ್ರರೆಲ್ಲರೂ ನಿವೃತ್ತಿ ಮಾರ್ಗಕ್ಕೆ ಹೋದುದಕ್ಕಾಗಿ ದಕ್ಷನಿಗೆ ದುಃಖವಾಯಿತು. ತನ್ನ ಮಕ್ಕಳ ಬುದ್ಧಿಯನ್ನು ಹಾಳುಮಾಡಿದ್ದಕ್ಕಾಗಿ ಅವನು ನಿನಗೆ ಶಾಪ ಕೊಟ್ಟನು. ಅವನ ಶಾಪದ ಫಲವಾಗಿ ನೀನು ಸ್ಥಾನಹೀನನಾಗಿ ನಿತ್ಯ ಸಂಚಾರಿಯಾಗಿರುವೆ.

ನಾರದಾ, ದಕ್ಷಪ್ರಜಾಪತಿಯು ದೇವಿಯ ವರದಾನದಿಂದ ತನ್ನ ಪತ್ನಿಯಲ್ಲಿ ಅರವತ್ತು ಜನ ಪುತ್ರಿಯರನ್ನು ಪಡೆದನು. ಅವರಲ್ಲಿ ಹಿರಿಯ ಪುತ್ರಿಯೇ ಜಗದಂಬೆಯ ಅವತಾರವಾದ ಸತಿದೇವಿಯು. ಜಗನ್ಮಾತೆಯಾದ ಶಿವೆಯು ತಮಗೆ ಪುತ್ರಿಯಾದುದಕ್ಕಾಗಿ ದಕ್ಷಪ್ರಜಾಪತಿಯೂ ಅಸಿಕ್ನಿಯೂ ಕಡುಹರುಷಿತರಾದರು.

ದಕ್ಷನೂ ದೇವಿಯನ್ನು ಸ್ತುತಿಸಿದನು. ಆಗ ದೇವಿಯು ಅವನಿಗೆ ಪ್ರತ್ಯಕ್ಷಳಾಗಿ, ತಾನು ಶಾಂಭವಿಯೆಂದು ಹೇಳಿದಳು. ಆ ಪುತ್ರಿಯು ಬಾಲ್ಯದಲ್ಲಿಯೇ ಶಿವನಾಮಸ್ಮರಣೆ ಮಾಡಹತ್ತಿದಳು. ಅವಳು ಪ್ರಬುದ್ಧಳಾದ ಬಳಿಕ ಭಗವಾನ್ ಮೃತ್ಯುಂಜಯನನ್ನು ಕುರಿತು ತಪಸ್ಸು ಮಾಡತೊಡಗಿದಳು. ಮಹಾದೇವಿಯ ತಪಾಚರಣೆಯನ್ನು ನೋಡಲು ವಿಷ್ಣು–ಬ್ರಹ್ಮಾದಿಗಳೂ, ಲಕ್ಷ್ಮಿ–ಶಾರದೆಯರೂ, ಇತರ ದೇವತೆಗಳೂ ಬಂದರು. ಸತಿದೇವಿಯ ಜಪಾನುಷ್ಠಾನಗಳನ್ನು ನೋಡಿ ವಿಸ್ಮಿತರಾದರು. ಅವರು ಕರಗಳನ್ನು ಜೋಡಿಸಿ ಭಗವತಿಗೆ ಪ್ರಣಾಮಗಳನ್ನರ್ಪಿಸಿದರು.

ಶಿವನೇ ಪತಿಯಾಗಿ ದೊರೆಯಬೇಕೆಂಬ ಉದ್ದೇಶದಿಂದ ಸತಿದೇವಿಯು ತಪಸ್ಸು ಮಾಡತೊಡಗಿದ್ದಳು. ಆಗ ನಾನೂ ವಿಷ್ಣುವೂ ರುದ್ರನ ಬಳಿಗೆ ಹೋಗಿ, ಸತಿದೇವಿಯನ್ನು ಪತ್ನಿಯನ್ನಾಗಿ ಸ್ವೀಕರಿಸಬೇಕೆಂದು ಪ್ರಾರ್ಥಿಸಿದೆವು. ಜಗದಂಬೆಯೇ ದಕ್ಷ ಪುತ್ರಿಯಾಗಿ ಜನಿಸಿರುವಳೆಂದೂ, ಅವಳು ರುದ್ರದೇವನೇ ಪತಿಯಾಗಿ ದೊರೆಯಬೇಕೆಂದು ತಪಸ್ಸು ಮಾಡತೊಡಗಿರುವಳೆಂದೂ ತಿಳಿಸಿದೆವು.

ಶಿವ–ಬ್ರಹ್ಮನ್, ವಿಷ್ಣುವೆ, ನಿಮ್ಮ ಮಾತುಗಳು ನನ್ನ ದೃಷ್ಟಿಯಿಂದ ಗೌರವ ಪೂರ್ಣವಿರುವವು. ಆದರೆ ನನ್ನ ಸಲುವಾಗಿ ವಿವಾಹವು ಉಚಿತವಾಗದು. ಯೋಗಿಯ ರೂಪದಿಂದ ನನ್ನ ಪ್ರಸಿದ್ಧಿಯುಂಟು. ನಾನು ತಪಸ್ಸಿನಲ್ಲಿ ಸಂಲಗ್ನ ವಾಗಿದ್ದು ಸದಾ ಸಂಸಾರದಲ್ಲಿ ವಿರಕ್ತನಿರುವೆನು. ನಾನು ನಿವೃತ್ತಿ ಮಾರ್ಗದವನು. ನಾನು ಆತ್ಮನಲ್ಲಿ ರಮಮಾಣನಾಗಿರತಕ್ಕವನು; ಅದರಲ್ಲಿಯೇ ಆನಂದಾನುಭವ ಹೊಂದುವವನು, ನಾನು ನಿರಂಜನನೂ ಅವಧೂತನೂ ಆಗಿರುವೆನು. ನಾನು ಕಾಮನಾಶೂನ್ಯನಾಗಿರುವೆನು. ನನ್ನ ಮನದಲ್ಲಿ ಯಾವ ವಿಕಾರಗಳೂ ಇಲ್ಲ. ಭೋಗದಿಂದ ದೂರವಾಗಿರುವೆನು. ನಾನು ಸದಾ ಅಮಂಗಲ, ಅಪವಿತ್ರ ವೇಷಧಾರಿಯಾಗಿರುವೆನು. ವಿವಾಹದ ಬಗ್ಗೆ ನನ್ನ ಅಭಿರುಚಿಯಿಲ್ಲ. ಹೀಗಿದ್ದರೂ ಜಗತ್ತಿನ ಹಿತದ ಸಾಧನೆಗಾಗಿ ನಿಮ್ಮ ಗರಿಷ್ಠ ವಚನಗಳನ್ನು ಮನ್ನಿಸಿ ನಾನು ಅವಶ್ಯ ವಾಗಿ ವಿವಾಹವಾಗುವೆನು. ವಿವಾಹವಾಗಲು ನಾನು ಒಂದು ಕಟ್ಟಳೆ ಮಾಡುವೆನು. ನನ್ನನ್ನು ವರಿಸುವ ನಾರಿಯು ನನ್ನ ತೇಜವನ್ನು ವಿಭಾಗಪೂರ್ವಕ ಗ್ರಹಣ ಮಾಡಲು ಸಮರ್ಥಳಿರಬೇಕು. ಯೋಗಿನಿಯ ಹಾಗೂ ಇಚ್ಛಾನುಸಾರ ರೂಪಗಳನ್ನು ಧಾರಣ ಮಾಡುವಂತಹಳಿರಬೇಕು. ನಾನು ಯೋಗದಲ್ಲಿದ್ದರೆ ಅವಳು ಯೋಗಿನಿಯಾಗಿರ ಬೇಕು. ನಾನು ಕಾಮಾಸಕ್ತನಾದಾಗ ಅವಳು ಕಾಮಿನಿಯಾಗಬೇಕು. ನಾನು ಜ್ಯೋತಿ

ಸ್ವರೂಪ ಸನಾತನ ಶಿವನ ಚಿಂತೆಯಲ್ಲಿ ಸದಾ ರಮಮಾಣನಾಗಿರುವೆನು. ನಾನು ಚಿಂತನೆಯಲ್ಲಿಲ್ಲದಾಗ ಭಾಮಿನಿಯೊಡನೆ ಸಮಾಗಮ ಮಾಡಲು ಶಕ್ತನಾಗುವೆನು. ಪತ್ನಿಯು ಶಿವಚಿಂತನೆಗೆ ವಿಘ್ನ ಮಾಡಲು ಇಚ್ಛಿಸಿದರೆ ಅವಳ ಜೀವನದ ಅಂತ್ಯವೇ ಆಗುವದು. ಆ ಸ್ತ್ರೀಯು ನನ್ನಲ್ಲಿ ಅವಿಶ್ವಾಸಗೊಂಡರೆ ತಕ್ಷಣವೇ ಅವಳನ್ನು ತ್ಯಾಗ ಮಾಡುವೆನು.

ಬ್ರಹ್ಮ–ರುದ್ರದೇವಾ, ಸಾಕ್ಷಾತ್ ಸದಾಶಿವನ ಧರ್ಮಪತ್ನಿ ಉಮಾ ದೇವಿಯು ಲೋಕಕಲ್ಯಾಣಕ್ಕಾಗಿ ದಕ್ಷ ಪ್ರಜಾಪತಿಯ ಕುಮಾರಿಯಾಗಿ ಜನ್ಮ ತಾಳಿರುವಳು. ಅವಳು ನಿನ್ನನ್ನೇ ವರಿಸಬೇಕೆಂದು ತಪಸ್ಸು ಮಾಡುತ್ತಿರುವಳು. ನೀನು ಅವಳ ಪಾಣಿಗ್ರಹಣ ಮಾಡಬೇಕು. ನಾನು ಈ ಪ್ರಕಾರ ಹೇಳಿದ ಬಳಿಕ ಈಶ್ವರನು ತಪಾಚರಣೆ ಮಾಡುತ್ತಿರುವ ಸತಿದೇವಿಯನ್ನು ಭೆಟ್ಟಿಯಾದನು.

ಈಶ್ವರ–ದೇವಿ, ನಿನ್ನ ವ್ರತಗಳಿಗೂ ತಪಾಚರ್ಯೆಗೂ ಮೆಚ್ಚಿದೆನು. ನೀನು ನಿನಗಿಷ್ಟವಾದ ವರಗಳನ್ನು ಕೇಳಿಕೊಳ್ಳಬಹುದು.

ಸತಿದೇವಿ–ಭಗವನ್ ಮಹಾದೇವ, ನೀನು ನನಗೆ ಪತಿಯಾಗಿ ದೊರೆಯ ಬೇಕು.

ಈಶ್ವರ–ದೇವಿ, ನೀನು ನನ್ನ ಭಾರ್ಯೆಯಾಗುವೆ.

ಸತೀದೇವಿ–ನನ್ನನ್ನು ನೀನು ವಿಧಿಪೂರ್ವಕವಾಗಿ ಪಾಣಿಗ್ರಹಣ ಮಾಡ ಬೇಕು. ಈ ಸಂಗತಿಯನ್ನು ನೀನು ನನ್ನ ತಂದೆಗೆ ತಿಳಿಸಬೇಕು.

ಸತೀದೇವಿಯು ಮಹಾದೇವನಿಗೆ ವಂದಿಸಿ, ಅವನಿಗೆ ನಿರೋಪ ಕೊಟ್ಟು ಕಳಿಸಿದಳು. ತರುವಾಯ ರುದ್ರದೇವನು ನನ್ನ ಬಳಿಗೆ ಬಂದು ಎಲ್ಲ ಸಂಗತಿಯನ್ನು ತಿಳಿಸಿದನು. ತರುವಾಯ ನಾನು ನನ್ನ ಪತ್ನಿಯಾದ ಸರಸ್ವತಿದೇವಿಯೊಡನೆ ದಕ್ಷಪ್ರಜಾಪತಿಯ ಬಳಿಗೆ ಹೋಗಿ ರುದ್ರನ ಮನೋಭಿಲಾಷೆಯನ್ನು ತಿಳಿಸಿದೆನು. ದಕ್ಷನು ಸತಿಯ ಅಪೇಕ್ಷೆಯನ್ನು ಬಲ್ಲವನಾಗಿದ್ದನು. ಭಗವಾನ್ ಪರಮೇಶ್ವರ ಮಹಾದೇವನಿಗಾಗಿಯೇ ತನ್ನ ಪುತ್ರಿಯು ಜನ್ಮವೆತ್ತಿರುವಳೆಂಬುದನ್ನು ತಿಳಿಸಿ, ಕನ್ಯಾದಾನದಿಂದ ಸತಿದೇವಿಯನ್ನು ಅವನಿಗೆ ಅರ್ಪಿಸುವೆನೆಂದು ತಿಳಿಸಿದನು. ಕೂಡಲೆ ನಾನು ಕೈಲಾಸಕ್ಕೆ ಹೋಗಿ ರುದ್ರದೇವನಿಗೆ ಈ ಸಂಗತಿಯನ್ನು ಹೇಳಿದೆನು.

ನಾರದಾ, ವಿವಾಹಸಮಾರಂಭಕ್ಕೆ ಮರೀಚಿ ಮೊದಲಾದ ಪ್ರಜಾಪತಿಗಳೂ, ದೇವಾಧಿದೇವತೆಗಳೂ ಶ್ರೀಹರಿ. ಲಕ್ಷ್ಮಿ ಮೊದಲಾದವರೂ ಆಗಮಿಸಿದ್ದರು. ನೀನೂ ಬಂದಿದ್ದೆ. ವಿವಾಹ ಸಮಾರಂಭವು ವಿಜೃಂಭಣೆಯಿಂದ ನೆರವೇರಿತು, ಕನ್ಯಾದಾನ ಮಾಡಿ ದಕ್ಷನು ಅನೇಕ ವಸ್ತುಗಳನ್ನು ಅಳಿಯನಿಗೂ ಮಗಳಿಗೂ ಉಡುಗೊರೆಯಾಗಿ ಕೊಟ್ಟನು. ತರುವಾಯ ವಿಷ್ಣುವು ಲಕ್ಷ್ಮೀಸಹಿತನಾಗಿ ಶಂಭುವಿನ ಬಳಿಗೆ ಬಂದು ಕೈಜೋಡಿಸಿ–ದೇವಾಧಿದೇವ ಮಹಾದೇವಾ, ನೀನು ಜಗತ್ತಿಗೆ ಪಿತನಾಗಿರುವೆ, ಸತೀದೇವಿಯು ಜಗನ್ಮಾತೆಯು ರುದ್ರದೇವಾ, ನೀನು ಗೌರಾಂಗನಿರುವೆ. ಸತೀದೇವಿಯು ನೀಲವರ್ಣದಳಿರುವಳು. ನಿಮಗೆ ವಿರುದ್ಧವಾಗಿ ನಾನು ನೀಲವರ್ಣದವನು; ಈ ಲಕ್ಷ್ಮಿಯು ಗೌರಾಂಗಿಯು. ಸದಾಶಿವಾ, ಜ್ಯೋತಿರ್ಮಯ ಸ್ವರೂಪದ ಪರಮೇಶ್ವರನ ಅಂಶದಿಂದ ನಾವು ಮೂವರೂ ಅವತರಿಸಿರುವೆವು. ನಮ್ಮಲ್ಲಿ ಏನೂ ಭೇದವಿಲ್ಲ.

ವಿಷ್ಣುವು ಭಗವಾನ್ ಕೈಲಾಸಪತಿಯನ್ನು ನಮಿಸಿ ಹೀಗೆ ನುಡಿದನು. ತರುವಾಯ ನಾನು ಪುರೋಹಿತನಾಗಿ ವಿಧಿಪೂರ್ವಕ ಅಗ್ನಿಯ ಪರಿಕ್ರಮ ಮಾಡಿದೆನು. ವಿವಾಹ ವಿಧಾನವು ಮುಗಿದ ಬಳಿಕ ಶಿವನು ಸತಿದೇವಿಯೊಡನೆ ಕೈಲಾಸ ಪರ್ವತಕ್ಕೆ ಹೊರಟನು. ನಾನೂ, ವಿಷ್ಣುವೂ, ಪ್ರಮಥಗಣವೂ ಸಂಗಡ ಹೊರಟು ಕೈಲಾಸಕ್ಕೆ ತಲುಪಿದೆವು. ತರುವಾಯ ಶ್ರೀಹರಿಯೂ ನಾನೂ ಶಿವನ ನಿರೋಪ ಹೊಂದಿ ನಮ್ಮ ನಮ್ಮ ಲೋಕಗಳಿಗೆ ತೆರಳಿದೆವು.

## ದಕ್ಷ ಯಜ್ಞ

ಬ್ರಹ್ಮದೇವ–ನಾರದಾ, ಸತಿದೇವಿಯು ಭಗವಾನ್ ಶಂಕರನೊಡನೆ ಕುಳಿತಾಗ ಅವನಿಂದ ಪರಮ ತತ್ವಗಳನ್ನು ತಿಳಿಯುವ ಉದ್ದೇಶದಿಂದ ಪ್ರಶ್ನೆ ಮಾಡಿದಳು. ಜೀವವು ಸಂಸಾರದುಃಖದಿಂದ ಉದ್ಧಾರವಾಗುವದಕ್ಕೆ ಯಾವ ಕರ್ಮಾನುಷ್ಠಾನ ಮಾಡಬೇಕೆಂದು ಅವಳು ವಿಚಾರ ಮಾಡಿದಳು.

ಶಿವ–ದಾಕ್ಷಾಯಣಿ, ಜ್ಞಾನೋದಯವಾದ ಬಳಿಕ ಬ್ರಹ್ಮನು ನಾನೆಂಬ ನಿಶ್ಚಯವುಂಟಾಗುವದು ವಿಜ್ಞಾನಿ ಪುರುಷನ ಬುದ್ಧಿಯು ಶುದ್ಧವಾಗಿರುವದು.

ಅಂತಹ ವಿಜ್ಞಾನಿಗಳು ಅಪರೂಪ. ಬ್ರಹ್ಮನಲ್ಲಿ ಭಕ್ತಿಯುಳ್ಳವನಾಗಬೇಕು. ಭಕ್ತಿಯೇ ವಿಜ್ಞಾನವು. ನಾನು ಭಕ್ತಾಧೀನನಾಗಿರುವೆನು. ಜಾತಿಹೀನನಾದವನು ಭಕ್ತಿಯುತನಾಗಿದ್ದರೆ ನಾನು ಅವನ ಮೇಲೆ ಅನುಗ್ರಹ ಮಾಡುವೆನು.

ಭಕ್ತೌ ಜ್ಞಾನೇ ನ ಭೇದೋ ಹಿ ತತ್ಕರ್ತುಃ ಸರ್ವದಾ ಸುಖಂ ।
ವಿಜ್ಞಾನಂ ನ ಭವತ್ಯೇವ ಸತಿ ಭಕ್ತಿವಿರೋಧಿನಃ ॥
ಭಕ್ತಾಧೀನಃ ಸದಾಹಂ ವೈ ತತ್ಪ್ರಭಾವಾದ್ಗೃಹೇಷ್ವಪಿ ।
ನೀಚಾನಾಂ ಜಾತಿಹೀನಾನಾಂ ಯಾಮಿ ದೇವಿ ನ ಸಂಶಯಃ ॥

(ಶಿ. ಪು. ರು. ಸಂ. ಸ. ೩೦. ೨೩. ೧೬-೧೭)

ದಕ್ಷನಂದಿನಿ, ಭಕ್ತಿಯು ನಾಲ್ಕು ಯುಗಗಳಲ್ಲಿ ಫಲದಾಯಕವಾಗಿರುವದು. ನಾನು ಭಕ್ತಾಧೀನನಿರುವೆನು. ನಾನು ಭಕ್ತರಕ್ಷಣೆಗಾಗಿ ಕಟಿಬದ್ಧನಿರುವೆನು.

ನಾರದ–ವಿಧಾತಾ, ಭಗವಾನ್ ಶಂಕರನು ಸತಿದೇವಿಯ ತ್ಯಾಗ ಮಾಡಿದ್ದೇಕೆ? ದಕ್ಷಯಜ್ಞದಲ್ಲಿ ಶಿವನಿಗೆ ಅನಾದರನಾದ ಕಾರಣವನ್ನೂ, ತಂದೆಯ ಯಜ್ಞದಲ್ಲಿ ಅವಳು ದೇಹ ತ್ಯಾಗ ಮಾಡಿದ್ದನ್ನೂ ವಿವರಿಸಿ ಹೇಳಬೇಕು.

ಬ್ರಹ್ಮ–ನಾರದಾ, ಭಗವಾನ್ ಚಂದ್ರಮೌಳಿಯು ಸತಿಯನ್ನು ಮನಸಾ ತ್ಯಾಗ ಮಾಡಿದ ಸಂಗತಿಯನ್ನೂ ದಕ್ಷಯಜ್ಞದಲ್ಲಿ ಸತಿದೇವಿಯು ಆತ್ಮತ್ಯಾಗ ಮಾಡಿದ ಸಂಗತಿಯನ್ನೂ ವಿವರಿಸುವೆನು, ಕೇಳು :

ಒಮ್ಮೆ ರುದ್ರದೇವನು ಸತಿದೇವಿಯೊಡನೆ ವೃಷಭಾರೂಢನಾಗಿ ದಂಡಕಾರಣ್ಯಕ್ಕೆ ಬಂದನು. ರಾವಣನಿಂದ ಅಪಹರಿಸಲ್ಪಟ್ಟ ಸೀತೆಯನ್ನು ಶೋಧಿಸಲು ಅವನು ಲಕ್ಷ್ಮಣನೊಡನೆ ಸಂಚರಿಸುತ್ತಿದ್ದನು. ಆಗ ಶಿವನು ಪ್ರಕಟನಾಗದೆ ಶ್ರೀರಾಮನಿಗೆ ಪ್ರಣಾಮ ಮಾಡಿದನು. ಆಗ ಸತಿದೇವಿಗೆ ವಿಸ್ಮಯವಾಯಿತು. ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಗೆ ವಂದ್ಯನಾದ ಪರಬ್ರಹ್ಮ ಪರಮೇಶ್ವರನಾಗಿದ್ದ ಶಿವನು ನರನಾದವನಿಗೆ ವಂದಿಸಿದ್ದರಿಂದ ಅವಳು ಕುತೂಹಲದಿಂದ ಕೇಳಿದಳು.

ಸತೀದೇವಿ– ಮಹೇಶ್ವರಾ, ಅವರು ಯಾರು? ನೀನು ಜಗದ್ವಂದ್ಯನಿದ್ದು ಇತರರಿಗೆ ನಮಸ್ಕರಿಸಿದ್ದೇಕೆ?

ಶಿವ–ದೇವಿ, ಅವನು ಭಗವಾನ್ ಶ್ರೀರಾಮನು. ಅವನು ಶ್ರೀರಾಮನ ಬಂಧು ಲಕ್ಷ್ಮಣನು. ಶ್ರೀರಾಮನು ಶ್ರೀವಿಷ್ಣುವಿನ ಸಂಪೂರ್ಣ ಅಂಶದಿಂದ ಜನಿಸಿರುವನು. ಲಕ್ಷ್ಮಣನು ಸಾಕ್ಷಾತ್ ಆದಿಶೇಷನ ಅಂಶನಾಗಿರುವನು. ಇವರು ಅಯೋಧ್ಯಾಧಿಪತಿಯಾದ ದಶರಥ ರಾಜನ ಕುಮಾರರು. ಪಿತ್ರಾಜ್ಞಾ ಪರಿಪಾಲನೆ ಗಾಗಿ ಶ್ರೀರಾಮನು ವನಕ್ಕೆ ಬಂದಿರುವನು. ಅವನ ಪತ್ನಿಯಾದ ಭಗವತಿ ಸೀತಾದೇವಿಯನ್ನು ರಾವಣನು ಅಪಹರಿಸಿರುವನು. ಇಬ್ಬರೂ ಬಂಧುಗಳು ಅವಳನ್ನು ಹುಡುಕುತ್ತ ಹೊರಟಿರುವರು. ದುಷ್ಟನಿಗ್ರಹ, ಶಿಷ್ಟ ಪರಿಪಾಲನೆಗಾಗಿ ಶ್ರೀರಾಮಾವತಾರವಾಗಿದೆ.

ಸತೀದೇವಿ–ಜಗದ್ವಂದ್ಯನಾದ ನೀನು ಸೇವಕನಿಗೆ ನಮಿಸಬೇಕೆ?

ಶಿವ–ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವಿರದಿದ್ದರೆ ಅವನನ್ನು ಪರೀಕ್ಷಿಸು.

ದಾಕ್ಷಾಯಣಿಯು ಸೀತೆಯ ರೂಪವನ್ನು ಧರಿಸಿ ಶ್ರೀರಾಮನ ಬಳಿಗೆ ಹೋದಳು. ಅವಳನ್ನು ಕಂಡು ಅವನು ಪರಮಾಶ್ಚರ್ಯಗೊಂಡನು. ಆಗ ಅವನು ಜಗನ್ಮಾತೆಗೆ ಭಕ್ತಿ–ಭಾವಗಳಿಂದ ವಂದಿಸಿದನು.

ಶ್ರೀರಾಮ–ಮಾತೆಯಾದ ಸತೀದೇವಿ, ನಿನಗೆ ಅನಂತ ಪ್ರಣಾಮಗಳು. ಭಗವಾನ್ ಶಂಭುವು ಎಲ್ಲಿರುವನು? ಪತಿಯನ್ನು ಹಿಂದೆ ಬಿಟ್ಟು ಏಕಾಕಿಯಾಗಿ ನೀನಿಲ್ಲಿಗೆ ಏಕೆ ಬಂದೆ? ನಿನ್ನ ನಿಜರೂಪವನ್ನು ತ್ಯಜಿಸಿ ನೂತನ ರೂಪವನ್ನು ಧಾರಣ ಮಾಡಿದ ಉದ್ದೇಶವೇನಿರುವದು? ಕೃಪೆ ಮಾಡಿ ಎಲ್ಲ ಸಂಗತಿಯನ್ನು ತಿಳಿಸಬೇಕು ತಾಯಿ.

ಸತೀದೇವಿ–ರಘುನಂದನಾ, ಮಹೇಶ್ವರನು ತನ್ನ ಪಾರ್ಷದರೊಡನೆ ಆ ವಟವೃಕ್ಷದ ಕೆಳಗೆ ಇರುವನು. ಅವನು ನಿನ್ನ ವೈಷ್ಣವ ರೂಪದ ಉತ್ಕೃಷ್ಟ ಮಹಿಮೆಯ ಗುಣಗಾನ ಮಾಡುತ್ತಿರುವನು. ಅವನ ಆಜ್ಞೆಯನ್ನು ಪಡೆದು ನಿನ್ನನ್ನು ಪರೀಕ್ಷಿಸಿದೆನು. ನೀನು ಸಾಕ್ಷಾತ್ ವಿಷ್ಣುವಿರುವೆ.

ಪರಮೇಶ್ವರನು ಶ್ರೀರಾಮನಿದ್ದ ಸ್ಥಳಕ್ಕೆ ಬಂದು ಅವನನ್ನು ವಂದಿಸಿದನು. ಶ್ರೀರಾಮನೂ ಅವನಿಗೆ ಪ್ರಣಾಮಗಳನ್ನರ್ಪಿಸಿದನು. ಹರಿ–ಹರರಲ್ಲಿ ವಿಭೇದವಿಲ್ಲ ವೆಂದು ಶ್ರೀರಾಮನು ಸತಿದೇವಿಗೆ ಮನನ ಮಾಡಿಕೊಟ್ಟನು. ಶ್ರೀರಾಮನೂ,

ಲಕ್ಷ್ಮಣನೂ ಸೀತಾಶೋಧಕ್ಕಾಗಿ ತೆರಳಿದರು. ರುದ್ರದೇವನು ಸತಿದೇವಿಯ ಕೃತ್ಯವನ್ನು ಸ್ಮರಿಸಿಕೊಂಡು ಅವಳನ್ನು ಮನಸಾ ತ್ಯಾಗ ಮಾಡಿದನು.

ಬ್ರಹ್ಮದೇವ–ನಾರದಾ, ಶಿವನು ತನ್ನನ್ನು ತ್ಯಾಗ ಮಾಡಿದ ಸಂಗತಿಯು ಗೊತ್ತಾಗಿ ಸತಿದೇವಿಯು ಕಡುದುಃಖಿತೆಯಾದಳು. ಆಗ ಶಿವನು ಅವಳನ್ನು ಸಂತೈಸತೊಡಗಿದನು. ಇದು ಲೀಲಾವಿಯೋಗವೆಂದು ದಾಕ್ಷಾಯಣಿಗೆ ಹೇಳಿದನು. ಶಿವ–ಶಕ್ತಿಗಳನ್ನು ಬೇರ್ಪಡಿಸುವದು ಯಾವ ಶಕ್ತಿಯಿಂದಲೂ ಸಾಧ್ಯವಿಲ್ಲವೆಂದು ಹೇಳಿ ಅವಳನ್ನು ಸಾಂತ್ವನಗೊಳಿಸಿದನು.

ನಾರದ–ತಂದೆಯೆ, ಪ್ರಾಚೀನ ಕಾಲದಲ್ಲಿ ದಕ್ಷಪ್ರಜಾಪತಿಯಿಂದ ಅಪಮಾನಿತಳಾದ ದಾಕ್ಷಾಯಣಿಯು ಯೋಗಾಗ್ನಿಯಿಂದ ತನ್ನ ಆತ್ಮತ್ಯಾಗ ಮಾಡಿದ ಚರಿತ್ರೆಯನ್ನು ವಿವರಿಸಬೇಕು.

ಬ್ರಹ್ಮದೇವ–ದೇವರ್ಷಿ, ಅದೊಂದು ಅದ್ಭುತ ಕಥೆಯು. ಹೇಳುವೆನು, ಕೇಳು. ಎಲ್ಲ ಮುನಿಗಳು ಸಮ್ಮಿಲಿತರಾಗಿ ಪ್ರಯಾಗ ಕ್ಷೇತ್ರದಲ್ಲಿ ಮಹಾಯಜ್ಞವನ್ನು ಪ್ರಾರಂಭಿಸಿದರು. ದಕ್ಷಪ್ರಜಾಪತಿಯ ಯಜ್ಞವದು. ಯಜ್ಞಕ್ಕೆ ಸನಕಾದಿ ಸಿದ್ಧ ಗಣವೂ, ದೇವರ್ಷಿಗಳೂ, ಪ್ರಜಾಪತಿಗಳೂ, ಋಷಿ–ಮುನಿಗಳೂ ಆಗಮಿಸಿದ್ದರು. ಭಗವಾನ್ ರುದ್ರದೇವನು ತನ್ನ ಪತ್ನಿಯಾದ ಸತಿದೇವಿಯೊಡನೆ ಬಂದನು. ಶಿವನ ಪಾರ್ಷದರೂ ಅಲ್ಲಿಗೆ ಬಂದಿದ್ದರು. ಶಿವನ ಆಗಮನವಾದ ಕೂಡಲೆ ಯಜ್ಞ ಮಂಟಪದಲ್ಲಿಯ ಎಲ್ಲ ಜನರೂ ಎದ್ದು ಅವನಿಗೆ ಪ್ರಣಾಮಗಳನ್ನರ್ಪಿಸಿ ಕುಳಿತುಕೊಂಡರು. ಹಿಂದಿನಿಂದ ಪ್ರಜಾಪತಿಗಳಲ್ಲಿ ಮುಖ್ಯನಾದ ದಕ್ಷನು ಅಲ್ಲಿಗೆ ಬಂದು ನನಗೆ ಪ್ರಣಾಮ ಮಾಡಿದನು. ಬಳಿಕ ಅವನು ಸ್ವಸ್ಥಾನದಲ್ಲಿ ಕುಳಿತನು. ಅವನು ಬರುವಾಗ ಎಲ್ಲರೂ ದಕ್ಷ ಪ್ರಜಾಪತಿಗೆ ಸ್ವಸ್ಥಾನದಿಂದೆದ್ದು ನಮಿಸಿದರು. ಎಲ್ಲ ಪ್ರಜಾಪತಿಗಳಲ್ಲಿ ತಾನು ಪ್ರಾಮುಖ್ಯನೆಂಬ ಅಹಂಕಾರವು ಅವನಲ್ಲಿ ಬಹಳವಾಗಿತ್ತು. ಎಲ್ಲ ದೇವರ್ಷಿಗಳೂ ನತಮಸ್ತಕರಾಗಿ ಅವನನ್ನು ಸ್ವಾಗತಿಸಿದರು. ಆದರೆ ಮಹಾದೇವನು ಮಾತ್ರ ಸ್ವಸ್ಥಾನದಿಂದೇಳಲಿಲ್ಲ; ಅವನಿಗೆ ಪ್ರಣಾಮ ಮಾಡಲಿಲ್ಲ. ಆದುದರಿಂದ ದಕ್ಷನು ತನ್ನ ಸ್ಥಾನದಲ್ಲಿ ಕುಳಿತ ಕೂಡಲೆ ಭಗವಾನ್ ಮಹಾದೇವನನ್ನು ಜರಿದು ಮಾತನಾಡತೊಡಗಿದನು.

ದಕ್ಷ–ಈ ಯಜ್ಞ ಮಂಟಪದಲ್ಲಿ ಎಲ್ಲ ದೇವತೆಗಳೂ ದೇವರ್ಷಿಗಳೂ

ಶ್ರೇಷ್ಠ ಬ್ರಾಹ್ಮಣರೂ ನನಗೆ ವಂದಿಸಿ ಸ್ವಾಗತಿಸಿದರು. ಆದರೆ ಪ್ರೇತ ಹಾಗೂ ಪಿಶಾಚಿಗಳ ಸಂಗಡಿಗನೂ, ಸ್ಮಶಾನವಾಸಿಯೂ, ನಿರ್ಲಜ್ಜನೂ ಆದ ಈ ರುದ್ರನು ನನಗೆ ಪ್ರಣಾಮ ಮಾಡದೆ, ನನ್ನನ್ನು ಸನ್ಮಾನಿಸದೆ ಮದೋನ್ಮತ್ತನಾಗಿ ಹಾಗೆಯೆ ಕುಳಿತಿರುವನು. ಭೂತ-ಪಿಶಾಚಿಗಳಿಂದ ಸೇವಿತನಾದ ಇವನಿಗೆ ನೀತಿಮಾರ್ಗವೇ ತಿಳಿದಿಲ್ಲ. ಇವನನ್ನು ಅನುಸರಿಸುವವರು ಪಾಖಂಡಿಗಳೂ, ದುಷ್ಟರೂ, ಪಾಪಾಚಾರಿಗಳೂ ಬ್ರಾಹ್ಮಣರನ್ನು ಕಂಡರೆ ಉದ್ದಂಡತಾಪೂರ್ವಕವಾಗಿ ಅವರ ನಿಂದೆ ಮಾಡುವವರೂ ಆಗುವರು. ಈ ರುದ್ರನು ನಾಲ್ಕೂ ವರ್ಣಗಳಿಗೆ ಹೊರತಾಗಿದ್ದು ಅತ್ಯಂತ ಕುರೂಪಿಯಾಗಿರುವನು. ಇವನು ಈ ಯಜ್ಞದಲ್ಲಿ ಭಾಗ ತೆಗೆದುಕೊಳ್ಳಲು ಅಯೋಗ್ಯನಾಗಿರುವನು. ಇವನಿಗೆ ಯಜ್ಞದಲ್ಲಿ ಬಹಿಷ್ಕಾರವಿದೆ.

ದಕ್ಷನ ಮಾತು ಕೇಳಿ ಶಿಲಾದಪುತ್ರ ನಂದೀಶ್ವರನು ಅತ್ಯಂತ ಕ್ರುದ್ಧನಾದನು. ಅವನು ದಕ್ಷನಿಗೆ ಶಾಪ ಕೊಡಬೇಕೆಂಬ ಉದ್ದೇಶ ಹೊಂದಿ ಕಠೋರವಾಣಿಯಿಂದ ಮಾತಾಡತೊಡಗಿದನು.

ನಂದೀಶ್ವರ-ದುಷ್ಟಬುದ್ಧಿಯ ದಕ್ಷನೆ, ಮೂಢಮತಿಯೆ, ನೀನು ನನ್ನ ಸ್ವಾಮಿಯಾದ ಮಹೇಶ್ವರನನ್ನು ಯಜ್ಞದಿಂದ ಬಹಿಷ್ಕೃತನನ್ನಾಗಿ ಮಾಡಿದ್ದೇಕೆ? ಮಹಾದೇವನ ನಾಮಸ್ಮರಣೆಯಿಂದ ಯಜ್ಞವು ಸಾಫಲ್ಯವಾಗುವದು; ತೀರ್ಥಗಳು ಪವಿತ್ರವಾಗುವವು. ನೀನು ಬ್ರಾಹ್ಮಣಜಾತಿಯ ಚಪಲತೆಯಿಂದ ಪ್ರೇರಿತನಾಗಿ ರುದ್ರದೇವನಿಗೆ ಶಾಪ ಕೊಟ್ಟಿದ್ದು ವ್ಯರ್ಥವಾದದ್ದಾಗಿದೆ. ಬ್ರಾಹ್ಮಣಾಧಮಾ, ಸೃಷ್ಟಿಯ ಸ್ಥಿತಿ, ಲಯಗಳಿಗೆ ಕಾರಣನಾದ ಭಗವಾನ್ ಮಹಾದೇವನಿಗೆ ನೀನು ಶಾಪವನ್ನು ಕೊಟ್ಟ ಉದ್ದೇಶವೇನು ?

ದಕ್ಷ-ನಂದೀಶ್ವರಾ, ವೃಥಾ ಹೊಗಳಬೇಡ. ಈ ರುದ್ರಗಣವೆಲ್ಲವೂ ವೇದಬಾಹಿರವಾಗುವದು. ನೀವೆಲ್ಲರೂ ವೈದಿಕಮಾರ್ಗದಿಂದ ಭ್ರಷ್ಟರೂ ಪಾಖಂಡಿಗಳೂ ಆಗುವಿರಿ !

ನಂದೀಶ್ವರ-ಶಠನಾದ ದಕ್ಷನೇ, ನಿನಗೆ ಶಿವತತ್ವದ ಜ್ಞಾನವು ಸ್ವಲ್ಪವೂ ಇರುವದಿಲ್ಲ. ಈ ಭೃಗು ಮೊದಲಾದ ದೊಡ್ಡ ದೊಡ್ಡ ಋಷಿಗಳು ಸಹ ಬ್ರಾಹ್ಮಣತ್ವದ ಅಭಿಮಾನದಿಂದ ಮಹೇಶ್ವರನ ಉಪಹಾಸ ಮಾಡಿರುವರು. ಇಂತಹ ಬ್ರಾಹ್ಮಣರು ವೇದತತ್ವಜ್ಞಾನ ಶೂನ್ಯರಾಗಲಿ; ಕ್ರೋಧದಿಂದಲೂ

ಮದದಿಂದಲೂ, ಲೋಭದಿಂದಲೂ ಯುಕ್ತರಾಗಲಿ. ಬ್ರಾಹ್ಮಣರು ಭಿಕ್ಷಾವೃತ್ತಿಯವರಾಗಲಿ. ಎಷ್ಟೋ ಬ್ರಾಹ್ಮಣರು ವೇದಮಾರ್ಗದಲ್ಲಿದ್ದು ಶೂದ್ರರ ಯಜ್ಞವನ್ನು ನೆರವೇರಿಸುವವರೂ, ದರಿದ್ರರೂ ಆಗುವರು. ದುಷ್ಟಬುದ್ಧಿಯ ಪ್ರಜಾಪತಿ ದಕ್ಷನೆ, ನೀನು ತತ್ವಜ್ಞಾನವಿಮುಖನಾಗುವೆ. ನೀನು ಪಶುಸಮಾನನಿದ್ದು ಬೇಗನೆ ಹೋತಿನ ಮುಖದವನಾಗುವೆ.

ನಾರದಾ, ನಂದಿಯು ಕುಪಿತನಾಗಿ ಹೀಗೆ ಹೇಳಿದಕೂಡಲೆ ಯಜ್ಞ ಮಂಟಪದಲ್ಲಿ ಹಾಹಾಕಾರವೆದ್ದಿತು. ಆಗ ಸದಾಶಿವ ಮಹಾದೇವನು ನಂದಿಯನ್ನು ಸಮಾಧಾನಪಡಿಸತೊಡಗಿದನು.

ಸದಾಶಿವ–ನಂದಿ, ನೀನು ಪರಮಜ್ಞಾನಿಯಿರುವೆ. ನೀನು ಕ್ರೋಧಗೊಳ್ಳಬೇಡ. ನೀನು ಬ್ರಾಹ್ಮಣ ಕುಲಕ್ಕೆ ವ್ಯರ್ಥವಾಗಿ ಶಾಪ ಕೊಟ್ಟೆ. ನನಗೆ ಯಾರ ಶಾಪವೂ ತಗಲುವದಿಲ್ಲ. ಆದುದರಿಂದ ನೀನು ಉತ್ತೇಜಿತನಾಗಬೇಡ. ವೇದಗಳು ಮಂತ್ರಾಕ್ಷರಮಯವೂ ಸೂಕ್ತಮಯವೂ ಇರುವವು. ಅದರ ಪ್ರತಿಯೊಂದು ಸೂಕ್ತದಲ್ಲಿ ಆತ್ಮನು ಪ್ರತಿಷ್ಠಿತನಾಗಿರುವನು. ಆದ್ದರಿಂದ ಆ ಮಂತ್ರಗಳ ಜ್ಞಾನವುಳ್ಳವನು ನಿತ್ಯ ಆತ್ಮವೇತ್ತನು. ನೀನು ರೋಷವಶನಾಗಿ ಶಾಪ ಕೊಡಬೇಡ; ಶಾಂತನಾಗು. ನಾನು ಯಜ್ಞವಾಗಿರುವೆನು, ಯಜ್ಞಕರ್ಮವೂ ನಾನಾಗಿರುವೆನು, ಯಜ್ಞಪರಾಯಣ ಯಜಮಾನನೂ ನಾನೇ ಆಗಿರುವೆನು.

ಭಗವಾನ್ ಶಂಭುವಿನ ಮಾತು ಕೇಳಿ ನಂದೀಶ್ವರನು ಶಾಂತನಾದನು. ಕೂಡಲೆ ಶಿವನು ತನ್ನ ಪಾರ್ಷದಗಣದೊಡನೆ ಯಜ್ಞಮಂಟಪದಿಂದ ಹೊರಟು ಹೋದನು.

ದಕ್ಷ ಪ್ರಜಾಪತಿಯು ಒಂದು ಮಹಾಯಜ್ಞವನ್ನು ಪ್ರಾರಂಭಿಸಿದನು. ಅವನು ನನಗೂ ವಿಷ್ಣುವಿಗೂ ಋಷಿ–ಮಹರ್ಷಿಗಳಿಗೂ ಆಮಂತ್ರಣ ಕೊಟ್ಟು ಕರೆಯಿಸಿದನು. ಯಜ್ಞಸಮಾರಂಭಕ್ಕೆ ಎಲ್ಲ ದೇವತೆಗಳೂ ಋಷಿ–ಮುನಿಗಳೂ ಆಗಮಿಸಿದರು. ಭಗವಾನ್ ಮಹಾದೇವನಿಗೆ ಅವನು ಆಮಂತ್ರಣ ಕೊಡಲಿಲ್ಲ; ಮಗಳಾದ ಸತಿದೇವಿಯನ್ನೂ ಅವನು ಕರೆಯಿಸಲಿಲ್ಲ. ಆಗ ದಧೀಚನು ದಕ್ಷನಿಗೆ ಶಂಭು, ಶಾಂಭವಿಯರನ್ನು ಕರೆಯಿಸಲು ತಿಳಿಸಿದನು. ದಕ್ಷನು ಅವನ ಮಾತುಗಳನ್ನು ತಿರಸ್ಕರಿಸಿದನು. ಕೂಡಲೆ ಶಿವಭಕ್ತನಾದ ದಧೀಚನೂ ಶೈವಾಭಿಮಾನಿ ಋಷಿಗಳೂ

ಯಜ್ಞಮಂಟಪದಿಂದ ಹೊರಟುಹೋದರು. ಆದರೆ ದಕ್ಷನಲ್ಲಿಯ ಶಿವದ್ರೋಹ ಬುದ್ಧಿಯು ನಶಿಸಲಿಲ್ಲ. ಅವನು ಯಜ್ಞಾರಂಭ ಮಾಡಿಯೇ ಬಿಟ್ಟನು.

ಚಂದ್ರದೇವನು ತನ್ನ ಪತ್ನಿಯಾದ ರೋಹಿಣಿಯೊಡನೆ ದಕ್ಷ ಯಜ್ಞಕ್ಕೆ ಹೊರಟಿದ್ದನು. ಸತಿದೇವಿಯು ಕುತೂಹಲದಿಂದ ತನ್ನ ಸಖಿಯಾದ ವಿಜಯೆಯನ್ನು ಪ್ರಯಾಣದ ಉದ್ದೇಶವನ್ನು ತಿಳಿದುಕೊಂಡುಬರಲು ಚಂದ್ರದೇವನ ಕಡೆಗೆ ಕಳುಹಿಸಿದಳು. ದಕ್ಷಯಜ್ಞಕ್ಕೆ ಹೊರಟಿರುವೆನೆಂದು ಚಂದ್ರನು ವಿಜಯೆಗೆ ತಿಳಿಸಿದನು. ತನ್ನ ತಂದೆಯ ಮನೆಯಲ್ಲಿ ಮಹಾಯಜ್ಞಸಮಾರಂಭವು ವಿಜೃಂಭಣೆ ಯಿಂದ ಜರುಗುತ್ತಿದ್ದರೂ, ತನಗೂ ಮಹೇಶ್ವರನಿಗೂ ಆಮಂತ್ರಣ ಕಳುಹಿಸದೆ ಇದ್ದುದಕ್ಕಾಗಿ ಅವಳು ಕಡು ದುಃಖಿತಳಾದಳು. ಅವಳು ಮಹಾದೇವನ ಬಳಿಗೆ ಬಂದು ವಂದಿಸಿ ಮಾತಾಡತೊಡಗಿದಳು.

ಸತೀದೇವಿ– ಭಗವನ್ ಶಂಕರಾ, ನನ್ನ ತಂದೆಯು ಒಂದು ಮಹಾಯಜ್ಞ ವನ್ನು ಪ್ರಾರಂಭಿಸಿರುವನು. ಬ್ರಹ್ಮ, ವಿಷ್ಣು, ದೇವೇಂದ್ರ, ಋಷಿ, ಮಹರ್ಷಿಗಳು ಮೊದಲಾದವರೆಲ್ಲರೂ ಆಗಮಿಸಿರುವರೆಂದು ಚಂದ್ರದೇವನು ಹೇಳಿದನು. ದುಷ್ಟನಾದ ತಂದೆಯು ನಮ್ಮಿಬ್ಬರನ್ನೂ ಆಮಂತ್ರಿಸಿಲ್ಲ. ನಾನು ಅಲ್ಲಿಗೆ ಹೋಗಿ ಅವನು ಎಸಗಿದ ದುರಾಚಾರದ ಬಗ್ಗೆ ಅವನನ್ನು ಖಂಡಿಸುವೆನು. ಸುಹೃದಯರಲ್ಲಿ ಆಮಂತ್ರಣ ಕೊಡುವ ಕಾರಣವಿಲ್ಲ. ಆದುದರಿಂದ ನೀನೂ ಹೊರಡು.

ಶಿವ–ದೇವಿ, ನಿನ್ನ ಪಿತನು ಶಿವದ್ರೋಹಿಯು. ಅವನು ನನ್ನನ್ನು ಅಪಮಾನಗೊಳಿಸಿರುವದರಿಂದ ನಾನು ಅಲ್ಲಿಗೆ ಬರುವದಿಲ್ಲ. ಕರೆಯಿಸದೆ ಹೋದರೆ ಆ ದುಷ್ಟನು ಅನಾದರ ಮಾಡುವನು. ನೀನು ನಿನ್ನ ತವರುಮನೆಯ ಅಭಿಮಾನದಿಂದ ಹೋಗಲಿಚ್ಛಿಸಿದರೆ ಹೋಗಬಹುದು. ನಂದೀಶ್ವರನು ಸಿದ್ಧನಾಗಿಯೆ ಇರುವನು. ನಿನ್ನೊಡನೆ ನನ್ನ ಪಾರ್ಷದರೂ ಬರುವರು.

ನಾರದಾ, ಸತಿದೇವಿಯು ತಂದೆಯ ಯಜ್ಞಸಮಾರಂಭಕ್ಕೆ ಹೊರಟಳು. ಎಲ್ಲ ದೇವತೆಗಳೂ ಮುನಿಗಳೂ ಆಗಮಿಸಿದ್ದನ್ನು ಕಂಡು ಅವಳಿಗೆ ಸಂತಾಪ ವಾಯಿತು.

ಸತೀದೇವಿ– ಪ್ರಜಾಪತಿಯೆ, ನೀನು ಎಲ್ಲರಿಗೂ ಆಮಂತ್ರಣ ಕೊಟ್ಟು ಕರೆಯಿಸಿರುವೆ. ಆದರೆ ನಿನ್ನ ಪುತ್ರಿಯಾದ ನನ್ನನ್ನೂ, ಭಗವಾನ್ ಶಂಕರನನ್ನು ಏಕೆ

ಕರೆಯಿಸಲಿಲ್ಲ. ಈ ಬಗೆಯ ವರ್ತನವು ನಿನಗೆ ಶೋಭಿಸುವಂತಹದಲ್ಲ. ನೀನು ಶಿವದ್ರೋಹವನ್ನೆಸಗಿದೆ. ಇದರ ಪರಿಣಾಮವು ಒಳ್ಳೆಯದಾಗುವದಿಲ್ಲ.

ದಕ್ಷ–ಆ ಪ್ರೇತಾಧಿಪತಿಯು ವೇದಗಳಿಂದ ಬಹಿಷ್ಕೃತನಾಗಿರುವನು. ಅವನ ಪಾಣಿಗ್ರಹಣ ಮಾಡಿದ ನೀನೂ ಬಹಿಷ್ಕೃತಳೇ ಇರುವೆ. ಲೋಕಪಿತಾಮಹ ಬ್ರಹ್ಮದೇವನ ಮಾತುಗಳನ್ನು ಮೀರಲಾರದೆ ನಿನ್ನಂತಹ ಶುಭಾಂಗಿಯಾದ ಪುತ್ರಿಯನ್ನು ಆ ಸ್ಮಶಾನವಾಸಿಗೆ ಅರ್ಪಿಸಿದೆನು. ನನ್ನಿಂದ ತಪ್ಪಾಗಿದೆ. ನೀನು ಬಂದ ದಾರಿಗೆ ಸುಂಕವಿಲ್ಲವೆಂಬಂತೆ ಇಲ್ಲಿಂದ ಹೊರಟುಹೋಗಬಹುದು.

ಸತೀದೇವಿಯು ಸಂತಪ್ತಳಾದಳು. ಅವಳು ಯಜ್ಞಕುಂಡದ ಬಳಿಯಲ್ಲಿ ಕುಳಿತಳು.

ಸತೀದೇವಿ–ಭಗವಾನ್ ಶಂಕರನ ನಿಂದೆ ಮಾಡುವ ನೀನು ಯೋಗ್ಯ ಪ್ರಾಯಶ್ಚಿತ್ತ ಹೊಂದುವೆ. ತಂದೆಯೇ, ನೀನು ಮಹಾದೇವನನ್ನು ಅರಿತಿಲ್ಲ. ಅವನು ನಿನ್ನಲ್ಲಿ ಅಭಿಮಾನವುಳ್ಳವನಾಗಿರುವನು. ಅದಕ್ಕಾಗಿಯೆ ಅವನು ನನ್ನನ್ನು 'ದಾಕ್ಷಾಯಣಿ, ದಕ್ಷನಂದಿನಿ' ಎಂದು ಸಂಬೋಧಿಸುತ್ತಿರುವನು. ನೀನು ಅವನನ್ನು ನಿಂದಿಸಿ ನರಕಭಾಜನನಾಗುವೆ.

ಯೋ ನಿಂದತಿ ಮಹಾದೇವಂ ನಿಂದ್ಯಮಾನಂ ಶೃಣೋತಿ ವಾ ।
ತಾವುಭೌ ನರಕಂ ಯಾತೌ ಯಾವಚ್ಚಂದ್ರ ದಿವಾಕರೌ ॥

(ಶಿ. ಪು. ರು. ಸಂ. ಸ. ಖಂ. ೨೯–೩೮)

ದಕ್ಷಪ್ರಜಾಪತಿ, ನೀನು ಅತ್ಯಂತ ಅಹಂಕಾರಿಯಾಗಿರುವೆ. ನೀನು ಶಿವನಿಂದೆ ಮಾಡಿದ ಪಾಪಕ್ಕಾಗಿ ಆಚಂದ್ರಾರ್ಕ ನರಕವನ್ನು ಅನುಭವಿಸುವಿ, ನಿಶ್ಚಿತವು! ಹೀಗೆ ಹೇಳಿ, ಅವಳು ವಿಧಿಪೂರ್ವಕವಾಗಿ ಆಚಮನಮಾಡಿ ಕಣ್ಣುಮುಚ್ಚಿದಳು. ಅವಳು ಪತಿಯಾದ ಭಗವಾನ್ ಶಂಕರನನ್ನು ಧ್ಯಾನಿಸುತ್ತ ಪ್ರಾಣ, ಅಪಾನಗಳನ್ನು ಏಕರೂಪಗೊಳಿಸಿದಳು. ಆಮೇಲೆ ಉದಾನವಾಯುವನ್ನು ನಾಭಿಚಕ್ರದ ಮೇಲೇರಿಸಿ ಬುದ್ಧಿಯೊಡನೆ ಹೃದಯದಲ್ಲಿ ಸ್ಥಾಪಿಸಿದಳು. ತರುವಾಯ ಶಂಕರನ ಪ್ರಾಣವಲ್ಲಭೆಯಾದ ಸತಿಯು ಹೃದಯಸ್ಥಿತ ವಾಯುವನ್ನು ಕಂಠಮಾರ್ಗದಿಂದ ಭ್ರುಕುಟಿಯ ಮಧ್ಯದಲ್ಲಿ ಒಯ್ದಳು. ಆಮೇಲೆ ಸಂಪೂರ್ಣ ಯೋಗಮಾರ್ಗಾನು

ಸಾರವಾಗಿ ವಾಯು ಮತ್ತು ಅಗ್ನಿಯನ್ನು ಧಾರಣ ಮಾಡಿದಳು. ಪರಕ್ಷಣದಲ್ಲಿ ಅವಳ ದೇಹವು ಯೋಗಾಗ್ನಿಯಿಂದ ದಗ್ಧವಾಗಿ ಹೋಯಿತು! ಯಜ್ಞಮಂಟಪದಲ್ಲಿ ಕೋಲಾಹಲವೆದ್ದಿತು. ಸಹಸ್ರಾರು ಶಿವಪಾರ್ಷದರೂ ನಂದಿಯೂ ಶಸ್ತ್ರಗಳನ್ನು ಹಿರಿದರು. ಭೃಗು ಮಹರ್ಷಿಯು ವಿಘ್ನಮಾಡುವವರ ನಾಶಕ್ಕಾಗಿ ನಿಯತವಾದ 'ಅಪಹತಾ ಅಸುರಾ: ರಕ್ಷಾ ಸಿ ವೇದಿ ಷದಃ' ಎಂಬ ಯಜುರ್ಮಂತ್ರದಿಂದ ದಕ್ಷಿಣಾಗ್ನಿಯಲ್ಲಿ ಆಹುತಿಯನ್ನು ಸಮರ್ಪಿಸಿದನು. ಕೂಡಲೆ ಯಜ್ಞಕುಂಡದಲ್ಲಿ ಸಹಸ್ರಾವಧಿಯಾಗಿ ಋಭು ಎಂಬ ಬಲಾಢ್ಯ ದೇವತೆಗಳು ಪ್ರಕಟರಾದರು. ಶಿವಪಾರ್ಷದರಿಗೂ ಋಭುಗಳಿಗೂ ಯುದ್ಧವು ನಡೆಯಿತು. ಯಜ್ಞಮಂಟಪವು ರಣರಂಗವಾಯಿತು. ರಕ್ತದ ಕಾಲುವೆಯು ಹರಿಯಿತು–ಋಷಿ, ಮಹರ್ಷಿಗಳೂ ದೇವತೆಗಳೂ ಯಜ್ಞಮಂಟಪದಿಂದ ಪಲಾಯನ ಮಾಡಿದರು. ಶಿವಪಾರ್ಷದರು ಯಜ್ಞಕುಂಡವನ್ನು ಉಧ್ವಸ್ತಗೊಳಿಸಿ ಕೈಲಾಸಕ್ಕೆ ತೆರಳಿದರು.

ನಾರದಾ, ದಕ್ಷಯಾಗದ ಘಟನೆಗಳನ್ನು ನಿನ್ನಿಂದ ಕೇಳಿದ ರುದ್ರದೇವನು ರೌದ್ರಾವತಾರ ತಾಳಿ ತಾಂಡವ ನೃತ್ಯ ಮಾಡುತ್ತ ಜಟೆಯನ್ನು ನೆಲಕ್ಕೆ ಅಪ್ಪಳಿಸಿದನು. ಅದು ಎರಡು ಭಾಗವಾಗಿ, ಒಂದು ಭಾಗದಿಂದ ಪ್ರಳಯಕಾಲದ ರುದ್ರನಿಗಿಂತಲೂ ಉಗ್ರನಾದ ಭಗವಾನ್ ವೀರಭದ್ರನೂ, ಮತ್ತೊಂದು ಭಾಗದಿಂದ ಪ್ರಳಯಕಾಲದ ಮಹಾಕಾಲಿಯೂ ಉದ್ಭವಿಸಿದರು. ಅವರು ದಕ್ಷನ ಯಜ್ಞ ಮಂಟಪಕ್ಕೆ ಭೂತಗಣ ಸಹಿತವಾಗಿ ಹೋಗಿ ದಕ್ಷನ ಶಿರಚ್ಛೇದನ ಮಾಡಿದರು. ಶಿರಸ್ಸು ಅಗ್ನಿಗೆ ಆಹುತಿಯಾಯಿತು.

ದಯಾಘನನಾದ ಮಹೇಶ್ವರನು ದಕ್ಷನ ಡಿಂಭಕ್ಕೆ ಹೋತಿನ ತಲೆ ಹಚ್ಚಿ ಜೀವಂತಗೊಳಿಸಿದನು. ದಕ್ಷನು ರುದ್ರದೇವನಲ್ಲಿ ಕ್ಷಮಾಯಾಚನೆ ಮಾಡಿದನು. ತರುವಾಯ ತ್ರಿಮೂರ್ತಿಗಳು ಕೂಡಿ ಅವನ ಮಹಾಯಜ್ಞವನ್ನು ಪೂರ್ಣಗೊಳಿಸಿ ಅವಭೃತಸ್ನಾನ ಮಾಡಿದರು.

ರುದ್ರ ಸಂಹಿತಾ : ದ್ವಿತೀಯ (ಸತೀ) ಖಂಡ ಸಂಪೂರ್ಣ.

## ರುದ್ರ ಸಂಹಿತಾ : ತೃತೀಯ (ಪಾರ್ವತಿ) ಖಂಡ

# ಪಾರ್ವತಿ

ನಾರದ–ಬ್ರಹ್ಮದೇವಾ, ಭಗವತಿ ಜಗದಂಬೆಯು ದಕ್ಷಪ್ರಜಾಪತಿಗೆ ದರ್ಶನವಿತ್ತು, ತಾನು ಹೇಳಿದ ಮೇರೆಗೆ ದೇಹತ್ಯಾಗ ಮಾಡಿದಳು. ತರುವಾಯ ಅವಳು ಮೇನಕಾ–ಹಿಮವಂತರ ಪುತ್ರಿಯಾದಳು. ಪರ್ವತರಾಜನ ಪುತ್ರಿಯಾದ ಪಾರ್ವತಿಯ ಚರಿತ್ರೆಯನ್ನು ಕೇಳಲು ಅಪೇಕ್ಷಿಸಿರುವೆನು. ನೀನು ಪಾವನಕರ ಚರಿತ್ರವನ್ನು ಪ್ರಕಟಗೊಳಿಸಬೇಕು.

ಬ್ರಹ್ಮ–ದೇವರ್ಷಿ ನಾರದಾ, ಹಿಮಾಚಲ ಮಹಾನ್ ಪರ್ವತದ ಅಧಿಪತಿಯು ಹಿಮವಂತನು. ಇವನು ಹೇಮ, ರತ್ನಗಳಿಗೆ ಆಗರವಾಗಿದ್ದನು. ಅನೇಕ ಯತಿಗಳೂ, ಋಷಿಗಳು ಹಿಮಾಚಲ ಪರ್ವತ ಶ್ರೇಣಿಯಲ್ಲಿಯೂ ಗಿರಿ ಗಹ್ವರ ಗಳಲ್ಲಿಯೂ ತಪಸ್ಸು ಮಾಡುತ್ತಾರೆ. ಈ ಪರ್ವತವು ಅನೇಕ ಬಗೆಯ ವೃಕ್ಷಗಳಿಂದಲೂ ವನಸ್ಪತಿಗಳಿಂದಲೂ ಸಮೃದ್ಧವಾಗಿದೆ. ಶಿವನ ಕೈಲಾಸವೂ ವಿಷ್ಣುವಿನ ವೈಕುಂಠವೂ ನನ್ನ ಸತ್ಯಲೋಕವೂ ಹಿಮಾಚಲ ಶ್ರೇಣಿಯಲ್ಲಿಯೇ ಇರುವವು. ಅನೇಕ ಪಾವನಕಾರಿ ನದಿಗಳು ಇಲ್ಲಿಂದಲೇ ಹರಿದು ಭಾರತ ವರ್ಷವನ್ನು ಪಾವನ ಗೊಳಿಸುವವು. ಲೋಕೋದ್ಧಾರಕ್ಕಾಗಿ ವಿವಾಹ ಮಾಡಿಕೊಳ್ಳಬೇಕೆಂಬ ಇಚ್ಛೆಯು ಹಿಮವಂತನಿಗಾಯಿತು. ದೇವತೆಗಳು ಪರ್ವತರಾಜನ ಮನೋದಯವನ್ನು ಅರಿತರು. ಕೂಡಲೆ ಅವರು ಪಿತೃಗಳ ಬಳಿಗೆ ಹೋದರು. ಪಿತೃಗಳಿಗೆ ಸ್ವಧಾದೇವಿಯು ಪತ್ನಿಯು. ಮೇನಕಾ, ಧನ್ಯಾ, ಕಲಾವತಿ ಎಂಬ ಮೂವರು ಕನ್ಯೆಯರು ಪಿತೃಗಳ ಮಾನಸಪುತ್ರಿಯರು, ಅಯೋನಿಜೆಯರು. ದೇವತೆಗಳು ಹಿರಿಯ ಪುತ್ರಿಯಾದ ಮೇನಕೆಯನ್ನು ಹಿಮವಂತನಿಗೆ ವಿವಾಹ ಮಾಡಿಕೊಡ ಬೇಕೆಂದು ಹೇಳಿದರು. ನಾರದಾ, ಧನ್ಯಾದೇವಿಯು ಸೀರಧ್ವಜಜನಕ ಪತ್ನಿಯು– ಭಗವತಿ ಸೀತಾದೇವಿಯ ಮಾತೆಯು. ಕಲಾವತಿಯು ವೈಶ್ಯ ವೃಷಭಾನುವಿನ ಪತ್ನಿಯು; ಭಗವತಿ ರಾಧಾದೇವಿಯ ಮಾತೆಯು. ಪಿತೃಗಳು ಮೇನಕಾದೇವಿಯನ್ನು ಹಿಮವಂತನಿಗೆ ಕೊಡಲೊಪ್ಪಿದರು. ವಿಜೃಂಭಣೆಯಿಂದ ವಿವಾಹವೂ ಜರುಗಿತು.

ಮೇನಕೆ–ಹಿಮವಂತರು ಸುಖದಿಂದ ಕಾಲಕಳೆಯುತ್ತಿರುವಾಗ ದೇವತೆ ಗಳು ಅವರ ಬಳಿಗೆ ಬಂದು, ದೇಹತ್ಯಾಗ ಮಾಡಿದ ಸತಿದೇವಿಯು ನಿಮ್ಮ

ಮಂದಿರದಲ್ಲಿ ಪ್ರಕಟಳಾಗಬೇಕೆಂಬ ತಮ್ಮ ಇಚ್ಛೆಯನ್ನು ತಿಳಿಸಿದರು. ಜಗನ್ಮಾತೆಯು ತಮ್ಮ ಉದರದಿಂದ ಪ್ರಕಟಳಾದರೆ ತಾವು ಧನ್ಯರೆಂದು ಆ ದಂಪತಿಗಳು ದೇವತೆಗಳಿಗೆ ತಿಳಿಸಿದರು. ಬಳಿಕ ವಿಷ್ಣು ಮೊದಲಾದ ದೇವತೆಗಳು ಭಗವತಿಯ ಸ್ತೋತ್ರ ಮಾಡತೊಡಗಿದರು.

ದೇವತೆಗಳು– ಜಗದಂಬೆ, ದುರ್ಗೇ, ಸದಾಶಿವ ಪ್ರಿಯೆ, ನೀನು ಪಾವನ ಸ್ವರೂಪಳಿರುವೆ. ಶ್ರೀಶಕ್ತಿಯಿರುವೆ. ಆದಿದೇವಿ, ಆದಿಶಕ್ತಿ, ಸಾವಿತ್ರಿ, ಗಾಯತ್ರಿ, ಸರಸ್ವತಿ, ನೀನು ನಮ್ಮಲ್ಲಿ ದಯದೋರು. ನೀನು ನಮಗೆ ಪ್ರತ್ಯಕ್ಷಳಾಗು.

ಬ್ರಹ್ಮದೇವ– ನಾರದಾ, ಅಂಬಿಕೆಯು ದೇವತೆಗಳ ಸ್ತುತಿಯಿಂದ ಪ್ರಸನ್ನ ಳಾದಳು. ಎಲ್ಲ ದೇವತೆಗಳೂ ಮಹೇಶ್ವರಿಗೆ ಪ್ರಣಾಮಗಳನ್ನರ್ಪಿಸಿ, ಲೋಕೋ ದ್ಧಾರಕ್ಕಾಗಿ ಭಗವಾನ್ ರುದ್ರದೇವನ ಪತ್ನಿಯಾಗಬೇಕೆಂದು ಹೇಳಿದರು. ಹಿಮವಂತನೂ, ಅವನ ಪತ್ನಿಯಾದ ಮೇನಕೆಯೂ ನಿನ್ನ ಆರಾಧನೆ ಯಲ್ಲಿ ಮಗ್ನನಾಗಿರುವರು. ನೀನು ಅವರಿಗೆ ಪುತ್ರಿಯಾಗಿ ಜನಿಸಬೇಕು. ಭಗವತಿ ಸತಿದೇವಿಯಾಗಿ ಜನಿಸಿದ ನೀನು ದಕ್ಷಜನಿತ ದೇಹವನ್ನು ದಹಿಸಿಬಿಟ್ಟೆ. ಈಗ ಮಹಾದೇವನು ಏಕಾಕಿಯಾಗಿರುವನು. ನೀನು ಪರ್ವತರಾಜನ ಕನ್ಯೆಯಾಗಿ ಜನಿಸಿ ಶಿವನನ್ನುವರಿಸಬೇಕು.

ಉಮಾದೇವಿ– ಶ್ರೀಹರಿಯೆ, ವಿಧಾತಾ, ಮುನಿಗಳೆ, ನಾನು ನಿಮ್ಮ ಇಚ್ಛೆ ಯಂತೆ ಮೇನಕೆಯ ಪುತ್ರಿಯಾಗಿ ಜನಿಸುವೆನು. ಸತಿಯ ದೇಹತ್ಯಾಗದಿಂದ ರುದ್ರದೇವನು ಅತ್ಯಂತ ದುಃಖಿತನಾದನು. ಅವನು ಈಗ ಯೋಗಿಯಾಗಿ ತಪಸ್ಸು ಮಾಡುತ್ತಿರುವನು. ನಾನು ಪರ್ವತ ರಾಜಕುಮಾರಿ ಪಾರ್ವತಿಯಾಗಿ ಜನಿಸಿ ಅವನನ್ನು ವಿವಾಹವಾಗುವೆನು.

ಬ್ರಹ್ಮ– ಭಗವತಿ ಉಮಾದೇವಿಯು ದೇವತೆಗಳಿಗೆ ಆಶ್ವಾಸನೆ ಕೊಟ್ಟು ಅಂತರ್ಧಾನಳಾದಳು. ಪುತ್ರಶ್ರೇಷ್ಠನಾದ ನಾರದಾ, ದೇವತೆಗಳು ಮೇನಾ ದೇವಿಯ ಬಳಿಗೆ ಬಂದು, ಅಂಬಿಕೆಯ ಆರಾಧನೆಯ ಬಗ್ಗೆ ಉಪದೇಶ ಮಾಡಿದರು. ತರುವಾಯ ಹಿಮಾಚಲನೂ ಮೇನಾದೇವಿಯೂ ಜಗದಂಬೆಯನ್ನು ಕುರಿತು ತಪಾಚರಣೆ ಮಾಡಲಾರಂಭಿಸಿದರು. ಆ ದಂಪತಿಗಳ ತಪಸ್ಸಿಗೆ ಮಹಾದೇವಿಯು ಮೆಚ್ಚಿದಳು. ಅವಳು ಅವರಿಗೆ ಪ್ರತ್ಯಕ್ಷಳಾದಳು. ಆ ದಂಪತಿಗಳು

ಜಗದ್ಧಾತ್ರಿಗೆ ಪ್ರಣಾಮಗಳನ್ನರ್ಪಿಸಿದರು. ಅವರ ಇಷ್ಟಾರ್ಥವನ್ನು ನೆರವೇರಿಸುವೆನೆಂದು ದೇವಿಯು ಅವರಿಗೆ ಹೇಳಿದಳು.

ಮೇನಾದೇವಿ–ಮಹಾಮಾಯೇ, ಚಂಡಿಕೆ, ಜಗದಂಬಿಕೆ, ನಿನಗೆ ಜಯವಾಗಲಿ, ನನ್ನ ಇಷ್ಟಾರ್ಥವನ್ನು ಈಡೇರಿಸುವದಕ್ಕಾಗಿ ನೀನು ನಮಗೆ ಪ್ರತ್ಯಕ್ಷಳಾಗಿರುವೆ. ಭವಾನಿ, ಮೊದಲು ನನಗೆ ನೂರು ಜನ ಪುತ್ರರು ಜನಿಸಬೇಕು. ತರುವಾಯ ಆದಿಶಕ್ತಿಯಾದ ನೀನು ನನ್ನ ಉದರದಿಂದ ಜನಿಸಿ ರುದ್ರದೇವನ ಪತ್ನಿಯಾಗಬೇಕು.

ದೇವಿ–ಪರ್ವತ ರಾಜಪತ್ನಿ, ನಿನ್ನ ಇಚ್ಛೆಯಂತೆ ಮೊದಲು ನೂರು ಜನ ಪುತ್ರರನ್ನು ಪಡೆಯುವೆ. ಅವರಲ್ಲಿ ಹಿರಿಯನಾದ ಮೈನಾಕನು ಅತ್ಯಂತ ಬಲಾಢ್ಯನಾಗುವನು. ನಾನು ನಿನ್ನ ಉದರದಿಂದ ಜನಿಸಿ, ಪಾರ್ವತಿ ಎಂಬ ಹೆಸರು ಹೊಂದಿ ಭಗವಾನ್ ರುದ್ರದೇವನನ್ನು ವಿವಾಹವಾಗುವೆನು.

ಬ್ರಹ್ಮದೇವ–ನಾರದಾ, ಜಗದಂಬೆಯು ಹೀಗೆ ವರದಾನ ಮಾಡಿ ಅಂತರ್ಧಾನಳಾದಳು. ಕಾಲವಶದಿಂದ ಮೇನಕೆಯು ಜಗದಂಬೆಯ ವರದಂತೆ ಪುತ್ರರನ್ನು ಪಡೆದು, ಕನ್ಯಾ ಪ್ರಾಪ್ತಿಗಾಗಿ ಹಿಮಾಚಲನೂ ಮೇನಕೆಯೂ ಜಗಜ್ಜನನಿ ಭಗವತಿ ಉಮಾದೇವಿಯನ್ನು ಧ್ಯಾನಿಸತೊಡಗಿದರು. ದೇವಿಯು ತನ್ನ ಪೂರ್ಣ ಅಂಶದಿಂದ ಗಿರಿರಾಜ ಹಿಮಾಚಲನ ಚಿತ್ತದಲ್ಲಿ ಪ್ರವಿಷ್ಟಳಾದಳು. ಕೂಡಲೆ ಅವನಲ್ಲಿ ಅಪೂರ್ವವಾದ ಸುಂದರ ಪ್ರಭೆಯು ಬೆಳಗತೊಡಗಿತು. ಕೆಲದಿನಗಳಲ್ಲಿ ದೇವಿಯ ಪೂರ್ಣಾಂಶವು ಮೇನಕೆಯ ಗರ್ಭವನ್ನು ಪ್ರವೇಶಿಸಿತು. ಜಗಬಂಬೆಯ ಕೃಪೆಯಿಂದ ಅವಳು ಗರ್ಭಿಣಿಯಾದಳು. ಜಗತ್ತು ಆನಂದಮಯವಾಯಿತು. ಶ್ರೀವಿಷ್ಣು ಮೊದಲಾದ ದೇವತೆಗಳು ಮೇನಕೆಯನ್ನು ಕಂಡು ಅವಳನ್ನು ಶ್ಲಾಘಿಸಿ, ಜಗದಂಬೆಯ ಸ್ತೋತ್ರ ಮಾಡಿದರು. ಮುಂದೆ ನವಮಾಸ ತುಂಬಿದೊಡನೆಯೆ, ವಸಂತ ಋತುವಿನ ಚೈತ್ರಮಾಸದ ಪಂಚಮಿ ಮೃಗಶಿರಾ ನಕ್ಷತ್ರದಲ್ಲಿ ಅರ್ಧರಾತ್ರಿಯ ಸಮಯಕ್ಕೆ ಮೇನಕೆಯ ಉದರದಿಂದ ಜಗದಂಬೆಯು ಶಿಶುರೂಪದಿಂದ ಪ್ರಾದುರ್ಭವಿಸಿದಳು. ಕೂಡಲೆ ಭೂಮಂಡಲದಲ್ಲಿ ಪ್ರಸನ್ನತೆಯು ಪಸರಿಸಿತು. ಆಗ ಪುಷ್ಪ ವೃಷ್ಟಿಯಾಯಿತು. ಎಲ್ಲ ದೇವತೆಗಳು ಮಂಗಲಮಯಿಯಾದ ಕಾಲಿಕಾ ಮಾತೆಯ ಸ್ತವನ ಮಾಡಿದರು. ಮೇನಕೆಯೂ ಪುತ್ರಿರೂಪ ಜಗದಂಬೆಯನ್ನು

ಬಹುಪರಿಯಾಗಿ ಸ್ತೋತ್ರ ಮಾಡಿದಳು. ಜಗದಂಬೆಯು ಅವಳಿಗೆ ದರ್ಶನ ಕೊಟ್ಟು, ನಿನ್ನ ಭಕ್ತಿಗೆ ಮೆಚ್ಚಿ ನಾನು ಪುತ್ರಿಯಾಗಿ ಜನಿಸಿರುವೆನು. ನೀವಿಬ್ಬರೂ ದಂಪತಿಗಳು ದಿವ್ಯಭಾವದಿಂದ ನನ್ನಲ್ಲಿ ಭಕ್ತಿಯನ್ನಿಡಬೇಕೆಂದು ಹೇಳಿದಳು. ಪರಕ್ಷಣದಲ್ಲಿ ದೇವಿಯು ನವಜಾತ ಶಿಶುರೂಪದಲ್ಲಿ ಪರಿವರ್ತನೆ ಹೊಂದಿದಳು. ಶಿಶುವಿಗೆ 'ಪಾರ್ವತಿ' ಎಂದು ನಾಮಕರಣವಾಯಿತು. ಗಿರಿರಾಜ ನಂದಿನಿಗೆ 'ಉಮಾ' ಎಂಬೂ ಕರೆಯತೊಡಗಿದರು.

ನಾರದಾ, ಉಮೆಯು ಪ್ರಬುದ್ಧಳಾದಳು. ಅವಳಿಗೆ ಯೋಗ್ಯ ಶಿಕ್ಷಣವೂ ದೊರೆಯಿತು. ಒಮ್ಮೆ ನೀನು ಅಲ್ಲಿಗೆ ಹೋಗಿ ಹಿಮವಂತನನ್ನೂ, ಮೇನಕೆಯನ್ನೂ, ಪುತ್ರಿಯಾದ ಪಾರ್ವತಿಯನ್ನೂ ಕಂಡೆ. ಪರ್ವತರಾಜನೂ ಮೇನಕೆಯೂ ತಮ್ಮ ಪುತ್ರಿಯ ಭವಿಷ್ಯವನ್ನು ಕೇಳಿದರು. ಸರ್ವಜ್ಞನಾದ ನೀನು ಅವರಿಗೆ ಭವಿಷ್ಯ ಹೇಳಿದೆ. ಪಾರ್ವತಿಯು ಒಬ್ಬ ಅಮಂಗಲರೂಪದ ಯೋಗಿಯನ್ನು ವರಿಸುವ ಳೆಂದು ತಿಳಿಸಿದೆ. ಆಗ ಅವರು ದುಃಖಿತರಾದರು. ಬಳಿಕ ನೀನು ಅವರಿಗೆ ಯೋಗಿಯ ಸ್ವರೂಪವನ್ನು ತಿಳಿಸಿದೆ. ಭಗವಾನ್ ರುದ್ರದೇವನೇ ಪಾರ್ವತಿಯ ಪತಿಯಾಗುವನೆಂದು ವಿವರಿಸಿ ಹೇಳಿದೆ. ತರುವಾಯ, ಆ ದಂಪತಿಗಳು ಆನಂದಮಯರಾದರು. ಜಗದಂಬೆಯು ನಿಮಗೆ ವರವನ್ನು ಕೊಟ್ಟ ಪ್ರಕಾರವಾಗಿ ಎಲ್ಲ ಬಗೆಯ ಕಾರ್ಯಗಳೂ ನಡೆಯುವವೆಂದು ನೀನು ಅವರಿಗೆ ತಿಳಿಸಿದೆ. ಶಿವನಿಗಾಗಿ ಶಿವೆಯೆಂದೂ, ಶಂಭುವು ಶಾಂಭವಿಯಾದ ಪಾರ್ವತಿಯನ್ನುಳಿದು ಬೇರೆಯವರನ್ನು ವರಿಸುವ ಅವಶ್ಯಕವೆಂದೂ ನೀನು ಆ ಶೈಲ ಪ್ರವರನಿಗೂ ಮೇನಕೆಗೂ ಹೇಳಿದೆ.

ಹಿಮಾಲಯ– ಜ್ಞಾನಿಯಾದ ನಾರದ ಮುನಿಯೆ, ಮಹಾದೇವನು ಎಲ್ಲ ಬಗೆಯ ಆಸಕ್ತಿಗಳನ್ನು ಬಿಟ್ಟು, ಸಂಯಮದಿಂದ ತಪಸ್ಸು ಮಾಡುತ್ತಲಿರುವನು. ಅವನು ದೇವತೆಗಳ ದೃಷ್ಟಿಗೆ ಸಹ ಬೀಳುವದು ಕಡಿಮೆ. ಭಗವಾನ್ ಶಂಭು ಪರಬ್ರಹ್ಮನಲ್ಲಿ ಲಕ್ಷ್ಯವಿಟ್ಟು ತದೇಕಧ್ಯಾನನಿರತನಾಗಿದ್ದ ರುದ್ರದೇವನು ವಿವಾಹವಾಗಲು ಹೇಗೆ ಸಿದ್ಧನಾಗುವನು? ಒಮ್ಮೆ ರುದ್ರದೇವನು ಸತಿದೇವಿ ಯೊಡನೆ ಮಾತನಾಡುತ್ತ ಕುಳಿತಾಗ ಮಾತಿಗೆ ಮಾತು ಹೊರಟು, ನಿನ್ನ ಹೊರತು ಇನ್ನೊಬ್ಬಳನ್ನು ವಿವಾಹವಾಗುವದಿಲ್ಲೆಂದು ದಕ್ಷ ನಂದಿನಿಗೆ ಹೇಳಿದ್ದನಂತೆ. ಹೀಗಿದ್ದ ಬಳಿಕ ಅವನು ಪಾರ್ವತಿಯ ಪಾಣಿಗ್ರಹಣ ಮಾಡುವ ಬಗೆ ಹೇಗೆ?

ಆಗ ನೀನು–ಗಿರಿರಾಜಾ, ದಕ್ಷಕುಮಾರಿ ಸತಿದೇವಿಯೇ ನಿನ್ನ ಕುಮಾರಿಯಾದ ಪಾರ್ವತಿ. ಸತಿಯೂ ಪಾರ್ವತಿಯೂ ಭಗವತಿ ಜಗದಂಬೆಯ ಪೂರ್ಣಾಂಶದಿಂದ ಜನಿಸಿದವರು. ನಿನ್ನ ಕುಮಾರಿಯು ನಿಶ್ಚಯವಾಗಿ ಪರಮೇಶ್ವರನನ್ನು ವರಿಸುವಳು, ಎಂದು ಹೇಳಿದ ಬಳಿಕ ಹಿಮವಂತನು ಸಂತುಷ್ಟನಾದನು.

ನಾರದಾ, ಒಂದು ಸಮಯದಲ್ಲಿ ರುದ್ರದೇವನು ನಂದಿ, ಭೃಂಗಿ ಮೊದಲಾದ ಶಾಂತ ಪಾರ್ಷದರೊಡನೆ ಗಂಗಾವತರಣ ತೀರ್ಥಕ್ಕೆ ಬಂದನು. ಶಾಂತರೀತಿಯಿಂದ ತಪಸ್ಸು ಮಾಡಬೇಕೆಂಬ ಹಂಬಲವು ಅವನಲ್ಲಿ ಉತ್ಪನ್ನವಾಗಿತ್ತು. ಪೂರ್ವಕಾಲದಲ್ಲಿ ಬ್ರಹ್ಮಧಾಮದಿಂದ ಗಂಗಾದೇವಿಯು ಪ್ರಥಮವಾಗಿ ಅದೇ ಸ್ಥಳದಲ್ಲಿ ಚ್ಯುತಳಾದುದರಿಂದ ಅದಕ್ಕೆ ಗಂಗಾವತರಣ (ಗಂಗೋತ್ತರಿ) ಎಂಬ ಹೆಸರು ಪ್ರಾಪ್ತವಾಗಿತ್ತು. ಪರಮಪಾವನೆಯಾದ ಗಂಗೆಯು ಜನಕೋಟಿಯ ಪಾಪಹರಣಕ್ಕಾಗಿ ಅಲ್ಲಿಂದ ಭಾರತವರ್ಷದ ಉತ್ತರಭೂಭಾಗದಲ್ಲಿ ಹರಿದಳು. ಶಿವನು ಗಂಗಾವತರಣ ತೀರ್ಥದ ಹಿಮಗಿರಿಶಿಖರ ಪ್ರದೇಶದಲ್ಲಿ ತಪಸ್ಸು ಮಾಡತೊಡಗಿದನು. ನಂದಿ, ಭೃಂಗಿ ಮೊದಲಾದ ಪ್ರಮಥರು ಶಂಭುವಿನ ಸೇವೆಯಲ್ಲಿ ನಿರತರಾಗಿದ್ದರು. ಆಗ ಪರ್ವತರಾಜನು ಔಷಧಿ ವನಸ್ಪತಿಗಳಿಂದಲೂ ಮಹಾವೃಕ್ಷಗಳಿಂದಲೂ ನಿಬಿಡವಾಗಿದ್ದ ಆ ಸ್ಥಳಕ್ಕೆ ಬಂದನು. ರುದ್ರದೇವನು ತಪಸ್ಸಿಗಾಗಿ ಗಂಗಾವತರಣಕ್ಕೆ ಬಂದ ಸಂಗತಿಯು ಗೊತ್ತಾಗಿ ಅವನ ದರ್ಶನಕ್ಕಾಗಿ ಗಿರಿರಾಜನು ಬಂದಿದ್ದನು. ಅವನು ಭಗವಾನ್ ರುದ್ರದೇವನಿಗೆ ಪ್ರಣಾಮಗಳನ್ನರ್ಪಿಸಿದನು.

ಪರ್ವತರಾಜ–ಪ್ರಭೋ, ನೀನು ಇಲ್ಲಿಗೆ ಆಗಮನ ಮಾಡಿದ್ದರಿಂದ ನನ್ನ ಭಾಗ್ಯೋದಯವಾಯಿತೆಂದು ಭಾವಿಸುವೆನು. ನಿನ್ನ ದರ್ಶನವಾದುದಕ್ಕಾಗಿ ನನ್ನ ಜನ್ಮವು ಸಫಲವಾಯಿತು. ನನ್ನನ್ನು ನಿನ್ನ ದಾಸನೆಂದು ಭಾವಿಸಿ ಶಾಂತ ಭಾವದಿಂದ ಸೇವೆಗೆ ಆಜ್ಞಾಪಿಸಬೇಕು.

ಮಹೇಶ್ವರ–ಶೈಲರಾಜಾ, ನಾನು ನಿನ್ನ ಪರ್ವತ ಶಿಖರದಲ್ಲಿ ಏಕಾಂತದಲ್ಲಿದ್ದು ತಪಸ್ಸು ಮಾಡಲು ಬಂದಿರುವೆನು. ನೀನು ಮುನಿಗಳಿಗೂ, ತಪಸ್ವಿಗಳಿಗೂ, ಯೋಗಿಗಳಿಗೂ, ದೇವತೆಗಳಿಗೂ, ಆಶ್ರಯದಾತನಿರುವೆ. ನೀನು ಮಹಾನುಭಾವನು. ನನ್ನ ತಪಸ್ಸಿಗೆ ವಿಘ್ನಗಳುಂಟಾಗದಂತೆ ನೀನು ದಕ್ಷತೆ ವಹಿಸಿದರೆ ಅದೇ ನನಗೆ ನಿನ್ನ ದೊಡ್ಡ ಸೇವೆಯೆನಿಸುವದು.

ಪರ್ವತರಾಜ–ಜಗನ್ನಾಥಾ, ನೀನು ಇಲ್ಲಿಗೆ ಆಗಮಿಸಿದ್ದು ನನ್ನ ಮಹಾ ಸೌಭಾಗ್ಯವು. ನನಗಿಂತ ಶ್ರೇಷ್ಠರು ಯಾರೂ ಇಲ್ಲವೆಂದು ನಾನು ಭಾವಿಸುವೆನು. ನಾನು ನಿನ್ನ ತಪಕ್ಕೆ ವಿಘ್ನವುಂಟಾಗದಂತೆ ನೋಡಿಕೊಳ್ಳುವನೆನು.

ಬ್ರಹ್ಮದೇವ–ನಾರದಾ, ಪರ್ವತರಾಜನು ಎರಡನೆಯಬಾರಿ ಬಂದಾಗ ಫಲಪುಷ್ಪಗಳನ್ನು ತೆಗೆದುಕೊಂಡು, ತನ್ನ ಪುತ್ರಿಯನ್ನೂ ಕರೆತಂದಿದ್ದನು.

ಪರ್ವತರಾಜ–ಇವಳು ನನ್ನ ಪುತ್ರಿಯಾದ ಪಾರ್ವತಿಯು. ಚಂದ್ರ ಶೇಖರನ ಸೇವೆಗಾಗಿ ಉತ್ಸುಕಳಾಗಿ ಬಂದಿರುವಳು. ನೀನು ಈ ಕನ್ಯೆಯಿಂದ ಸೇವೆ ತೆಗೆದುಕೊಳ್ಳಬೇಕು.

ಬ್ರಹ್ಮದೇವ–ಪರ್ವತರಾಜನು ಹೀಗೆ ಹೇಳಿದಕೂಡಲೆ ಶಿವನು ಕಣ್ಣು ಮುಚ್ಚಿ ತ್ರಿಗುಣಾತೀತನೂ, ಅವಿನಾಶಿಯೂ, ಪರಮ ತತ್ವಮಯನೂ ಆದ ನಿರ್ಗುಣ ನಿರಾಕಾರ ಭಗವಂತನಾದ ಮಹಾದೇವನ ಧ್ಯಾನದಲ್ಲಿ ತೊಡಗಿದನು. ರುದ್ರದೇವನು ತನ್ನ ವಿನಂತಿಯನ್ನು ಮಾನ್ಯ ಮಾಡುವನೋ ಇಲ್ಲವೋ ಎಂಬ ಅನುಮಾನವು ಹಿಮವಂತನಲ್ಲಿ ಉತ್ಪನ್ನವಾಯಿತು. ತಾನೂ ತನ್ನ ಪುತ್ರಿಯಾದ ಪಾರ್ವತಿಯೂ ದಿನಾಲು ನಿನ್ನ ದರ್ಶನಕ್ಕೆ ಬರುವೆವೆಂದು ತಿಳಿಸಿದನು. ಆಗ ಈಶ್ವರನು ಕಣ್ಣು ತೆರೆದನು.

ಮಹೇಶ್ವರ–ಗಿರಿರಾಜಾ, ನೀನು ಈ ಕುಮಾರಿ ಕನ್ಯೆಯನ್ನು ಮನೆಯಲ್ಲಿ ಬಿಟ್ಟು ನಿತ್ಯವೂ ಬರಬಹುದು.

ಪರ್ವತರಾಜ–ಮಹೇಶ್ವರಾ, ನನ್ನ ಪುತ್ರಿಯು ನಿನ್ನ ದರ್ಶನಕ್ಕೂ ಸೇವೆಗೂ ಬರಬಾರದೆಂದು ಹೇಳಿದ ಉದ್ದೇಶವೇನು? ಇವಳು ನಿನ್ನ ಸೇವೆಗೆ ಅಯೋಗ್ಯಳಿರುವಳೇ ಹೇಗೆ?

ಮಹೇಶ್ವರನು ನಸುನಕ್ಕನು. ತರುವಾಯ ಅವನು ಗಂಭೀರತೆಯಿಂದ ಹೇಳಿದನು.

ಮಹೇಶ್ವರ–ಶೈಲರಾಜಾ, ನಿನ್ನ ಕುಮಾರಿಯು ಸುಂದರ ಕಟಿ ಪ್ರದೇಶ ದಿಂದ ಪರಿಶೋಭಿತಳೂ, ತನ್ವಂಗಿಯೂ, ಚಂದ್ರಮುಖಿಯೂ, ಸರ್ವಲಕ್ಷಣ

ಸಂಪನ್ನಳೂ ಆಗಿರುವದರಿಂದ ಅವಳು ನನ್ನ ಸಮೀಪಕ್ಕೆ ಬರುವದೇ ಬೇಡವೆಂದು ನಾನು ನಿನಗೆ ಕಟ್ಟು ಮಾಡಿರುವೆನು. ವೇದವಿದರು ಸ್ತ್ರೀಯನ್ನು ಮಾಯಾ ರೂಪಿಣಿಯೆಂದು ಹೇಳಿರುವರು. ತರುಣಿಯರು ತಪಸ್ವಿಗಳ ತಪವನ್ನು ನಾಶ ಮಾಡುವರು. ನನ್ನಂತಹ ತಪಸ್ವಿಗೆ ಸ್ತ್ರೀಯಿಂದ ಏನು ಪ್ರಯೋಜನವಿದೆ? ನೀನು ಜ್ಞಾನಿಗಳಲ್ಲಿ ಶ್ರೇಷ್ಠನಿರುವದರಿಂದ ನಿನಗೆ ಎಲ್ಲ ವಿಷಯಗಳೂ ವಿದಿತವಾಗಿವೆ. ಸ್ತ್ರೀಯ ಸಂಗದಿಂದ ವಿಷಯ ವಾಸನೆಯು ಉತ್ಪನ್ನವಾಗುವದು ಸಹಜವಿದೆ.

ಭವತ್ಯಚಲಸತ್ಸಂಗಾದ್ ವಿಷಯೋತ್ಪತ್ತಿರಾಶು ವೈ ।
ವಿನಶ್ಯತಿ ಚ ವೈರಾಗ್ಯಂ ತತೋ ಭ್ರಶ್ಯತಿ ಸತ್ತಪಃ ॥
ಅತಸ್ತಪಸ್ವಿನಾಶೈಲ ನ ಕಾರ್ಯಾ ಸ್ತ್ರೀಷು ಸಂಗತಿಃ ।
ಮಹಾವಿಷಯಮೂಲಂ ಸಾ ಜ್ಞಾನವೈರಾಗ್ಯನಾಶಿನೀ ॥

(ಶಿ.ಪು.ರು.ಸಂ.ಪಾ.ಖಂ. ೧೨೧, ೩೧–೩೨)

ಭವಾನಿ–ಯೋಗಿರಾಜಾ, ನೀನು ಮಹಾನ್ ತಪಸ್ವಿಯಾಗಿದ್ದು ಗಿರಿ ರಾಜನಿಗೆ ಇಂತಹ ಮಾತುಗಳನ್ನು ಹೇಳಬೇಕೆ? ನೀನು ಜ್ಞಾನವಿಶಾರದನಿರುವೆ. ತಪಃಶಕ್ತಿಯಿಂದ ಸಂಪನ್ನನಿದ್ದು ದೊಡ್ಡ ತಪವನ್ನು ಮಾಡುತ್ತಿರುವೆ. ಶಕ್ತಿಯ ಪ್ರಭಾವದಿಂದಲೇ ನೀನು ಮಹಾತಪೋಧನನಾಗಿರುವೆ. ಎಲ್ಲ ಕರ್ಮಗಳನ್ನು ಮಾಡಿಸುವ ಶಕ್ತಿಯೇ ಪ್ರಕೃತಿಯು. ಪ್ರಕೃತಿಯಿಂದ ಸೃಷ್ಟಿ, ಪಾಲನ, ಸಂಹಾರಗಳು ನಡೆಯುವವು. ಶಿವ ಭಗವನ್, ನೀನು ಯಾರು? ಸೂಕ್ಷ್ಮ ಪ್ರಕೃತಿಯು ಯಾವುದು? ಇದನ್ನು ನೀನು ಪರಿಶೀಲಿಸಬೇಕು. ಪ್ರಕೃತಿಯ ಅಭಾವದಿಂದ ಲಿಂಗರೂಪಿಯಾದ ಪರಮೇಶ್ವರನು ಹೇಗಾಗುವನು? ನೀನು ಅರ್ಚನೀಯನೂ, ಪೂಜನೀಯನೂ, ವಂದನೀಯನೂ, ಚಿಂತನೀಯನೂ ಆಗುವದಕ್ಕೆ ಪ್ರಕೃತಿಯೇ ಕಾರಣಗಳು. ನನ್ನ ಮಾತಿನ ಬಗ್ಗೆ ಪರ್ಯಾಲೋಚಿಸಿ ನೀನು ಹೇಳತಕ್ಕುದನ್ನು ಹೇಳಬಹುದು.

ಮಹೇಶ್ವರ–ಪಾರ್ವತಿ, ಗಿರಿರಾಜಕುಮಾರಿ, ನಾನು ಉತ್ಕೃಷ್ಟ ತಪಸ್ಸಿನಿಂದ ಪ್ರಕೃತಿಯನ್ನು ತತ್ವತಃ ನಾಶ ಮಾಡಿ, ಪ್ರಕೃತಿರಹಿತ ಶಂಭುವಿನ ರೂಪದಿಂದ ಸ್ಥಿತನಾಗುವೆನು. ಆದುದರಿಂದ ಸತ್ಪುರುಷರು ಪ್ರಕೃತಿಯನ್ನು ಸಂಗ್ರಹಿಸಬಾರದು; ಅವರು ಲೋಕಾಚಾರದಿಂದ ದೂರವಾಗಿ ನಿರ್ವಿಕಾರರಾಗಿರಬೇಕು.

ಭವಾನಿ–ಕಲ್ಯಾಣಕಾರಿ ಪ್ರಭುವೇ, ಯೋಗೇಶ್ವರಾ, ನೀನು ಯಾವ ಮಾತು ಹೇಳಿರುವೆಯೋ ಆ ವಾಣಿಯು ಪ್ರಕೃತಿಯಲ್ಲವೆ? ನೀನು ಅದರಿಂದ ವ್ಯತಿರಿಕ್ತನಾಗಲಿಲ್ಲವೇಕೆ? ಎಲ್ಲ ವಿಷಯಗಳನ್ನು ತಾತ್ವಿಕ ದೃಷ್ಟಿಯಿಂದ ವಿಚಾರಿಸಿ ಯಥಾರ್ಥವಾದುದನ್ನೇ ಹೇಳಬೇಕು. ಸರ್ವವು ಪ್ರಕೃತಿಯ ಬಂಧನಕ್ಕೊಳಗಾಗಿರುವದು. ಆದುದರಿಂದ ಅದನ್ನು ಬಿಟ್ಟು ನೀನು ಏನನ್ನೂ ಮಾತಾಡಲಾರೆ, ಏನನ್ನೂ ಮಾಡಲಾರೆ. ಎಲ್ಲ ಕಾರ್ಯಗಳೂ ಪ್ರಕೃತಿಯಿಂದಲೇ ಮಾಡಲ್ಪಡುವವು. ಶಂಭುವೇ, ನೀನು ಪ್ರಕೃತಿಯ ವ್ಯತಿರಿಕ್ತನಾಗಿದ್ದರೆ ಈ ಸಮಯದಲ್ಲಿ ಹಿಮವಾನ್ ಪರ್ವತಕ್ಕೆ ಬಂದು ತಪಶ್ಚರ್ಯವನ್ನೇಕೆ ಮಾಡುವೆ? ಪ್ರಕೃತಿಯು ನಿನ್ನನ್ನು ನುಂಗಿ ಬಿಟ್ಟಿರುವಳು. ಆದುದರಿಂದ ನೀನು ನಿನ್ನ ಸ್ವರೂಪವನ್ನೇ ತಿಳಿಯದಾಗಿರುವೆ. ಯೋಗೀಶ್ವರಾ, ನಾನು ಪ್ರಕೃತಿಯು, ನೀನು ಪುರುಷನು. ಈ ಸಂಗತಿಯು ಸತ್ಯವಾಗಿದೆ. ಇದರಲ್ಲಿ ಏನೂ ಸಂದೇಹವಿಲ್ಲ. ನನ್ನ ಅನುಗ್ರಹದಿಂದಲೇ ನೀನು ಸಗುಣ ಮತ್ತು ಸಾಕಾರವಾಗಿರುವೆ, ನಾನಿಲ್ಲದಿದ್ದರೆ ನೀನು ಏನನ್ನೂ ಮಾಡಲಾರೆ. ನೀನು ಜಿತೇಂದ್ರಿಯನಾಗಿದ್ದರೂ, ಪ್ರಕೃತಿಯ ಆಧೀನವಾಗಿ ನಾನಾಪ್ರಕಾರದ ಕರ್ಮಗಳನ್ನು ಮಾಡುತ್ತಿರುವೆ. ಹೀಗಿದ್ದರೆ ನೀನು ನಿರ್ವಿಕಾರನು ಹೇಗಾಗುವೆ? ನೀನು ನನ್ನಿಂದ ಲಿಪ್ತನಾಗದೆ ಹೇಗೆ ಉಳಿಯುವೆ? ಶಂಕರಾ, ನೀನು ಪ್ರಕೃತಿ ಯುಕ್ತನಾಗಿಂಯೇ ಇರುವೆ. ನಿನ್ನ ವಚನವು ಸತ್ಯವಾಗಿದ್ದರೆ ನನ್ನ ಸಮೀಪದಲ್ಲಿರುವುದಕ್ಕೆ ನೀನು ಈ ಪರಿಯಾಗಿ ಅಂಜುವದೇಕೆ?

ಶಿವ–ಸುಂದರ ಭಾಷಣ ಮಾಡುವ ಗಿರಿಜೆ, ನೀನು ಸಾಂಖ್ಯಮತಾನುಸಾರವಾಗಿ ಇಂತಹ ಮಾತುಗಳನ್ನು ಹೇಳತೊಡಗಿರುವೆ. ನೀನು ಪ್ರತಿದಿನವೂ ನನ್ನ ಸೇವೆ ಮಾಡು. ಆದರೆ ಆ ಸೇವೆಯು ಶಾಸ್ತ್ರ ನಿಷಿದ್ಧವಾಗಿರಬಾರದು.

ಗಿರಿಜೆಯು ಶಿವನ ಮಾತಿಗೆ ತಲೆದೂಗಿದಳು. ಪರ್ವತರಾಜನು ಉಪಸ್ಥಿತನಿದ್ದರೂ, ಇರದೇ ಹೋದರೂ ಅವಳು ತನ್ನ ಸಖಿಯರಾದ ಜಯೆ ವಿಜಯೆರೊಡನೆ ಭಗವಾನ್ ಶಂಕರನ ಸೇವೆಯಲ್ಲಿ ನಿರತಳಾದಳು. ಅವಳು ನಿತ್ಯವೂ ಬರುತ್ತ ಹೋಗುತ್ತಲಿದ್ದಳು. ಶಂಕರನ ಪಾದ ತೊಳೆದು ನಿತ್ಯವೂ ಅವನ ಚರಣ ತೀರ್ಥವನ್ನು ಪಾನ ಮಾಡುತ್ತಿದ್ದಳು.

# ಪಾರ್ವತಿಯ ತಪಶ್ಚರ್ಯ

ಸೂತಪುರಾಣಿಕ–ಶೌನಕಾದಿಮಹರ್ಷಿಗಳೆ, ತಾರಕಾಸುರನೆಂಬ ರಾಕ್ಷಸನು ಬ್ರಹ್ಮದೇವನಿಂದ ವರವನ್ನು ಪಡೆದು ಮೂರೂ ಲೋಕಗಳನ್ನು ಆಕ್ರಮಿಸಿ ತಾನೇ ಇಂದ್ರನಾದನು. ಎಲ್ಲ ಕಡೆಯಿಂದಲೂ ದೇವತೆಗಳನ್ನು ಓಡಿಸಿ ಅವರ ಸ್ಥಳದಲ್ಲಿ ದೈತ್ಯರನ್ನು ನಿಯಮಿಸಿದನು. ಆಗ ದೇವೇಂದ್ರನು ಬ್ರಹ್ಮದೇವನ ಬಳಿಗೆ ಬಂದು ತನ್ನ ಅವಸ್ಥೆಯನ್ನು ತಿಳಿಸಿದನು. ಕೂಡಲೆ ಬ್ರಹ್ಮನು ತಾರಕಾಸುರನ ಬಳಿಗೆ ಬಂದನು.

ಬ್ರಹ್ಮದೇವ–ಈ ಸ್ವರ್ಗವು ನಮ್ಮ ತೇಜದ ಸಾರತತ್ವವಾಗಿದೆ. ನಾನು ನಿನಗೆ ಕೊಟ್ಟ ವರಕ್ಕಿಂತಲೂ ಹೆಚ್ಚಿನ ಲಾಭವನ್ನು ಹೊಂದಿರುವೆ. ನಿನಗೆ ನಾನು ಸಣ್ಣವರ ವನ್ನು ಕೊಟ್ಟಿದ್ದೆನು. ಆದರೆ ನೀನು ನನ್ನ ವಿಕ್ರಮದಿಂದ ದೇವರಾಜ್ಯವನ್ನೇ ಕಬಳಿಸಿದೆ. ನಿನಗೆ ನಾನು ಸ್ವರ್ಗರಾಜ್ಯವನ್ನು ಕೊಟ್ಟಿರಲಿಲ್ಲ. ನೀನು ಸ್ವರ್ಗವನ್ನು ತ್ಯಾಗಮಾಡಿ ಭೂಲೋಕಕ್ಕೆ ಹೋಗು.

ತಾರಕಾಸುರನು ಭೂಲೋಕಕ್ಕೆ ಬಂದು, ಶೋಣಿತಪುರವನ್ನು ರಾಜಧಾನಿ ಯಾಗಿ ಮಾಡಿಕೊಂಡು ಭೂಲೋಕವನ್ನಾಳತೊಡಗಿದನು. ದೇವೇಂದ್ರನು ತನ್ನ ಪರಿವಾರದೊಡನೆ ಸ್ವರ್ಗರಾಜ್ಯಕ್ಕೆ ತೆರಳಿದನು.

ತ್ರಿಮೂರ್ತಿಗಳಿಗೂ ಅಜೇಯನಾದ ತಾರಕಾಸುರನನ್ನು ನಾಶಮಾಡದಿ ದ್ದರೆ ಜಗತ್ತಿನಲ್ಲಿ ಸುಖ, ಶಾಂತಿಗಳು ಉಳಿಯುವದಿಲ್ಲವೆಂಬುದನ್ನು ಇಂದ್ರನು ಅರಿತಿದ್ದನು. ತಪಸ್ಸು ಮಾಡುತ್ತಿದ್ದ ಮಹೇಶ್ವರನೊಡನೆ ಭಗವತಿ ಗಿರಿಜಾದೇವಿಯ ವಿವಾಹ ಮಾಡುವದು ಅತ್ಯವಶ್ಯವಾಗಿತ್ತು. ಪರಮೇಶ್ವರ–ಪಾರ್ವತಿಯರಿಂದ ಜನಿಸಿದ ಕುಮಾರನಿಂದಲೇ ತಾರಕಾಸುರನ ಸಂಹಾರವಾಗಬೇಕಾಗಿತ್ತು. ಯೋಗೀಶ್ವರನಾದ ಮಹಾದೇವನ ತಪೋಭಂಗವಾಗದೆ ಈ ಕಾರ್ಯವು ಸಿದ್ಧಿಸುವಂತಿರಲಿಲ್ಲ. ಆಗ ದೇವೇಂದ್ರನು ಮಹೇಶ್ವರನನ್ನು ತಪಸ್ಸಿನಿಂದ ನಿವೃತ್ತ ಗೊಳಿಸಲು ಕಾಮದೇವನ ಸಹಾಯ ಹೊಂದಬೇಕೆಂದು ಯೋಚಿಸಿ ಅವನನ್ನು ಸ್ಮರಿಸಿದನು. ತತ್ಕಾಲದಲ್ಲಿಯೆ ಕಾಮದೇವನು ದೇವೇಂದ್ರನ ಬಳಿಗೆ ಬಂದನು.

ದೇವೇಂದ್ರ–ಮಿತ್ರಾ, ಕಾಲವಶದಿಂದ ನನಗೆ ಗಂಡಾಂತರವು ಪ್ರಾಪ್ತ ವಾಗಿದೆ. ನನ್ನ ದುಃಖನಿವಾರಣೆಯ ಕಾರ್ಯವು ನಿನ್ನ ಹೊರತು ಇತರರಿಂದ ಸಾಧ್ಯವಿಲ್ಲ. ದಾನಿಯ ಪರೀಕ್ಷೆಯು ದುರ್ಭಿಕ್ಷೆಯಲ್ಲಿ, ಶೂರ, ವೀರನ ಪರೀಕ್ಷೆಯು

ರಣಭೂಮಿಯಲ್ಲಿ, ಮಿತ್ರನ ಪರೀಕ್ಷೆಯು ಆಪತ್ಕಾಲದಲ್ಲಿ, ಸ್ತ್ರೀಯ ಪರೀಕ್ಷೆಯು ಪತಿಯು ಅಸಮರ್ಥನಾದ ಕಾಲದಲ್ಲಿ ಆಗುವದು.

ದಾತುಃ ಪರೀಕ್ಷಾ ದುರ್ಭಿಕ್ಷೇ ರಣೇಶೂರಸ್ಯ ಜಾಯತೇ ।
ಆಪತ್ಕಾಲೇಷು ಮಿತ್ರಸ್ಯಾಶಕ್ತೌ ಸ್ತ್ರೀಣಾಂ ಕುಲಸ್ಯ ಹಿ ॥
ವಿನತೇ ಸಂಕಟೇ ಪ್ರಾಪ್ತೇಽವಿತಥಸ್ಯ ಪರೋಕ್ಷತಃ ।
ಸುಸ್ನೇಹಸ್ಯ ತಥಾ ತಾತ ನಾನ್ಯಥಾ ಸತ್ಯಮೀರಿತಂ ॥

(ಶಿ. ಪು. ರು. ಸಂ. ಪಾ. ೫೦. ೧೭ ೧೨–೧೩)

ಕಾಮ–ದೇವರಾಜಾ, ಲೋಕದಲ್ಲಿ ಯಾವನು ಉಪಕಾರಿಯಾದ ಮಿತ್ರನಿರುವನು? ಯಾವನು ಕೃತ್ರಿಮನು ಇರುವನು? ಈ ಸಂಗತಿಯನ್ನು ನೋಡಬೇಕಾದದ್ದೇ ಹೊರತು ಹೇಳುವದಕ್ಕಲ್ಲ. ಆದರೆ ಮಿತ್ರಾ, ನಾನು ಶಿವನನ್ನು ತಪಸ್ಸಿನಿಂದ ಭ್ರಷ್ಟಗೊಳಿಸುವೆನು. ನೀನು ನನ್ನಲ್ಲಿ ವಿಶ್ವಾಸವಿಡಬೇಕು.

ದೇವೇಂದ್ರ–ಮನೋಭವಾ, ತಾರಕನೆಂಬ ರಾಕ್ಷಸನು ಅತ್ಯಂತ ಬಲಾಢ್ಯನಿರುವನು. ಅವನನ್ನು ಪರಾಭವಗೊಳಿಸಲು ಬ್ರಹ್ಮ ವಿಷ್ಣು–ಮಹೇಶ್ವರರಿಗೆ ಅಸಾಧ್ಯವಾಗಿದೆ. ಭಗವಾನ್ ಶಂಭುವಿನ ವೀರ್ಯದಿಂದ ಜನಿಸಿದ ಕುಮಾರನಿಂದಲೇ ತಾರಕನ ಮರಣವಾಗುವದೆಂದು ತಿಳಿದಿರುವದು. ಶಂಭುವನ್ನು ಸಮಾಧಿಯಿಂದ ಎಚ್ಚರಿಸಿ, ಪಾರ್ವತಿಯ ಪಾಣಿಗ್ರಹಣಕ್ಕೆ ಸಿದ್ಧನಾಗುವಂತೆ ಮಾಡಬೇಕು.

ಕಾಮ–ಇದಾವ ದೊಡ್ಡ ಮಾತು?

ಕಾಮದೇವನು ದೇವೇಂದ್ರನಿಗೆ ಆಢ್ಯತೆಯಿಂದ ಹೇಳಿ, ಪತ್ನಿಯಾದ ರತಿಯನ್ನು, ಮಿತ್ರನಾದ ವಸಂತನನ್ನು ಜೊತೆಗೆ ಕರೆದುಕೊಂಡು ಹಿಮಾಚಲಕ್ಕೆ ತೆರಳಿದನು. ಅವನು ಶಿವನ ತಪೋಭೂಮಿಯ ನಿಕಟವರ್ತಿಯಾದ ಸ್ಥಳದಲ್ಲಿ ಸ್ಥಿತನಾಗಿ ಪಂಚಶರಗಳ ಪ್ರಹಾರ ಮಾಡತೊಡಗಿದನು. ಪ್ರಿಯ ಪತ್ನಿಯಾದ ರತಿದೇವಿಯೂ ಅವನ ಬಳಿಯಲ್ಲಿಯೇ ಇದ್ದಳು. ಮನ್ಮಥನ ಪಂಚ ಬಾಣಗಳ ಆಘಾತದ ಪರಿಣಾಮದಿಂದ ಭಗವಾನ್ ರುದ್ರದೇವನ ಮನದಲ್ಲಿ ವಿಕಾರವುಂಟಾಯಿತು. ಅವನ ಮನವು ಪಾರ್ವತಿಯ ಕಡೆಗೆ ಆಕರ್ಷಿತವಾಗತೊಡಗಿತು. ತನ್ನ ಮನದಲ್ಲಿ ಕಾಮವಿಕಾರವು ಉತ್ಪನ್ನವಾಗಲು ಕಾರಣವೇನಿರಬಹುದೆಂದು

ಅವನು ಚಿಂತಿಸತೊಡಗಿದನು. ಶಿವನ ದೃಷ್ಟಿಯು ವಾಮಭಾಗದಲ್ಲಿ ಪುಷ್ಪ ಬಾಣಗಳನ್ನು ಪ್ರಹರಿಸುತ್ತಿರುವ ಮದನನ ಮೇಲೆ ಬಿದ್ದಿತು. ಅವನನ್ನು ಕಂಡು ರುದ್ರದೇವನು ಕ್ರುದ್ಧನಾದನು. ತನ್ನ ಬಾಣಗಳ ಪರಿಣಾಮವೇನೂ ಆಗದ್ದರಿಂದ ಕಾಮದೇವನು ಭಯಭೀತನಾದನು. ಕಾಮನ ದೈನ್ಯಾವಸ್ಥೆಯನ್ನು ನೋಡಿ ಇಂದ್ರಾದಿದೇವತೆಗಳು ಶಂಭುವಿಗೆ ಪ್ರಣಾಮ ಮಾಡಿ ಸ್ತುತಿಸತೊಡಗಿದರು. ಕಾಮದೇವನ ಕೃತ್ಯಕ್ಕಾಗಿ ಶಿವನು ಅತ್ಯಂತ ಕ್ರುದ್ಧನಾಗಿದ್ದನು. ಅವನು ಲಲಾಟ ದಲ್ಲಿದ್ದ ತೃತೀಯ ನೇತ್ರವನ್ನು ತೆರೆದನು. ಕೂಡಲೆ ಅದರಿಂದ ತ್ರಿಲೋಕವನ್ನೇ ದಗ್ಧಗೊಳಿಸುವ ಭಯಂಕರ ಜ್ವಾಲೆಯು ಪ್ರಕಟವಾಗಿ ಕಾಮದೇವನನ್ನು ಭಸ್ಮ ಮಾಡಿಬಿಟ್ಟಿತು! ರತಿಯು ಅಚೇತಳಾಗಿ ಭೂಮಿಗೆ ಬಿದ್ದಳು. ಮೂರ್ಛೆ ತಿಳಿದ ಬಳಿಕ ಅವಳು ಹಾಡಿಕೊಂಡು ಬೋರಾಡಿ ಅಳಹತ್ತಿದಳು. ದೇವತೆಗಳು ಶಿವನನ್ನು ಸ್ತುತಿಸುತ್ತ ಹೇಳಿದರು.

ದೇವತೆಗಳು– ಶರಣಾಗತ ವತ್ಸಲ, ಮಹೇಶ್ವರಾ, ಜಗತ್ಕಲ್ಯಾಣಾರ್ಥವಾಗಿ ನಾವೇ ಕಾಮನನ್ನು ಕಳುಹಿಸಿದೆವು. ನೀನು ಸರ್ವಜ್ಞನಿರುವದರಿಂದ ನಮ್ಮ ಮಾತಿನ ಅರ್ಥವಾಗಿರುವದು. ಮದನನು ಸ್ವಾರ್ಥಕ್ಕಾಗಿ ಹೋರಾಡಲಿಲ್ಲ. ನೀನು ಈ ದೀನ ರತಿದೇವಿಯ ದುಃಖವನ್ನು ಶಮನ ಮಾಡಬೇಕು. ಕಾಮನು ಅನಂಗನಾಗಿ ಇರುವನು. ದ್ವಾಪರದಲ್ಲಿ ಶ್ರೀಕೃಷ್ಣನ ಜ್ಯೇಷ್ಠ ಪತ್ನಿಯಾದ ರುಕ್ಮಿಣಿಯ ಉದರ ದಿಂದ ಜನಿಸುವನು. ಅವನ ಹೆಸರು ಪ್ರದ್ಯುಮ್ನನೆಂದಾಗುವದು. ಶಂಬರಾ ಸುರನಲ್ಲಿದ್ದ ರತಿದೇವಿಯು ಪ್ರದ್ಯುಮ್ನನನ್ನು ವಿವಾಹವಾಗುವಳು.

ಕಾಮದಹನವಾದ ಬಳಿಕ ಶಿವನು ಅದೃಶ್ಯನಾದುದರಿಂದ ಗಿರಿಜೆಯು ಸಖಿಯರಾದ ಜಯೆ– ವಿಜಯೆರೊಡನೆ ಮನೆಗೆ ಬಂದಳು. ಅವಳು ತಾಯಿಯ ಬಳಿಗೆ ಬಂದು ಗಂಗಾವತರಣ ತೀರ್ಥದಲ್ಲಿ ನಡೆದ ಸಂಗತಿಯನ್ನು ನಿವೇದಿಸಿದಳು. ಅವಳು ಯಾವಾಗಲೂ ಶಿವಧ್ಯಾನದಲ್ಲಿ ಇರತೊಡಗಿದಳು. ಜಯೆ– ವಿಜಯೆರು ಗೆಳತಿಯ ಮನದ ಅಸ್ವಾಸ್ಥ್ಯವನ್ನು ಕಂಡುಹಿಡಿದರು. ಮೇನಕಾದೇವಿಯೂ ಹಿಮವಂತನೂ ಪುತ್ರಿಯ ಉದ್ವಿಗ್ನತೆಯ ನಿವಾರಣೆಗಾಗಿ ಅನೇಕ ಬಗೆಯ ಉಪದೇಶ ಮಾಡತೊಡಗಿದರು. ತರುವಾಯ ದೇವತೆಗಳ ಪ್ರೇರಣೆಯ ಮೇರೆಗೆ ನಾರದಮುನಿಯು ಗಿರಿಜಾದೇವಿಯ ನಿವಾಸಕ್ಕೆ ಬಂದನು. ಅವನು ಪಾರ್ವತಿಯ ಉದ್ವಿಗ್ನತೆಯನ್ನು ದೂರ ಮಾಡಲು ಉಪದೇಶ ಮಾಡಿದನು.

ನಾರದ–ದೇವಿ, ನೀನು ಶೋಕಾಕುಲಳಾಗಬೇಡ. ಭಗವಾನ್ ಮಹೇಶ್ವರನು ಭಕ್ತವತ್ಸಲನಿರುವನು. ರುದ್ರದೇವನು ನಿನ್ನನ್ನು ಸಹಧರ್ಮಿಣಿಯು ನ್ನಾಗಿ ಮಾಡಿಕೊಳ್ಳುವನು. ನೀನು ಅವನನ್ನು ಸೇವಿಸಿ ಪ್ರೀತಿಪಾತ್ರಳಾಗಿರುವೆ. ಇನ್ನು ಮೇಲಾದರೂ ನೀನು ಅವನನ್ನು ಕುರಿತು ತಪಸ್ಸು ಮಾಡು.

ಪಾರ್ವತಿ–ದೇವರ್ಷಿಯೆ, ನೀನು ಜಗತ್ಕಲ್ಯಾಣಕ್ಕಾಗಿಯೇ ಸಾಹಸ ಮಾಡುತ್ತಿರುವೆ. ನಾನು ಮಹಾದೇವನ ಧ್ಯಾನದಲ್ಲಿ ಮಗ್ನಳಾಗುವೆನು.

ನಾರದ–ದೇವಿ, ನೀನು ಶಿವಪಂಚಾಕ್ಷರಿ ಮಂತ್ರವನ್ನು ಜಪಿಸುತ್ತ ತಪಾಚರಣೆ ಮಾಡುತ್ತಿರು. ಭಗವಾನ್ ಮಹೇಶ್ವರನು ತಾನಾಗಿ ನಿನ್ನ ಬಳಿಗೆ ಬರುವನು. ಅವನು ನಿನ್ನ ಪಾಣಿಗ್ರಹಣ ಮಾಡುವದು ನಿಶ್ಚಯವು. ಭವಾನಿ, ಕಾಮದಹನವಾದುದಕ್ಕಾಗಿ ಯಾರೂ ವ್ಯಸನ ಪಡಲಾಗದು. ಕಾಮನು ಪರೋಪಕಾರಕ್ಕಾಗಿ ಹುತಾತ್ಮನಾದನು. ಅವನ ಪ್ರೇರಣೆಯಿಂದಲೇ ಶಿವನ ಸಮಾಧಿ ಭಂಗವಾಯಿತು. ಅವನು ಈಗ ನಿನ್ನಲ್ಲಿ ಅನುರಾಗವುಳ್ಳವನಾಗಿದ್ದಾನೆ. ನೀನು ತಪಸ್ಸು ಮಾಡಿ ಶಿವನನ್ನು ಮೆಚ್ಚಿಸು. ನಿನ್ನ ಸ್ವಾಮಿಯಾದ ಮಹೇಶ್ವರನು ವಿರಕ್ತನೂ ಮಹಾಯೋಗಿಯೂ ಆಗಿರುವನು. ಅವನು ಕಾಮದೇವನನ್ನು ಭಸ್ಮ ಮಾಡಿ ನಿಮ್ಮೆಲ್ಲರನ್ನೂ ಸುರಕ್ಷಿತವಾಗಿ ಬಿಟ್ಟು ಬಿಟ್ಟಿದ್ದಾನೆ. ಆ ಭಗವಾನನು ಭಕ್ತ ವತ್ಸಲನು. ನೀನು ತಪಾಚರಣೆಗೆ ತೊಡಗು. ನಿನ್ನನ್ನು ಅವನು ಸಹಧರ್ಮಿಣಿಯು ನ್ನಾಗಿ ಸ್ವೀಕರಿಸುವನು. ನೀನು 'ನಮಃ ಶಿವಾಯ' ಪಂಚಾಕ್ಷರ ಶಿವಮಂತ್ರವನ್ನು ಶ್ರದ್ಧೆಯಿಂದ ಜಪಿಸು.

ನಾರದನು ಹೀಗೆ ಉಪದೇಶ ಮಾಡಿ ಹೊರಟುಹೋದ ಬಳಿಕ ಪಾರ್ವತಿಯು ತಂದೆ–ತಾಯಿಗಳ ಬಳಿಗೆ ಬಂದು ತಪಾಚರಣೆಗಾಗಿ ಅನುಮತಿ ದೊರಕಿಸಿಕೊಂಡಳು. ಅವಳು ಕಾಮದಹನವಾದ ಗಂಗಾವತರಣ ತೀರ್ಥದ ಬಳಿಯಲ್ಲಿದ್ದ ಶೃಂಗಿತೀರ್ಥ ಸ್ಥಾನದಲ್ಲಿ ತಪಶ್ಚರ್ಯ ಮಾಡತೊಡಗಿದಳು. ಅವಳು ಮೊದಲನೆಯ ವರ್ಷ ಫಲ, ಮೂಲಗಳನ್ನು ಭಕ್ಷಿಸಿ ತಪಸ್ಸು ಮಾಡಿದಳು. ಎರಡನೆಯ ವರ್ಷ ಪರ್ಣಾಹಾರಿಯಾಗಿ ಕಳೆದಳು. ಮೂರನೆಯ ವರ್ಷ ನಿರಾಹಾರಿಯಾಗಿ ಪಂಚಾಕ್ಷರಿಮಂತ್ರ ಜಪವನ್ನು ಅತ್ಯಂತ ನಿಷ್ಠೆಯಿಂದ ಮಾಡಿದಳು. ಪಾರ್ವತಿ ದೇವಿಯ ಆಶ್ರಮದಲ್ಲಿಯ ಪರಸ್ಪರ ಸ್ವಾಭಾವಿಕ ವೈರವುಳ್ಳ ಪ್ರಾಣಿಗಳು ಸಖ್ಯದಿಂದ ಇರತೊಡಗಿದವು. ಬೆಕ್ಕು ಇಲಿಗಳು, ಹಾವು ಮುಂಗುಲಿ

ಗಳು, ಚಿಗರೆ ಹುಲಿಗಳು ಮೊದಲಾದ ಪ್ರಾಣಿಗಳು ದೇವಿಯ ತಪೋಮಹಿಮೆಯಿಂದ ಪರಸ್ಪರ ವೈರವನ್ನು ತ್ಯಜಿಸಿ ಸ್ನೇಹದಿಂದ ಬಾಳತೊಡಗಿದ್ದವು. ಗಿರಿಜೆಯೂ ಅವಳ ಸಖಿಯರೂ ತಪೋವನದಲ್ಲಿ ಅನೇಕ ಫಲ-ಪುಷ್ಪ ವೃಕ್ಷಗಳನ್ನು ಬೆಳೆಸಿದ್ದರು-ಅವರು ತಪೋವನದಲ್ಲಿಯ ಫಲಗಳನ್ನು ಅತಿಥಿಗಳಿಗೆ ಕೊಟ್ಟು ಸತ್ಕರಿಸುತ್ತಿದ್ದರು.

ಹಿಮವಂತನ ಪುತ್ರಿಯಾದ ಪಾರ್ವತಿಯು ರುದ್ರದೇವನ ಧ್ಯಾನಮಾಡುತ್ತ ಬಹುಕಾಲದವರೆಗೆ ತಪಾಚರಣೆ ಸಾಗಿಸಿದಳು. ಭಗವಾನ್ ಶಂಕರನನ್ನು ತನ್ನ ತಪೋಬಲದಿಂದ ಇಲ್ಲಿಗೆ ಬರಮಾಡಿಕೊಳ್ಳುವೆನೆಂದು ತಂದೆಯಾದ ಹಿಮಾಚಲನಿಗೂ, ತಾಯಿಯಾದ ಮೇನಕೆಗೂ, ಬಂಧುಗಳಾದ ಮೈನಾಕನಿಗೂ, ಮಂದರಾಚಲನಿಗೂ ಅವಳು ಹೇಳುತ್ತಿದ್ದಳು. ಚತುರ ಚಾಲಾಕ ಪರ್ವತ ರಾಜನೂ, ಗಿರಿರಾಜ ಸುಮೇರುವೂ ಭವಾನಿಯ ಉಗ್ರ ತಪಾಚರಣೆಯನ್ನು ಕಂಡು ಮೇಲಿಂದ ಮೇಲೆ ಪ್ರಶಂಸೆ ಮಾಡುತ್ತಿದ್ದರು.

ಪಾರ್ವತಿಯ ತಪಸ್ಸಿನ ಜ್ವಾಲೆಯ ಬಿಸಿಯು ಸ್ವರ್ಗಲೋಕಕ್ಕೆ ತಲುಪಿತು. ಆಗ ದೇವೇಂದ್ರನು ದೇವಗುರು ಬೃಹಸ್ಪತಿ ಮೊದಲಾದವರನ್ನು ಸಂಗಡ ಕರೆದುಕೊಂಡು ಬ್ರಹ್ಮಲೋಕಕ್ಕೆ ಬಂದನು. ಬ್ರಹ್ಮನು ಎಲ್ಲ ದೇವತೆಗಳೊಂದಿಗೆ ಕ್ಷೀರಸಾಗರ ಶಾಯಿಯಾದ ಭಗವಾನ್ ಶ್ರೀವಿಷ್ಣುವಿನ ಬಳಿಗೆ ಬಂದನು. ಶಾಂಭವಿಯ ತಪೋಜ್ವಾಲೆಯು ಮೂಲೋಕವನ್ನು ವ್ಯಾಪಿಸಿರುವದರಿಂದ ಶಿವನನ್ನು ಎಚ್ಚರಿಸಿ ಪಾರ್ವತಿಯ ಬಳಿಗೆ ಕಳುಹಿಸಬೇಕೆಂದು ಬ್ರಹ್ಮನು ವಿಷ್ಣುವಿಗೆ ಹೇಳಿದನು. ಕಾಮದೇವನನ್ನು ಕ್ಷಣದಲ್ಲಿ ದಗ್ಧಗೊಳಿಸಿದ ಶಿವನ ಬಳಿಗೆ ಹೋಗಲು ತಮ್ಮ ಅಸಮರ್ಥತೆಯನ್ನು ವ್ಯಕ್ತಪಡಿಸಿ, ಈ ಕಾರ್ಯದಲ್ಲಿ ಸಹಾಯ ಮಾಡಬೇಕೆಂದು ಎಲ್ಲ ದೇವತೆಗಳು ಶ್ರೀಹರಿಯನ್ನು ಬೇಡಿಕೊಂಡರು.

ಎಲ್ಲ ದೇವತೆಗಳನ್ನೊಳಗೊಂಡು ಭಗವಾನ್ ಶ್ರೀಮನ್ನಾರಾಯಣನು ಪಿನಾಕಪಾಣಿ ಶಿವನ ದರ್ಶನಕ್ಕಾಗಿ ಕ್ಷೀರಸಾಗರದಿಂದ ಹೊರಟನು. ಮಾರ್ಗದಲ್ಲಿ ಶೃಂಗಿತೀರ್ಥದ ಬಳಿ ತಪಶ್ಚರ್ಯ ಮಾಡುತ್ತಿದ್ದ ಗಿರಿರಾಜ ನಂದಿನಿ ಪಾರ್ವತಿಯ ಆಶ್ರಮಕ್ಕೆ ಬಂದರು. ಅವರು ಸಮಾಧಿ ಮಗ್ನಳಾಗಿದ್ದ ತೇಜೋಮಯಿಯಾದ ಜಗದಂಬೆಗೆ ಪ್ರಣಾಮಗಳನ್ನರ್ಪಿಸಿ, ವೃಷಭಧ್ವಜ ಮಹೇಶ್ವರನು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಬಂದು ಅವನಿಗೆ ವಂದಿಸಿದರು. ಶಿವನು ಪ್ರಸನ್ನ ಮುದ್ರೆ

ಯಲ್ಲಿದ್ದದ್ದು ನೋಡಿ ಎಲ್ಲರೂ ಸಂತುಷ್ಟರಾದರು. ಎಲ್ಲ ದೇವತೆಗಳೂ ಅವನನ್ನು ಸ್ತೋತ್ರ ಮಾಡುತ್ತ ನಿಂತುಕೊಂಡರು.

ಶಿಲಾದ ಪುತ್ರ ನಂದಿಯು ಭಗವಾನ್ ರುದ್ರದೇವನನ್ನು ಎಚ್ಚರಿಸಿದನು. ಶಿವನು ಕಣ್ತೆರೆದಬಳಿಕ ಎಲ್ಲ ದೇವತೆಗಳೂ ತಾರಕಾಸುರನಿಂದ ಜಗತ್ತಿಗೆ ಗಂಡಾಂತರ ಒದಗಿದ ಸಂಗತಿಯನ್ನು ನಿವೇದಿಸಿದರು. ಗಿರಿಜಾದೇವಿಯ ಪಾಣಿಗ್ರಹಣ ಮಾಡಬೇಕೆಂದೂ, ನಿನ್ನಿಂದ ಜನಿಸಿದ ಪುತ್ರನಿಂದಲೇ ತಾರಕಾಸುರನ ಸಂಹಾರವು ಸಾಧ್ಯವೆಂದೂ ತಿಳಿಸಿದರು. ತ್ರಿಮೂರ್ತಿಗಳಿಗೂ ಅವನು ಅಜಿಂಕ್ಯನಿರುವನೆಂಬು ದನ್ನೂ ಶ್ರೀಹರಿ ಮೊದಲಾದ ದೇವತೆಗಳು ಮಹೇಶ್ವರನಿಗೆ ಶ್ರುತ ಪಡಿಸಿದರು.

ಮಹೇಶ್ವರ–ದೇವತೆಗಳೆ, ನಾನು ಸರ್ವಾಂಗಸುಂದರಿಯಾದ ಗಿರಿಜಾ ದೇವಿಯನ್ನು ಸ್ವೀಕರಿಸಿದರೆ ಕಾಮದೇವನು ಜೀವಂತನಾಗುವನು. ಆಗ ಪರಮಾರ್ಥಮಾರ್ಗದಿಂದ ನಡೆಯುವ ಋಷಿ–ಮುನಿಗಳೂ, ಯತಿಗಳೂ, ವಿರಕ್ತರೂ, ಯೋಗಿಗಳೂ ಸಕಾಮರಾಗುವರು. ನೀವು ನಿಷ್ಕಾಮರಾಗಿ ಪರಮಾನಂದದ ಅನುಭವ ಮಾಡಬೇಕೆಂದಿದ್ದರೆ, ನನ್ನನ್ನು ಯೋಗಸಮಾಧಿ ಯಲ್ಲಿರಲು ಅವಕಾಶಕೊಡಿರಿ. ಮದನನು ಬದುಕಿ ಉಳಿಯಬಾರದು. ಕಾಮ ದಿಂದ ಕ್ರೋಧವುಂಟಾಗುವದು. ಕ್ರೋಧದಿಂದ ಮೋಹವು ಜನಿಸುವದು. ಮೋಹದಿಂದ ತಪವು ನಷ್ಟವಾಗುವದು. ದೇವತೆಗಳೆಲ್ಲರೂ ಕಾಮ, ಕ್ರೋಧ ಮೋಹಾದಿಗಳನ್ನು ಪರಿತ್ಯಾಗ ಮಾಡಬೇಕು. ಕಾಮವು ನರಕಕ್ಕೆ ಎಳೆಯುವದು.

> ಕಾಮೋ ಹಿ ನರಕಾಯೈವ ತಸ್ಮಾತ್ ಕ್ರೋಧೋಽಭಿಜಾಯತೇ ।
> ಕ್ರೋಧಾದ್ಭವತಿ ಸಮ್ಮೋಹೋ ಮೋಹಾಚ್ಚ ಭ್ರಂಶತೇ ಮನಃ ॥
> ಕಾಮಕ್ರೋಧೌ ಪರಿತ್ಯಾಜ್ಯಾ ಭವದ್ಭಿಃ ಸುರಸತ್ತಮೈಃ ।
> ಸರ್ವೇ ಚ ಮಂತವ್ಯಂ ಮದ್ವಾಕ್ಯಂ ನಾನ್ಯಥಾ ಕ್ವಚಿತ್ ॥

(ಶಿ. ಪು. ರಾ. ಸಂ. ಪಾ. ೩೦. ೨೪ ೨೭ ೨೮)

ವೃಷಭಧ್ವಜನಾದ ಶಿವನು ಹೀಗೆ ನುಡಿದು ಮತ್ತೆ ಯೋಗದಲ್ಲಿ ಮಗ್ನ ನಾದನು. ಆತ್ಮಸ್ವರೂಪನೂ, ನಿರಂಜನನೂ, ನಿರಾಭಾಸನೂ, ನಿರ್ವಿಕಾರನೂ, ನಿರಾಮಯನೂ, ಪರಾತ್ಪರನೂ, ನಿತ್ಯನೂ, ಮಮತಾರಹಿತನೂ, ನಿರವಗ್ರಹನೂ, ಶಬ್ದಾತೀತನೂ, ನಿರ್ಗುಣನೂ, ಜ್ಞಾನಗಮ್ಯನೂ, ಪ್ರಕೃತಿಪರನೂ ಆದ ಪರಮಾತ್ಮ

ಚಿಂತನೆಯಲ್ಲಿ ಶಿವನು ತೊಡಗಿದ್ದನ್ನು ಕಂಡು, ಮತ್ತೆ ನಂದಿಯನ್ನು ಪ್ರಾರ್ಥಿಸ ತೊಡಗಿದರು. ಪ್ರಮಥ ಗಣನಾಯಕನಾದ ನಂದೀಶ್ವರನು ಭಗವಾನ್ ಶಂಭು ವನ್ನು ಸಮಾಧಿಯಿಂದ ವಿರತಗೊಳಿಸುವದಕ್ಕಾಗಿ ಅವನನ್ನು ಸ್ತುತಿಸತೊಡಗಿದನು.

ಶಿವನು ಮತ್ತೆ ಕಣ್ತೆರೆದನು. ಆಗ ಶ್ರೀಹರಿಯು ದೇವತೆಗಳಿಗೂ ಜಗತ್ತಿಗೂ ತಾರಕಾಸುರನಿಂದ ಬಂದ ವಿಪತ್ತಿನ ಬಗ್ಗೆ ವಿವರಿಸಿ, ನಿನಗಾಗಿ ತಪಶ್ಚರ್ಯ ಮಾಡುತ್ತಲಿರುವ ಭಗವತಿ ಭವಾನಿಯ ಪಾಣಿಗ್ರಹಣ ಮಾಡಬೇಕೆಂದು ಬೇಡಿ ಕೊಂಡನು.

ಮಹೇಶ್ವರ–ಶ್ರೀಹರಿ, ವಿಧಾತಾ, ದೇವೇಂದ್ರಾ, ಮುನಿಸತ್ತಮರೆ, ನಿಮ್ಮ ಪ್ರಾರ್ಥನೆಯಂತೆ ನಾನು ಹಿಮಾಚಲಕುಮಾರಿ ಪಾರ್ವತಿಯ ಪಾಣಿಗ್ರಹಣ ಮಾಡುವೆನು. ಜಗತ್ತಿನ ಕಷ್ಟವನ್ನು ಪರಿಹಾರಮಾಡಲು ನಾನು ನನ್ನ ವಿರಕ್ತಿಯನ್ನು ತ್ಯಾಗಮಾಡುವೆನು. ನಾನು ಭಕ್ತಾಧೀನನಿರುವೆನು. ಗಿರಿಜಾ ಕಲ್ಯಾಣದಿಂದಲೇ ಜಗತ್ಕಲ್ಯಾಣವು ಆಗುವಂತಿರುವದೆಂಬುದು ನನಗೂ ತಿಳಿದಿದೆ. ನೀವು ಇನ್ನು ನಿಶ್ಚಿಂತರಾಗಿರಿ ಎಂದು ಹೇಳಿದನು. ಆಗ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು.

ತರುವಾಯ ಮಹೇಶ್ವರನು ಸಪ್ತ ಋಷಿಗಳನ್ನು ಕರೆಯಿಸಿಕೊಂಡು ಗಿರಿಜಾ ದೇವಿಯ ಹೃದಯ ಪರೀಕ್ಷೆ ಮಾಡಬೇಕೆಂದು ಕಳುಹಿಸಿದನು. ಸಪ್ತ ಋಷಿಗಳು ಪಾರ್ವತಿಯು ತಪಶ್ಚರ್ಯ ಮಾಡುತ್ತಿದ್ದ ಗೌರೀಶಿಖರಕ್ಕೆ ಬಂದರು.

ಸಪ್ತರ್ಷಿಗಳು–ಗಿರಿರಾಜನಂದಿನಿ, ನೀನು ಕಠಿಣತರವಾದ ತಪಾಚರಣೆ ಮಾಡುತ್ತಿರುವ ಉದ್ದೇಶವೇನು? ಈ ಸುಕೋಮಲ ಶರೀರವು ನಿನ್ನ ತಪದಿಂದ ಕಂದಿ ಕುಂದಿಹೋಗಿದೆ. ನಿನ್ನ ಫಲಾಪೇಕ್ಷೆಯಾದರೂ ಏನಿದೆ?

ಪಾರ್ವತಿ–ಮುನೀಶ್ವರರೇ, ಭಗವಾನ್ ರುದ್ರದೇವನು ನನಗೆ ಪತಿ ಯಾಗಬೇಕೆಂಬ ಉದ್ದೇಶದಿಂದ ಅವನ ಧ್ಯಾನದಲ್ಲಿ ತಲ್ಲೀನಳಾಗಿರುವೆನು. ನಾರದನು ಪಂಚಾಕ್ಷರಿ ಮಂತ್ರೋಪದೇಶ ಮಾಡಿರುವನು.

ಸಪ್ತರ್ಷಿಗಳು–ಗಿರಿಜಾದೇವಿ, ನೀನು ಆ ತ್ರಿಲೋಕಸಂಚಾರಿ ನಾರದನ ಮಾತು ಕೇಳಿದೆಯೇನು? ಅವನ ಚರಿತ್ರವು ನಿನಗೆ ಗೊತ್ತಿಲ್ಲ. ಅವನು ಕಪಟಿಯು. ದಕ್ಷ ಪುತ್ರರನ್ನು ಅವನು ಮನೆಯಿಂದ ಹೊರಡಿಸಿದನು. ಪ್ರಹ್ಲಾದನಿಗೆ ಉಪದೇಶ

ಮಾಡಿ ಅವನ ತಂದೆಯನ್ನು ನರಸಿಂಹನಿಂದ ಕೊಲ್ಲಿಸಿದನು. ನೀನು ಯಾರನ್ನು ವಿವಾಹವಾಗಲಿಚ್ಛಿಸುವೆಯೋ ಆ ರುದ್ರನು ಅಮಂಗಲಸ್ವರೂಪನು. ಭೂತ ಪ್ರೇತಗಳೇ ಅವನ ಸಂಗಡಿಗರು. ಅವನು ಸ್ಮಶಾನವಾಸಿಯು, ಭಗವಾನ್ ನಾರಾಯಣನು ಸದ್ಗುಣಗಳಿಂದ ಯುಕ್ತನು, ಶ್ರೀಯುಕ್ತನು. ಮಂಗಲಸ್ವರೂಪನು. ಅವನೊಡನೆ ನೀನು ವಿವಾಹವಾದರೆ ಸುಖಿಯಾಗುವೆ.

ಸಪ್ತರ್ಷಿಗಳ ಮಾತು ಕೇಳಿ ಪಾರ್ವತಿಯು ಗಹಗಹಿಸಿ ನಕ್ಕಳು.

ಪಾರ್ವತಿ–ಮುನೀಶ್ವರರೆ, ನಿಮ್ಮ ಮಾತಿನ ಅರ್ಥವನ್ನು ನಾನು ತಿಳಿದು ಕೊಂಡೆನು. ನಾನು ಹಿಮಾಲಯ ಪುತ್ರಿಯು. ನಾನು ಅವನಷ್ಟೇ ಕಠೋರಳಿರು ವೆನು. ಭಗವಾನ್ ಸದಾಶಿವನ ವಿಷಯವಾಗಿ ನೀವು ನನಗೆ ಏನನ್ನೂ ಹೇಳಬೇಡಿರಿ. ನಾನು ಶಿವತತ್ವವನ್ನು ಬಲ್ಲವಳಿರುನೆನು. ನನ್ನ ಪ್ರಭುವಾದ ಶಂಭುವು ಅಜನ್ಮನೂ, ಮಾಯಾರಹಿತನೂ, ನಿರ್ಗುಣನೂ, ನಿರಾಕಾರನೂ ಇರುವನು. ಸದಾಶಿವನು ನನ್ನನ್ನು ವಿವಾಹವಾಗದಿದ್ದರೆ, ನಾನು ಕುಮಾರಿಯಾಗಿಯೇ ಉಳಿಯುವೆನೆಂದು ಸತ್ಯವನ್ನು ಸ್ಮರಿಸಿ ಹೇಳುವೆನು.

ಸಪ್ತರ್ಷಿಗಳು ಶಿವನಬಳಿಗೆ ಹೋಗಿ ಭವಾನಿಯ ದೃಢನಿಶ್ಚಯವನ್ನು ತಿಳಿಸಿದರು. ಮಹೇಶ್ವರನು ಸಂತುಷ್ಟನಾದನು. ಕೂಡಲೆ ಅವನು ವೃದ್ಧ ಬ್ರಾಹ್ಮಣನ ವೇಷದಿಂದ ಪಾರ್ವತಿಯ ಬಳಿಗೆ ಬಂದನು. ಅವಳು ಬ್ರಾಹ್ಮಣನನ್ನು ವಂದಿಸಿ ಸ್ವಾಗತಿಸಿದಳು.

ಪಾರ್ವತಿ–ವಿಪ್ರೋತ್ತಮಾ, ನೀನು ಯಾರು? ವೇದವೇತೃಗಳಲ್ಲಿ ಶ್ರೇಷ್ಠ ನಾದ ನೀನು ನನ್ನ ತಪೋವನಕ್ಕೆ ಆಗಮಿಸಿದ ಉದ್ದೇಶವೇನು?

ಬ್ರಾಹ್ಮಣ–ಇಚ್ಛಾನುಸಾರವಾಗಿ ಪರಿಭ್ರಮಣ ಮಾಡುವ ಬ್ರಾಹ್ಮಣನು ನಾನು. ನೀನು ನಿನ್ನ ಈ ಇಬ್ಬರು ಸಖಿಯರೊಡನೆ ನಿರ್ಜನವನದಲ್ಲಿ ತಪಸ್ಸು ಮಾಡತೊಡಗಿದ ಕಾರಣವೇನು? ನೀನು ಯಾರ ಪುತ್ರಿಯು? ವೇದಮಾತೆಯಾದ ಗಾಯತ್ರಿಯೋ? ಲಕ್ಷ್ಮಿಯೋ? ಸರಸ್ವತಿಯೋ? ಸಾವಿತ್ರಿಯೋ?

ಪಾರ್ವತಿ–ವಿಪ್ರಶ್ರೇಷ್ಠಾ, ನಾನು ಅವರಾರೂ ಅಲ್ಲ. ಹಿಮವಂತನ ಪುತ್ರಿಯಾದ ಪಾರ್ವತಿಯು. ನನಗೆ ಗಿರಿಜೆಯೆಂದೂ ಅನ್ನುವರು. ಭಗವಾನ್ ಶಂಕರನು ನನಗೆ ಪತಿಯಾಗಿ ದೊರೆಯಬೇಕೆಂಬ ಇಚ್ಛೆಯಿಂದ ಅವನ ಧ್ಯಾನ್ಯದಲ್ಲಿ

ಮಗ್ನಳಾಗಿರುವೆನು. ನನಗೆ ರುದ್ರದೇವನು ಪ್ರಾಣವಲ್ಲಭನಾಗಿ ದೊರೆಯದೆ ಹೋದರೆ ಅಗ್ನಿಪ್ರವೇಶ ಮಾಡುವೆನು. ನಾನು ಹಿಂದೆ ಅವನ ಸತಿಯಾಗಿ ಶರೀರವನ್ನು ದಗ್ಧಗೊಳಿಸಿದೆನು. ಈಗ ರುದ್ರದೇವನ ಸತಿಯಾಗದಿದ್ದರೆ ದೇಹವನ್ನು ಅನಲಂಗೆ ಅರ್ಪಿಸುವೆನು.

ಬ್ರಾಹ್ಮಣ–ಪಾರ್ವತಿ, ಇಲ್ಲಿ ಧಗಧಗಿಸುವ ಅಗ್ನಿಯು ನಿನ್ನನ್ನು ದಹಿಸದಿದ್ದರೆ ನಿನ್ನ ತಪವು ಫಲಿಸಿದೆಯೆಂದು ಭಾವಿಸುವೆನು.

ಪಾರ್ವತಿಯ ಸಮ್ಮುಖದಲ್ಲಿ ಅಗ್ನಿಯು ಪ್ರದೀಪ್ತವಾಯಿತು. ಪಾರ್ವತಿಯು ಅದರಲ್ಲಿ ಪ್ರವೇಶಿಸಿದಳು. ಅಗ್ನಿದೇವನು ಅವಳಿಗೆ ಚಂದನದಂತೆ ಶೀತಲನಾದನು.

ಬ್ರಾಹ್ಮಣ–ಪಾರ್ವತಿ, ನಿನ್ನ ತಪಾಚರಣೆಯು ಅವರ್ಣನೀಯವಿರುವದು. ಆದರೆ ಆ ಸ್ಮಶಾನವಾಸಿಯೂ, ಅಮಂಗಲರೂಪಧಾರಿಯೂ, ನಗ್ನನೂ, ವ್ಯಾಘ್ರಾಂಬರಧರನೂ, ಭೂತ–ಪ್ರೇತಗಳ ಸಂಗಡಿಗನೂ ಆದ ಆ ಶಿವನನ್ನು ವರಿಸಬೇಕೆಂಬ ಅಪೇಕ್ಷೆಯು ನಿನಗೆ ಏಕೆ ಆಯಿತೋ ತಿಳಿಯದು.

ಪಾರ್ವತಿ–ದುಷ್ಟ ಬ್ರಾಹ್ಮಣಾ, ನಾನು ನಿನ್ನನ್ನು ಸದಿಚ್ಛೆಯ ತಾಪಸನೆಂದು ಭಾವಿಸಿದ್ದೆನು. ಆದರೆ ನೀನು ಶಿವನಿಂದಕನೆಂಬುದು ಈಗ ನನಗೆ ತಿಳಿಯಿತು. ಶಿವನು ಯಾರೆಂಬುದು ನನಗೆ ಗೊತ್ತಿದೆ. ಮೂಢಮತಿಯಾದ ನಿನಗೆ ತಿಳಿಯದು. ನೀನು ಇಲ್ಲಿಂದ ಹೊರಟುಹೋಗು. ನೀನು ಬ್ರಾಹ್ಮಣನಿರುವದರಿಂದ ಅವಧ್ಯನಿರುವೆ. ನಿನಗೆ ಶಾಪವನ್ನು ಕೊಡಲಾರೆನು. ನೀನು ಇಲ್ಲಿಂದ ಹೊರಟುಹೋಗದಿದ್ದರೆ ನಾನೇ ನನ್ನ ಸಖಿಯರಾದ ಜಯೆ–ವಿಜಯೆರೊಡನೆ ಈ ತಪೋವನದಿಂದ ಬೇರೆ ಸ್ಥಾನಕ್ಕೆ ಹೊರಡುವೆನು.

ಪರಕ್ಷಣದಲ್ಲಿ ಭಗವಾನ್ ಮಹೇಶನು ಗಿರಿಜೆಗೆ ಸಾಕ್ಷಾತ್ಕಾರನಾದನು. ಕೂಡಲೆ ಅವಳು ಭಯಭಕ್ತಿಯಿಂದ ಪರಮೇಶ್ವರನಿಗೆ ಪ್ರಣಾಮಗಳನ್ನರ್ಪಿಸಿದಳು.

ಮಹೇಶ್ವರ–ಗಿರಿರಾಜ ನಂದಿನಿ! ಪ್ರಿಯೆ! ನನ್ನನ್ನು ಬಿಟ್ಟು ನೀನು ಎಲ್ಲಿಗೆ ಹೊರಡುವೆ? ನಾನು ನಿನ್ನನ್ನು ಎಂದೂ ತ್ಯಾಗ ಮಾಡುವದಿಲ್ಲ. ತಪದ ಮೌಲ್ಯದಿಂದ ನೀನು ನನ್ನನ್ನು ಕೊಂಡುಬಿಟ್ಟೆ! ನಾನು ನಿನ್ನ ಪಾಣಿಗ್ರಹಣ ಮಾಡುವೆನು.

ಪಾರ್ವತಿ–ದೇವೇಶ್ವರಾ, ನೀನು ನನ್ನ ಸ್ವಾಮಿಯು. ದಕ್ಷಯಜ್ಞದಲ್ಲಿ ದಗ್ಧಳಾದ ನಾನು ದೇವತೆಗಳಿಗೆ ತಾರಕಾಸುರನಿಂದ ಒದಗಿದ ಗಂಡಾಂತರವನ್ನು ದೂರ ಮಾಡಲು ಪರ್ವತರಾಜನ ಪುತ್ರಿಯಾಗಿ ಜನಿಸಿದೆನು. ನಿನ್ನನ್ನು ವಿವಾಹ ವಾಗಬೇಕಾದದ್ದು ನಿಯತಿಯ ನಿಯಮ. ತಾರಕಾಸುರನನ್ನು ನಾಶಮಾಡಲು ತ್ರಿಮೂರ್ತಿಗಳಾದ ನೀವು ಅಸಮರ್ಥರು. ನಮ್ಮಿರ್ವರ ಪುತ್ರನಾದ ಕುಮಾರ ನಿಂದಲೇ ಅವನ ಸಂಹಾರವು ಸಾಧ್ಯ. ನಾಥಾ, ನೀನು ಕನ್ಯಾರ್ಥಿಯಾಗಿ ನನ್ನ ತಂದೆಯ ಬಳಿಗೆ ನಡೆ. ನನ್ನ ತಾಯಿಯಾದ ಮೇನಕಾದೇವಿಯು ನಿನ್ನನ್ನು ಕಂಡು ಧನ್ಯಳಾಗುವಳು. ದಕ್ಷಪ್ರಜಾಪತಿಯು ತನ್ನ ಪುತ್ರಿಯಾದ ಸತಿದೇವಿಯ ಹಸ್ತವನ್ನು ನಿನ್ನ ಕೈಯಲ್ಲಿ ಕೊಟ್ಟಂತೆ, ಹಿಮವಂತನು ನನ್ನ ಹಸ್ತವನ್ನು ನಿನ್ನ ಕೈಯಲ್ಲಿ ವಿಧ್ಯುಕ್ತ ವಾಗಿ ಕೊಡಲಿ.

ಮಹೇಶ್ವರ–ದೇವಿ, ಮಹೇಶ್ವರಿ! ನಾನು ಸರ್ವತಂತ್ರ ಸ್ವತಂತ್ರನಿರುವೆನು. ನಮ್ಮ ಕಣ್ಣಿಗೆ ಕಾಣುವುದೆಲ್ಲ ಮಿಥ್ಯವಾಗಿದೆ. ನಾನು ಪರಮೇಶ್ವರನು, ನೀನು ಪ್ರಕೃತಿಯು. ಭಕ್ತರ ಇಚ್ಛೆಯಂತೆ ನಾನು ಶರೀರಗ್ರಹಣ ಮಾಡಿರುವೆನು. ನಿನ್ನ ಪಿತನಾದ ಹಿಮಾಲಯನಲ್ಲಿ ಬಂದು ನಾನು ಯಾಚಕನಾಗಲಾರೆನು. ಆದರೆ ನಾನು ಹೂಡಿರುವ ನಾಟಕದ ಸಿದ್ಧಿಗಾಗಿ ನಿನ್ನ ಅಪೇಕ್ಷೆಯಂತೆ ನಡೆಯಬೇಕಾಗಿದೆ.

ಪಾರ್ವತಿ–ನಾಥಾ, ನೀನು ಭಕ್ತಾಧೀನನಲ್ಲವೆ? ಭಕ್ತರ ಇಚ್ಛೆಯನ್ನು ನೆರವೇರಿಸುವದು ನಿನ್ನ ಕರ್ತವ್ಯವಲ್ಲವೆ? ಹಿಮವಂತನು ದಾತೃವೆಂಬ ಅಭಿಧಾನ ವನ್ನು ಹೊಂದಲು ಅವಕಾಶವನ್ನೊದಗಿಸಿಕೊಡು. ನೀನು ಪರಬ್ರಹ್ಮಪರಮಾತ್ಮನಿ ರುವೆ. ನಿರ್ಗುಣನಾದ ನೀನು ಭಕ್ತರನ್ನು ಉದ್ಧಾರ ಮಾಡಲು ಸಗುಣ ರೂಪಧಾರಣ ಮಾಡಿರುವೆ.

ಗಿರಿಜೆಯು ಪತಿಯಾದ ಶಂಭುವಿಗೆ ಪ್ರಣಾಮ ಮಾಡಿದಳು. ಕೂಡಲೆ ಆ ಮಹಾದೇವನು ಅಲ್ಲಿಯೆ ಅಂತರ್ಧಾನನಾದನು. ಕೂಡಲೆ ಪಾರ್ವತಿಯು ಜಯೆ–ವಿಜಯೆರನ್ನು ಸಂಗಡ ಕರೆದುಕೊಂಡು ತನ್ನ ಮಂದಿರಕ್ಕೆ ಬಂದಳು. ತಮ್ಮ ಕುಮಾರಿಯು ಘನತರವಾದ ತಪವನ್ನಾಚರಿಸಿ ಪರಮೇಶ್ವರನ ಸಾಕ್ಷಾತ್ಕಾರ ಹೊಂದಿದ ಸುದ್ದಿಯನ್ನು ಮೇನಕೆ, ಹಿಮವಂತರು ಜಯೆ–ವಿಜಯೆರಿಂದ ತಿಳಿದು ಕೊಂಡು ಆನಂದಸಾಗರದಲ್ಲಿ ಮುಳುಗಿದರು.

# ಗಿರಿಜಾ ಕಲ್ಯಾಣ

ಪಾರ್ವತಿಯು ಮನೆಗೆ ಬಂದ ಬಳಿಕ ಭಗವಾನ್ ಶಂಕರನು ನೃತ್ಯ ನಟನಾಗಿ ಅವಳ ಮಂದಿರಕ್ಕೆ ಬಂದನು. ಅವನು ಒಂದು ಕೈಯಲ್ಲಿ ಶೃಂಗವನ್ನು ಮತ್ತೊಂದು ಕೈಯಲ್ಲಿ ಡಮರುವನ್ನೂ ಹಿಡಿದುಕೊಂಡು ನೃತ್ಯವನ್ನಾರಂಭಿಸಿದನು. ಶಿವನ ನೃತ್ಯವನ್ನು ನೋಡಲಿಕ್ಕೆ ನಗರದ ಸಾವಿರಾರು ಸ್ತ್ರೀ–ಪುರುಷರು ಕೂಡಿದರು. ಅವನು ಬಲಗೈಯಲ್ಲಿ ಡಮರುವನ್ನೂ ಎಡಗೈಯಲ್ಲಿ ಶೃಂಗವನ್ನೂ ಹಿಡಿದು, ಅವುಗಳನ್ನು ಊದುತ್ತ, ಬಾರಿಸುತ್ತ ಮನೋಹರವಾಗಿ ನೃತ್ಯವನ್ನು ಮಾಡಿದನು. ಅವನು ಸುಮಧುರವಾಗಿ ಹಾಡುತ್ತ ಕುಣಿಯುತ್ತಿದ್ದನು. ನಟರಾಜ ನೃತ್ಯವನ್ನು ಕಂಡು ಎಲ್ಲರೂ ಹರುಷಿತರಾದರು. ಪಾರ್ವತಿಯು ತನ್ನ ಪ್ರಿಯಕರನಾದ ರುದ್ರ ದೇವನನ್ನು ಗುರುತಿಸಿ ಮನಸಾ ವಂದಿಸಿದಳು. ಆಗ ಶಿವನು ಅಂತರ್ಧಾನನಾದನು. ಸ್ವಲ್ಪ ವೇಳೆಯಲ್ಲಿಯೆ ಭಿಕ್ಷುಕನಟನಾಗಿ ಬಂದು ನೃತ್ಯ ಮಾಡತೊಡಗಿದನು. ಮೇನಕೆಯು ಒಂದು ಬಂಗಾರದ ಥಾಲಿಯಲ್ಲಿ ಮುತ್ತು–ರತ್ನಗಳನ್ನು ತುಂಬಿ ಭಿಕ್ಷುಕನಿಗೆ ಕೊಡಹೋದಳು. ಶಿವನು ಆ ರತ್ನಗಳನ್ನು ಸ್ವೀಕರಿಸಲಿಲ್ಲ. ಅಷ್ಟರಲ್ಲಿ ಪರ್ವತರಾಜನು ಗಂಗೆಯಲ್ಲಿ ಮಿಂದು ಮಂದಿರಕ್ಕೆ ಬಂದನು. ಆಗ ಭಿಕ್ಷುಕನಾದ ಶಿವನು ಮೇನಕಾ, ಪರ್ವತರನ್ನುದ್ದೇಶಿಸಿ–ನಿಮ್ಮ ಕನ್ಯೆಯಾದ ಪಾರ್ವತಿಯನ್ನು ನನಗೆ ಅರ್ಪಿಸಿರಿ ಎಂದು ಕೇಳಿಕೊಂಡನು. ಪಾರ್ವತಿಯು ಆನಂದಭರಿತಳಾದಳು. ಶಿವನ ಮಾಯೆಯಿಂದ ಪರಿವೃತರಾದ ಪರ್ವತರಾಜನೂ ಮೇನಕೆಯೂ ಭಿಕ್ಷುಕನಂತಿದ್ದ ರುದ್ರನಿಗೆ ತಮ್ಮ ಸುಸ್ವರೂಪಿಯಾದ ಪುತ್ರಿಯನ್ನು ಕೊಡಲು ಒಡಂಬಡಲಿಲ್ಲ. ಕೂಡಲೆ ಶಿವನು ಅದೃಶ್ಯನಾದನು.

ಮೇನಕೆಯೂ ಪರ್ವತರಾಜನೂ ಮಂದಿರದಲ್ಲಿ ಮಾತಾಡುತ್ತ ಕುಳಿತಾಗ ಒಬ್ಬ ವೈಷ್ಣವ ಬ್ರಾಹ್ಮಣನು ಬಂದನು. ಶಿವನೇ ಆ ದಂಪತಿಗಳ ಮನಸ್ಸನ್ನು ಒರೆಗೆ ಹಚ್ಚಲು ಬ್ರಾಹ್ಮಣ ವೇಷಧಾರಿಯಾಗಿ ಬಂದಿದ್ದನು. ತಮ್ಮ ಪುತ್ರಿಯಾದ ಗಿರಿಜೆಯನ್ನು ಶಿವನಿಗೆ ವಿವಾಹ ಮಾಡಿ ಕೊಡಬೇಕೆಂದು ನಿರ್ಧಾರ ಮಾಡಿದ್ದ ಸಂಗತಿಯನ್ನು ಆ ದಂಪತಿಗಳು ತಿಳಿಸಿ, ಅವನ ವೇಷ ಭೂಷಣಗಳೂ ವೃತ್ತಿಯೂ ವಿಚಿತ್ರವಾದುದನ್ನು ಮನಗಂಡದ್ದರಿಂದ ಈಗ ಆ ವಿಚಾರವನ್ನು ಬಿಟ್ಟು ಬಿಡಬೇಕೆಂದು ಯೋಚಿಸಿದ್ದನ್ನು ಅವರು ಬ್ರಾಹ್ಮಣನಿಗೆ ತಿಳಿಸಿದರು.

ಬ್ರಾಹ್ಮಣ–ಪರ್ವತರಾಜಾ, ಮೇನಕಾದೇವಿ! ಇಂತಹ ಸುಂದರ ರೂಪದ ಕನ್ಯೆಯನ್ನು ಆ ಭಿಕ್ಷುಕನಿಗೆ ಅರ್ಪಿಸಬೇಡಿರಿ. ಅವನಿಗೆ ತಂದೆ–ತಾಯಿಗಳಾರೆಂಬು ದನ್ನು ಜಗತ್ತು ಅರಿಯದು. ಸ್ಮಶಾನವೇ ಅವನ ರಾಜ ಮಂದಿರವು. ಚಿತಾಭಸ್ಮವನ್ನು ಮೈಗೆ ಪೂಸಿಕೊಂಡು ಕೈಯಲ್ಲಿ ಕಪಾಲ ಹಿಡಿದು ಮನೆ ಮನೆಗೆ ಅಲೆದಾಡುವ ಅಲೆಮಾರಿ ಭಿಕ್ಷುಕನವನು. ಹಾವೂ, ಎಲವುಗಳೂ ಅವನ ಅಲಂಕಾರಗಳು. ಅವನು ನಗ್ನ ಸಾಧುವು. ಹುಲಿಯ ಚರ್ಮವನ್ನು ಸುತ್ತಿಕೊಂಡು ಕೈಯಲ್ಲಿ ತ್ರಿಶೂಲ ಹಿಡಿದು ಎಲ್ಲಿನೋಡಿದಲ್ಲಿ ತಿರುಗಾಡುವನು. ತಾನು ಶಾಂತನೆಂದು ಹೆಗ್ಗಳಿಕೆ ಹೇಳಿಕೊಳ್ಳುವ ಅವನು ಸಿಟ್ಟಿನ ಕೆಂಡವಾಗಿರುವನು. ಪಾಪ! ನಿರಪರಾಧಿಯಾದ ಕಾಮದೇವನನ್ನು ಅವನು ಬೂದಿಮಾಡಿಬಿಟ್ಟನು. ಅವನ ಜಾತಿಯು ಯಾವುದೋ, ಕುಲವು ಯಾವುದೋ ಕಂಡವರಿಲ್ಲ, ಕೇಳಿದವರಿಲ್ಲ, ಗುಣವತಿಯೂ ರೂಪವತಿಯೂ ಆದ ನಿಮ್ಮ ಕನ್ಯೆ ಗಿರಿಜೆಯನ್ನು ಆ ನಗ್ನ ಸಾಧುವಿಗೆ ಕೊಡಬೇಡಿರಿ. ನಾನು ಹೇಳಿದ್ದನ್ನು ನೀವು ಗಿರಿಜೆಗೆ ಹೇಳಬಾರದು. ಯಾಕೆಂದರೆ ಅವಳಿಗೆ ಆ ಶಿವನ ಹುಚ್ಚು ಹಿಡಿದಿದೆ.

ಬ್ರಾಹ್ಮಣ ವೇಷಧಾರಿಯಾದ ಶಿವನು ಆ ದಂಪತಿಗಳಿಗೆ ಹೀಗೆ ಹೇಳಿ ಅಲ್ಲಿಂದ ತೆರಳಿದನು. ತರುವಾಯ ಅವರು ಬಹಳೇ ಯೋಚನೆಗೊಳಗಾದರು. ಪಾರ್ವತಿಯು ಶಿವನಿಗಾಗಿ ತಪಾಚರಣೆ ಮಾಡಿ ಸಾಕ್ಷಾತ್ಕಾರ ಮಾಡಿಕೊಂಡಿ ರುವಳು. ಶಂಭುವನ್ನು ವರಿಸಬೇಕೆಂದು ಸಂಕಲ್ಪ ಮಾಡಿರುವದರಿಂದ ಅವಳ ಮನಸ್ಸನ್ನು ಪರಿವರ್ತಿಸುವದು ಬಹಳೇ ಕಠಿಣವೆಂದು ಅವರಿಗೆ ತೋಚಿತು. ಮೇನಕೆಯಂತೂ ಕುತ್ಸಿತರೂಪಿಯಾದ ಶಿವನಿಗೆ ಮಗಳನ್ನು ಕೊಡುವದಿಲ್ಲೆಂದು ಸ್ಪಷ್ಟವಾಗಿ ನುಡಿದು, ತನ್ನ ಅಂತಃಪುರದಲ್ಲಿ ಪ್ರವೇಶ ಮಾಡಿದಳು. ಶಿವನ ಮಾಯೆಯೇ ಅಗಾಧವಾದದ್ದಾಗಿತ್ತು. ಅವಳು ಕುತ್ಸಿತ ಸ್ವರೂಪಿಯಾದ ರುದ್ರನಿಗೆ ಸುಲಕ್ಷಣೆಯಾದ ಪುತ್ರಿಯನ್ನು ಕೊಡಲಾರೆನೆಂದು ಹೇಳಿದಳು. ವೈಷ್ಣವ ಬ್ರಾಹ್ಮಣನ ಮಾತುಗಳು ಅವಳ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿದ್ದವು. ಪ್ರಾಣ ತ್ಯಾಗ ಮಾಡಿಯೇನು, ರುದ್ರನಿಗೆ ತನ್ನ ಕುಮಾರಿಯನ್ನು ಕೊಡಲಾರೆನು ಎಂದು ಅವಳು ಹೇಳಿದಳು.

ಇಷ್ಟೆಲ್ಲ ನಾಟಕಮಾಡಿದ ಬಳಿಕ ಶಿವನು ಅರುಂಧತೀಸಹಿತವಾಗಿ ಸಪ್ತರ್ಷಿಗಳನ್ನು ಮಧ್ಯಸ್ಥಿಕೆಗಾಗಿ ಹಿಮವಂತನ ಬಳಿಗೆ ಕಳುಹಿಸಿದನು. ಪಾರ್ವತಿ ಯನ್ನು ಕೊಡಲು ಆ ರಾಜ ದಂಪತಿಗಳ ಮನವನ್ನು ಒಲಿಸಿಕೊಳ್ಳಬೇಕೆಂದು ಶಿವನು

ಅವರಿಗೆ ತಿಳಿಸಿದ್ದನು. ಪಾರ್ವತಿಯ ಮನೋಭೂಮಿಕೆಯನ್ನು ಅರಿತುಕೊಳ್ಳ ಬೇಕೆಂದು ಸಹ ಅವನು ಹೇಳಿದ್ದನು. ಸಪ್ತರ್ಷಿಗಳು ಆಕಾಶಮಾರ್ಗದಿಂದ ಪರ್ವತರಾಜನ ರಾಜಧಾನಿಯಲ್ಲಿಳಿದರು. ರಾಜನು ಅವರನ್ನು ಸ್ವಾಗತಿಸಿ ಷೋಡಶೋಪಚಾರಗಳಿಂದ ಸತ್ಕರಿಸಿದನು.

ಹಿಮವಂತ–ಪೂಜ್ಯರಾದ ಸಪ್ತರ್ಷಿಗಳೆ, ಪರಮ ಸಾಧ್ವಿಯಾದ ಅರುಂಧತಿ ದೇವಿಯೇ ನಿಮ್ಮೆಲ್ಲರಿಗೆ ನನ್ನ ಅನಂತ ಪ್ರಣಾಮಗಳು. ನಿಮ್ಮ ಆಗಮನವಾದುದರಿಂದ ನಾನು ಪರಮ ಧನ್ಯನಾದೆನು. ವಿಷ್ಣುರೂಪಿಗಳಾದ ನೀವು ಇಲ್ಲಿಗೆ ದಯಮಾಡಿಸಿದಿರಿ. ನೀವು ಪೂರ್ಣಕಾಮರಿರುವಿರಿ. ದೀನನಾದ ನನ್ನಿಂದ ನೆರವೇರಬೇಕಾದ ಕಾರ್ಯವೇನಿದೆಯೆಂಬುದನ್ನು ತಿಳಿಸಿರಿ. ನಿಮ್ಮ ಸೇವಕನಾದ ನಾನು ಅದನ್ನು ಪೂರೈಸಿಕೊಡುವೆನು.

ಸಪ್ತರ್ಷಿಗಳು–ಶೈಲರಾಜಾ, ಭಗವಾನ್ ಶಿವನು ಜಗತ್ಪಿತನು. ಭಗವತಿ ಶಿವೆಯು ಜಗನ್ಮಾತೆಯು. ನೀನು ಮಹಾತ್ಮನಾದ ಶಿವನಿಗೆ ನಿನ್ನ ಕನ್ಯೆಯಾದ ಗಿರಿಜೆಯನ್ನು ಕೊಡಬೇಕು.

ಹಿಮವಂತ–ಸಪ್ತರ್ಷಿಗಳೆ, ನಾನು ನನ್ನ ಪುತ್ರಿಯನ್ನು ಶಿವನಿಗೆ ಕೊಡ ಬೇಕೆಂದು ನಿಶ್ಚಯಿಸಿದ್ದೆನು. ಆದರೆ ಒಬ್ಬ ವೈಷ್ಣವ ಬ್ರಾಹ್ಮಣನು ಭಗವಾನ್ ಶಿವನ ಬಗ್ಗೆ ವಿಪರೀತವಾದ ಮಾತುಗಳನ್ನು ಹೇಳಿಹೋದನು. ಅವನ ಹೇಳಿಕೆಯಿಂದ ಶಿವೆಯ ತಾಯಿಯ ಬುದ್ಧಿಯು ಭ್ರಷ್ಟವಾಗಿ ಹೋಗಿದೆ. ಅವಳು ಪಾರ್ವತಿಯನ್ನು ರುದ್ರದೇವನಿಗೆ ವಿವಾಹ ಮಾಡಿಕೊಡಲು ಸಮ್ಮತಿಸುವದಿಲ್ಲ.

ತರುವಾಯ ವಸಿಷ್ಠ ಮಹರ್ಷಿಯು ತನ್ನ ಪತ್ನಿಯಾದ ಸತಿ ಶಿರೋಮಣಿ ಅರುಂಧತಿಯನ್ನು ಕರೆದು, ಮೇನಕಾದೇವಿಯ ಮನವೊಲಿಸಬೇಕೆಂದು ಹೇಳಿ ಅಂತಃಪುರಕ್ಕೆ ಕಳುಹಿಸಿದನು. ಅರುಂಧತಿಯು ಬಂದಾಗ ಮೇನಕಾದೇವಿಯು ದುಃಖಿಸುತ್ತ ಮಲಗಿದ್ದಳು. ಅವಳು ಬಂದ ಕೂಡಲೆ ಎದ್ದು ವಂದಿಸಿದಳು. ಬಳಿಯಲ್ಲಿ ಕುಳಿತ ಪಾರ್ವತಿಯೂ ಎದ್ದು ಅವಳಿಗೆ ನಮಸ್ಕರಿಸಿದಳು.

ಮೇನಕೆ–ನಮ್ಮ ಪೂರ್ವಾರ್ಜಿತ ಸುಕೃತದಿಂದ ಬ್ರಹ್ಮದೇವನ ಪುತ್ರ ವಧುವೂ ವಸಿಷ್ಠ ಮಹರ್ಷಿಯ ಪತ್ನಿಯೂ ಆದ ನೀನು ನಮ್ಮಲ್ಲಿಗೆ ಆಗಮಿಸಿದೆ. ನಾವೂ ನನ್ನ ಪುತ್ರಿಯೂ ನಿನ್ನ ದಾಸಿಗೆ ಸಮಾನರಾಗಿರುವೆವು. ನೀನು ಯಾವ

ಉದ್ದೇಶದಿಂದ ಇಲ್ಲಿಗೆ ಬಂದೆಯೆಂಬುದನ್ನು ತಿಳಿಸಬೇಕು. ಮೇನಕೆಯು ಹೀಗೆ ಹೇಳಿದ ಬಳಿಕ ಅರುಂಧತಿಯು ಅವಳಿಗೆ ಒಳ್ಳೆಯ ಉಪದೇಶ ಮಾಡಿ, ಅವಳನ್ನು ಸಪ್ತರ್ಷಿಗಳಿದ್ದ ಸ್ಥಾನಕ್ಕೆ ಕರೆ ತಂದಳು.

ಸಪ್ತರ್ಷಿಗಳು–ಶೈಲೇಂದ್ರಾ, ಮೇನಕಾದೇವಿ, ಶಂಭುವು ಸರ್ವೇಶ್ವರನು. ನಿಮ್ಮ ಪುತ್ರಿಯಾದ ಪಾರ್ವತಿಯನ್ನು ಲೋಕಕಲ್ಯಾಣಕ್ಕಾಗಿ ಶಿವನಿಗೆ ಕೊಡಬೇಕು. ನಿಮ್ಮ ಪುತ್ರಿಯು ಶಿವನನ್ನು ವರಿಸಬೇಕೆಂದು ದೀರ್ಘಕಾಲ ತಪಸ್ಸು ಮಾಡಿರುವಳು. ಉಭಯತರೂ ಪರಸ್ಪರ ವಿವಾಹವಾಗುವ ಸಂಕಲ್ಪ ಮಾಡಿರುವರು. ಭಗವಾನ್ ರುದ್ರದೇವನನ್ನು ಸಾಮಾನ್ಯನೆಂದು ತಿಳಿಯಬೇಡಿರಿ. ಅವನು ಸಂಹಾರ ಕರ್ತನು. ಬೇರೆಯವರು ಹೇಳಿದ ಮಾತು ಕೇಳಿ ಶಿವನಿಂದೆ ಮಾಡಬೇಡಿರಿ.

ಹಿಮವಂತ–ಸಪ್ತರ್ಷಿಗಳೆ, ನಿಮ್ಮ ಮಾತುಗಳಿಗೆ ಒಪ್ಪುವೆನು. ಆದರೆ ಶಿವನ ಬಳಿಯಲ್ಲಿ ರಾಜೋಚಿತ ಸಾಮಗ್ರಿಗಳೇನೂ ಇಲ್ಲ. ಅವನಿಗೆ ಮನೆಯಿಲ್ಲ; ಮಠವಿಲ್ಲ. ಐಶ್ವರ್ಯವಿಲ್ಲ. ಸ್ವಜನ, ಬಂಧು–ಬಾಂಧವರಿಲ್ಲ. ಇಂತಹನಿಗೆ ನಾನು ನನ್ನ ಕನ್ಯೆಯನ್ನು ಕೊಡಲಾರೆನು. ಕಾಮ–ಲೋಭ–ಮೋಹಭಯಗಳಿಂದ ಅಯೋಗ್ಯವರನಿಗೆ ಕನ್ಯಾದಾನ ಮಾಡಿದರೆ ಕನ್ಯಾಪಿತನು ನರಕವನ್ನನುಭವಿಸುವನು.

ವರಾಯಾನನುರೂಪಾಯ ಪಿತಾ ಕನ್ಯಾಂ ದದಾತಿ ಚೇತ್ ।
ಕಾಮಾನ್ಮೋಹಾದ್ಭಯಾಲ್ಲೋಭಾತ್ ಸನಷ್ಟೋ ನರಕಂ ವ್ರಜೇತ್ ॥

(ಶಿ. ಪು. ರು. ಸಂ. ಪಾ. ೩೦. ೩೩–೨೬)

ವಸಿಷ್ಠ–ಶೈಲೇಶ್ವರಾ, ನನ್ನ ಮಾತು ಕೇಳು. ನಿನಗೆ ನಾನು ಧರ್ಮಾನುಕೂಲ ಮಾತುಗಳನ್ನೇ ಹೇಳುವೆನು. ಆರಂಭದಲ್ಲಿ ಸರಿಯಾಗಿ ತೋರದ್ದು ಹಿಂದಿನಿಂದ ಸುಖದಾಯಕವಾಗುವದು. ಶಂಕರನು ಎಲ್ಲ ದೇವತೆಗಳ ಸ್ವಾಮಿಯು. ಅವನಿಗೆ ಐಶ್ವರ್ಯದ ಅಭಿಲಾಷೆಯಿಲ್ಲ. ಧನಪತಿ ಕುಬೇರನು ಅವನ ಕಿಂಕರನು. ಅವನು ಸೃಷ್ಟಿಗೆ ಅಧೀಶ್ವರನಿರುವನು. ಅವನಿಗೆ ಬೇರೆ ಸಂಪತ್ತು ಬೇಕೇ? ದಕ್ಷಪುತ್ರಿಯಾದ ಸತಿದೇವಿಯು ತಂದೆಯಿಂದ ಅಪಮಾನ ಹೊಂದಿ ತನ್ನ ದೇಹವನ್ನು ಯೋಗದಿಂದ ದಗ್ಧಗೊಳಿಸಿ, ಈಗ ನಿನ್ನ ಕುಮಾರಿಯಾಗಿ ಜನಿಸಿರುವಳು. ಅವಳು ಶಂಕರನ ಪತ್ನಿ ಯಾಗತಕ್ಕವಳು. ಅವಳು ಬೇರೆಯವರನ್ನು ವರಿಸಲಾರಳು. ಪಾರ್ವತಿಯು ಜಗನ್ಮಾತೆಯಾದ ಜಗದಂಬೆಯ ಅವತಾರವು. ಅವಳು ಮಹಾದೇವನನ್ನು

ವಿವಾಹವಾಗಬೇಕಾಗಿದೆ; ಅವಳಿಂದ ಜನಿಸುವ ಕುಮಾರನಿಂದಲೇ ಕಂಟಕನಾದ ತಾರಕಾಸುರನ ಸಂಹಾರವಾಗಬೇಕಾಗಿದೆ. ಈ ಲೋಕೋಪಕಾರದ ಕಾರ್ಯವನ್ನು ನೆರವೇರಿಸುವದಕ್ಕಾಗಿ ನೀನು ನಿನ್ನ ಪುತ್ರಿಯನ್ನು ಈಶ್ವರನಿಗೆ ಕೊಡಬೇಕು.

ಹಿಮವಂತನು ತನ್ನ ಪುತ್ರಿಯನ್ನು ರುದ್ರದೇವನಿಗೆ ಕೊಡಲೊಪ್ಪಿದನು. ಮೇನಕಾದೇವಿಯು ಶಿವನ ಮಹಿಮೆಯನ್ನು ತಿಳಿದುಕೊಂಡು ಪತಿಯು ಹೇಳಿದಂತೆ ನಡೆಯಲು ಸಮ್ಮತಿಸಿದಳು. ಅರುಂಧತಿಯು ಅವಳಿಗೆ ಶಿವನು ಸರ್ವೇಶ್ವರನೆಂಬ ಸಂಗತಿಯನ್ನು ಮನನ ಮಾಡಿಕೊಟ್ಟಳು.

ಸಪ್ತರ್ಷಿಗಳು ಹಿಮವಂತನ ನಗರದಿಂದ ಹೊರಟು ಕೈಲಾಸಕ್ಕೆ ಬಂದರು. ಅವರು ಹಿಮವಂತನೊಡನೆ ನಡೆದ ಎಲ್ಲ ಸಂಗತಿಯನ್ನು ತಿಳಿಸಿದರು. ವಿವಾಹ ಮುಹೂರ್ತವನ್ನು ಕೂಡ ನಿಶ್ಚಯಿಸಿದ್ದನ್ನು ತಿಳಿಸಿದರು. ಮಹೇಶ್ವರನು ಸಪ್ತರ್ಷಿಗಳ ಹೇಳಿಕೆಯಂತೆ ಬ್ರಹ್ಮ, ವಿಷ್ಣು, ದೇವೇಂದ್ರ, ವಿದ್ಯಾಧರರು ಮೊದಲಾದವರಿಗೆ ಆಮಂತ್ರಣ ಕಳುಹಿಸಿದನು. ದೇವರ್ಷಿ ನಾರದನು ಎಲ್ಲ ದೇವತೆಗಳಿಗೂ ಋಷಿಗಳಿಗೂ ಆಮಂತ್ರಣ ತಲುಪಿಸಿದನು.

ಮಹಾಮನಸ್ವಿಯಾದ ಗಿರಿರಾಜ ಹಿಮವಂತನು ತನ್ನ ಪುರೋಹಿತನಾದ ಗರ್ಗಮುನಿಯನ್ನು ಕರೆಯಿಸಿ ಲಗ್ನಪತ್ರಿಕೆ ಬರೆಯಿಸಿ ಅದನ್ನು ಶಿವನ ಕಡೆಗೆ ಕಳುಹಿಸಿದನು. ಹಿಮವಂತನ ಆತ್ಮೀಯರು ನಾನಾ ಪ್ರಕಾರದ ಸಾಮಗ್ರಿಗಳನ್ನು ತೆಗೆದುಕೊಂಡು ಕೈಲಾಸಕ್ಕೆ ಹೋದರು. ಅವರು ಲಗ್ನಪತ್ರಿಕೆಯನ್ನು ಶಿವನಿಗೆ ತಲುಪಿಸಿ ತಿಲಕವನ್ನು ಹಚ್ಚಿದರು. ಶಿವನು ಎಲ್ಲ ಜನರನ್ನೂ ಯಥಾರೀತಿಯಿಂದ ಸತ್ಕರಿಸಿದನು.

ಹಿಮವಂತನು ಆಮಂತ್ರಣ ಕೊಟ್ಟಪ್ರಕಾರ ಸುಮೇರು, ಮಂದರಾಚಲ, ಅಸ್ತಾಚಲ, ಉದಯಾಚಲ, ಮಲಯಾಚಲ, ದರ್ದುರ, ನಿಷದ, ಗಂಧ ಮಾದನ, ಕರವೀರ, ಮಹೇಂದ್ರ, ಪಾರಿಯಾತ್ರ, ಕ್ರೌಂಚ, ಪುರುಷೋತ್ತಮ, ಶೈಲ, ನೀಲ, ತ್ರಿಕೂಟ, ಚಿತ್ರಕೂಟ, ವೆಂಕಟ, ಶ್ರೀಶೈಲ, ಕೋಕಾಮುಖ, ನಾರದ, ವಿಂಧ್ಯ, ಕಾಲಂಜರ, ಕೈಲಾಸ ಮೊದಲಾದವರು ದಿವ್ಯರೂಪ ಧಾರಣ ಮಾಡಿಕೊಂಡು ತಮ್ಮ ಸ್ತ್ರೀ-ಪುತ್ರರೊಡನೆ ಹೊರಟರು. ಎಲ್ಲ ನದೀ ದೇವತೆಗಳು ದಿವ್ಯರೂಪ ಧಾರಣ ಮಾಡಿಕೊಂಡು ಹಿಮಾಚಲಪುರಿಗೆ ಹೊರಟರು. ಹಿಮವಂತನು ವಿಶ್ವಕರ್ಮನನ್ನು ಕರೆಯಿಸಿ ಭವ್ಯವಾದ ವಿವಾಹ ಮಂಟಪವನ್ನು ನಿರ್ಮಿಸಲು ತಿಳಿಸಿದನು. ಕಲಾವಿದ

ನಾದ ವಿಶ್ವಕರ್ಮನು ಕೃತ್ರಿಮ ವೈಕುಂಠ, ಕೈಲಾಸ, ಸತ್ಯಲೋಕಗಳನ್ನು ನಿರ್ಮಾಣ ಮಾಡಿದನು. ಅಲ್ಲಲ್ಲಿ ಆಯಾ ದೇವತೆಗಳ, ಅವರ ಪತ್ನಿಯರ ಪ್ರತಿಮೆಗಳನ್ನು ನಿರ್ಮಾಣ ಮಾಡಿದನು. ಅರಿಯದವರಿಗೆ ಎಲ್ಲವೂ ನಿಜವೆಂಬಂತೆಯೆ ಭಾಸವಾಗುತ್ತಿದ್ದವು. ಎಲ್ಲ ಅತಿಥಿಗಳಿಗೂ ಅವರವರ ಯೋಗ್ಯತೆಯಂತೆ ಸುಂದರವಾದ ವಸತಿ ಮಂದಿರಗಳು ನಿರ್ಮಾಣವಾದವು.

ಭಗವಾನ್ ರುದ್ರದೇವನು ತನ್ನ ಪರಿವಾರದೊಡನೆ ಕೈಲಾಸದಿಂದ ಹಿಮಾಚಲಪುರಿಗೆ ಹೊರಟನು. ನಂದಿ, ಭೃಂಗಿ, ತುಂಬುರು ಮೊದಲಾದ ಪ್ರಮಥರೂ, ಅನೇಕಾನೇಕ ಭೂತಗಣಗಳೂ, ಶಾಕಿನಿ, ಯಾತುಧಾನ, ಬೇತಾಳ, ಬ್ರಹ್ಮರಾಕ್ಷಸ, ಭೂತ, ಪ್ರೇತ ಮೊದಲಾದ ತನ್ನ ಗಣಗಳೊಡನೆ ರುದ್ರದೇವನು ಸಾಗಿದ್ದನು. ಹಿಂದೆ ನಾರದ, ಹಾಹಾ, ಹೂಹೂ ಎಂಬ ಗಂಧರ್ವರು, ಮಹರ್ಷಿಗಣವು, ಬ್ರಹ್ಮ ವಿಷ್ಣು ದೇವೇಂದ್ರಾದಿ ದೇವತೆಗಳು ಹಿಂದೆ ನಡೆದಿದ್ದರು. ಶೌನಕಾದಿ ಮಹರ್ಷಿಗಳು, ಕಶ್ಯಪ, ಅತ್ರಿ, ವಸಿಷ್ಠ, ಗೌತಮ, ಮಾರ್ಕಂಡೇಯ, ಶಿಲಾಪಾಕ ಅರುಣಪಾಲ, ಅಕೃತಶ್ರಮ, ಅಗಸ್ತ್ಯ, ಚ್ಯವನ, ಗರ್ಗ, ಶಿಲಾದ, ದಧೀಚಿ, ಉಪಮನ್ಯು, ಭರದ್ವಾಜ, ಅಕೃತವ್ರಣ, ಪಿಪ್ಪಲಾದ, ಕುಶಿಕ, ಕೌತ್ಸ, ಶಿಷ್ಯಸಹಿತನಾದ ವ್ಯಾಸ ಮೊದಲಾದವರು ವೇದಮಂತ್ರಗಳಿಂದ ಮಂಗಲಕಾರ್ಯಗಳನ್ನು ನೆರವೇರಿಸಿ ದಿಬ್ಬಣದ ಜೊತೆಗೆ ಇದ್ದರು. ಶಿವನ ದಿಬ್ಬಣವು ಹಿಮಾಚಲ ನಗರಿಯನ್ನು ಪ್ರವೇಶಿಸಿತು.

ಮೇನಕಾದೇವಿಯು ಶಿವನನ್ನು ಕಂಡಿರಲೇ ಇಲ್ಲ. ಅಳಿಯನನ್ನು ಕಾಣಬೇಕೆಂಬ ಕುತೂಹಲವು ಅವಳಿಗೆ. ಆಗ ನಾರದನು ಆಗಮನ ಮಾಡುತ್ತಿರುವ ಶಿವನನ್ನು ತೋರಿಸಿ ಒಳ್ಳೆಯ ಗಾಂಭೀರ್ಯದಿಂದ ಹೇಳತೊಡಗಿದನು.

ನಾರದ– ಗಿರಿರಾಜಪತ್ನಿ, ಇವನೇ ನೋಡು, ನಿನ್ನ ಅಳಿಯನಾದ ಭಗವಾನ್ ಶಂಕರನು. ತ್ರಿಲೋಕಗಳ ಸ್ವಾಮಿಯು! ಶಿವೆಯು ಈ ಸರ್ವೇಶ್ವರನಿಗಾಗಿ ಬಹುವಾಗಿ ತಪಶ್ಚರ್ಯ ಮಾಡಿದ್ದರಿಂದಲೇ ಅವಳಿಗೆ ಈ ಜಗನ್ನಾಥನು ಪತಿಯಾಗಿ ದೊರಕಿದನು.

ಶಿವನ ರೂಪವು ಅದ್ಭುತವಾಗಿತ್ತು. ಶಿವನಿಗಿಂತಲೂ ಅವನ ಭೂತ ಪ್ರೇತ ಮೊದಲಾದವುಗಳಿಂದ ಕೂಡಿದ ದಿಬ್ಬಣವು ಇನ್ನೂ ಅದ್ಭುತವಾಗಿತ್ತು. ಒಂದು ಕಣ್ಣಿನ, ಅನೇಕ ಕಣ್ಣುಗಳುಳ್ಳ, ವಿಕರಾಳ ಮುಖದ, ಅಸ್ಥಿಪಂಜರಗಳಾಗಿದ್ದ, ಘನ

ಶರೀರದ, ಭಯಂಕರ ಅವಯವಗಳ, ಭೀಕರ ಆಕೃತಿಯ ನಿಬ್ಬಣದವರನ್ನು ಕಂಡು ಮೈನಾದೇವಿಯು ಮೂರ್ಛಿತಳಾದಳು. ಎಚ್ಚೆತ್ತ ಬಳಿಕ ಅವಳು ತನ್ನ ಹಾಗೂ ತನ್ನ ಪುತ್ರಿಯ ದುರ್ದೈವವನ್ನು ನೆನೆದು ರೋದಿಸತೊಡಗಿದಳು. ಆಗ ಋಷಿಗಳ ಮಧ್ಯದಲ್ಲಿದ್ದ ವಸಿಷ್ಠ ಮಹರ್ಷಿಯು ಅವಳ ಬಳಿಗೆ ಬಂದನು.

ವಸಿಷ್ಠ–ಪಿತೃಕನ್ಯೆಯೂ ಗಿರಿರಾಜನ ರಾಣಿಯೂ ಆದ ಮೇನಕೆ, ನಿಮ್ಮ ಕಾರ್ಯಸಿದ್ಧಿಗಾಗಿಯೇ ನಾವು ಇಲ್ಲಿಗೆ ಬಂದಿರುವೆವು. ಭಗವಾನ್ ಶಂಕರನ ದರ್ಶನವು ದುರ್ಲಭವು. ನಿಮ್ಮ ಪುಣ್ಯದಿಂದ ಅವನು ನಿನಗೆ ಅಳಿಯನಾಗಿ ದೊರಕಿದನು !

ಮೇನಕೆ–ಎಲ್ಲರೂ ಮಾಯಾವಿಗಳು. ಇವನ ಸ್ವರೂಪವು ನನಗೆ ಪೂರ್ಣವಾಗಿ ಗೊತ್ತಿರಲಿಲ್ಲ. ನಾನು ನನ್ನ ಪುತ್ರಿಯನ್ನು ತುಂಡು ತುಂಡು ಮಾಡಿ ಚೆಲ್ಲುವೆನು ! ಶಂಕರನ ಕೈಯಲ್ಲಿ ಇವಳನ್ನು ಕೊಡಲಾರೆನು !

ಹಿಮವಂತ–ಪ್ರಿಯೆ, ಕೆಟ್ಟ ಮಾತುಗಳನ್ನಾಡಬೇಡ. ವಸಿಷ್ಠ ಮಹರ್ಷಿಯು ಮಹಾತ್ಮನು. ನಿನ್ನ ಮನೆಗೆ ಅನೇಕ ಮಹಾಮಹಿಮರು ಆಗಮಿಸಿರುವರು. ನೀನು ದುಃಖ ಮಾಡಬೇಡ. ಭಗವಾನ್ ಪಶುಪತಿಯು ನಾನಾಪ್ರಕಾರದ ಲೀಲೆಗಳನ್ನು ಮಾಡುವನು. ಶಿವನ ಮಹಿಮೆಯು ಅಗಾಧವಾಗಿದೆ. ಅವನು ನಿಗ್ರಹಾನುಗ್ರಹ ಶಕ್ತಿಯುಳ್ಳವನು. ಅವನ ಹಾಗೂ ಅವನ ಅನುಯಾಯಿಗಳನ್ನು ಕಂಡು ನೀನು ಭಯಗೊಂಡಿರುವೆ. ಅವನು ಹೀಗೆ ಅಮಂಗಲ ರೂಪನಾಗಿ ಕಂಡರೂ, ಮಂಗಲ ಪ್ರದನಾಗಿರುವನು.

ಮೇನಕೆ–ಗಿರಿರಾಜಾ, ಈ ನಾರದ, ವಸಿಷ್ಠಾದಿಗಳೂ ಇತರ ದೇವತೆಗಳೂ ನಿನಗೆ ಹುಚ್ಚು ಹಿಡಿಸಿರುವರು. ನೀನು ನನ್ನ ಮಾತು ಕೇಳು. ಗಿರಿಜೆಯ ಕೊರಳಿಗೆ ಹಗ್ಗಕಟ್ಟಿ ಪರ್ವತ ಶಿಖರದಿಂದ ಕೆಳಗೆ ನೂಕಿಬಿಡು ! ಹೀಗೆ ಮಾಡಿದರೆ ನನಗೆ ಸಂತೋಷವಾಗುವದು. ನಾನು ಹರನ ಕೈಯಲ್ಲಿ ಪಾರ್ವತಿಯನ್ನು ಕೊಡಲಾರೆನು. ನೀವು ಬಲುಮೆಯಿಂದ ಭವಾನಿಯನ್ನು ಆ ಅಮಂಗಲರೂಪಿ ರುದ್ರದೇವನಿಗೆ ಕೊಟ್ಟರೆ ನಾನು ನಿಶ್ಚಯವಾಗಿ ಪ್ರಾಣತ್ಯಾಗ ಮಾಡುವೆನು.

ತಾಯಿಯ ಮಾತುಗಳನ್ನು ಕೇಳಿ ಪಾರ್ವತಿಯು ಸಂತಪ್ತಳಾದಳು. ಅವಳು ತಾಯಿಯ ಬಳಿಗೆ ಬಂದು ಸೌಮ್ಯವಾಣಿಯಿಂದ ಮಾತಾಡಿದಳು.

ಪಾರ್ವತಿ– ಮಾತೆಯೇ, ನಿನ್ನ ಬುದ್ಧಿಯು ಬಹಳೇ ವಿಪರೀತವಾಗಿದೆ. ಧರ್ಮಾವಲಂಬಿಯಾದ ನೀನು ಹೀಗೇಕೆ ಅಧರ್ಮದ ಮಾತುಗಳನ್ನಾಡ ತೊಡಗಿರುವೆ ? ರುದ್ರದೇವನು ಎಲ್ಲ ಉತ್ಪತ್ತಿಗೆ ಕಾರಣನಾದ ಈಶ್ವರನಿರುವನು. ಇವನಿಗಿಂತ ದೊಡ್ಡ ದೇವತೆಗಳು ಯಾರೂ ಇಲ್ಲ. ನೀನು ಅವನ ಈಗಿನ ರೂಪವನ್ನೂ, ಅವನ ಪರಿವಾರದ ರೂಪವನ್ನೂ ನೋಡಿ ಬೆದರಬೇಡ. ಅವನು ಪರಮ ಸುಂದರ ರೂಪದವನಿದ್ದು ಪರಮ ದಯಾಳುವಿರುವನು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಅವನ ಸೇವೆ ಮಾಡುವರು. ಬ್ರಹ್ಮಾಂಡವು ಅವನದೇ ರಚನೆಯು, ಅವನ ರಕ್ಷಣೆಗೆ ಒಳಗಾಗಿದೆ. ಅವನೇ ಪ್ರಳಯಕಾರಿಯು. ನೀನು ಚಿಂತಿಸದೆ ನನ್ನನ್ನು ಶಿವನಿಗೆ ಒಪ್ಪಿಸಿಬಿಡು. ನಾನು ಶಿವನ ಪ್ರಾಪ್ತಿಗಾಗಿ ದೀರ್ಘಕಾಲದ ವರೆಗೆ ತಪಸ್ಸು ಮಾಡಿದೆನು. ಅವನನ್ನು ಮೆಚ್ಚಿಸಿಕೊಂಡೆನು. ನಾನು ಅವನವ ಳಾಗಿರುವೆನು. ಅವನೇ ನನ್ನ ಪತಿಯು. ನಾನು ಹರನನ್ನೇ ವರಿಸಿರುವೆನು. ಇದರ ಮೇಲೆ ನಿನ್ನ ಇಚ್ಛೆಯಂತೆ ಮಾಡಬಹುದು.

ಪಾವರ್ತಿಯು ಹೀಗೆ ಹೇಳಿದ ಬಳಿಕ ಸನಕಾದಿ ಋಷಿಗಳು ಶಿವನ ಮಹಿಮೆಯನ್ನು ಮೇನಕೆಗೆ ಹೇಳಿದರು. ಭಗವಾನ್ ವಿಷ್ಣುವು ಅವಳ ಬಳಿಗೆ ಬಂದು ಶಿವನ ಸ್ವರೂಪವನ್ನು ತಿಳಿಸಿದನು. ಅವಳು ವಿಷ್ಣುವಿನ ಮಾತಿನಿಂದ ತನ್ನ ಪುತ್ರಿಯನ್ನು ಶಿವನಿಗೆ ಕೊಡಲು ಒಪ್ಪಿದಳು. ತರುವಾಯ ವಿಷ್ಣುವು ಶಂಕರನ ಬಳಿಗೆ ಬಂದು ಮಂಗಲ ಕಾರ್ಯದಲ್ಲಿ ನೀನೂ ನಿನ್ನ ಪರಿವಾರವೂ ಮಂಗಲ ರೂಪವನ್ನೇ ಧಾರಣ ಮಾಡಬೇಕು. ಶುಭಮಂಗಲ ರೂಪವೇ ನಿನ್ನ ನಿಜವಾದ ರೂಪವು, ಅದೇ ಈಗ ಪ್ರದರ್ಶಿತವಾಗಬೇಕು.

ವಿಷ್ಣುವು ಹೀಗೆ ಹೇಳಿದ ಬಳಿಕ ರುದ್ರದೇವನು ಮನ್ಮಥನಿಗಿಂತಲೂ ಸುಂದರವಾದ ರೂಪಧಾರಣೆ ಮಾಡಿದನು. ಅವನ ಎಲ್ಲ ಪರಿವಾರವೂ ಮಂಗಲ ಮಯವಾಯಿತು. ಮೇನಕೆಯು ಹಿರಿಹಿರಿ ಹಿಗ್ಗಿದಳು. ಹಿಮವಂತನ ಬಳಗದ ವರೆಲ್ಲರೂ ಪ್ರಸನ್ನರಾದರು.

ಪರ್ವತರಾಜನು ಹಿಮಾಚಲ ನಗರಿಯಲ್ಲಿ ಒಳ್ಳೆಯ ವೈಭವದಿಂದ ವಿವಾಹ ಸಮಾರಂಭವನ್ನು ನೆರವೇರಿಸಿದನು. ಪಾರ್ವತಿದೇವಿಯು ಶಂಕರನ ಕೊರಳಲ್ಲಿ ಮಾಲೆ ಹಾಕಿದಳು. ಶಿವನು ಸರ್ವಮಂಗಲೆಯ ಕೊರಳಿಗೆ ಮಾಂಗಲ್ಯ ಬಂಧನ ಮಾಡಿದನು. ಗರ್ಗಮುನಿಗಳ ಪೌರೋಹಿತ್ಯದಲ್ಲಿ ಶಿವ–ಗಿರಿಜೆಯರ

ವಿವಾಹವು ಅತ್ಯಂತ ವಿಜೃಂಭಣೆಯಿಂದ ವೇದವಿಧಾನಪೂರ್ವಕವಾಗಿ ನೆರವೇರಿತು. ಪರ್ವತರಾಜನು ಅಳಿಯನಿಗೆ ಯಥೇಷ್ಟವಾಗಿ ಉಡುಗರೆ ಕೊಟ್ಟನು.

ಇಮಾಂ ಕನ್ಯಾಂ ತುಭ್ಯಮಹಂ ದದಾಮಿ ಪರಮೇಶ್ವರ ।
ಭಾರ್ಯಾರ್ಥಂ ಪರಿಗೃಹ್ಣೀಷ್ವ ಪ್ರಸೀದ ಸಕಲೇಶ್ವರ ॥

ಪರಮೇಶ್ವರನೇ, ಈ ಕನ್ಯೆಯನ್ನು ನಿನಗೆ ನಾನು ಅರ್ಪಿಸುವೆನು. ಸಕಲೇಶ್ವರಾ, ನೀನು ಇವಳನ್ನು ಭಾರ್ಯೆಯೆಂದು ಪರಿಗ್ರಹಿಸುವ ಕೃಪೆ ಮಾಡು ಎಂದು ಹಿಮಾಲಯನು ತನ್ನ ಪುತ್ರಿಯ ಕರವನ್ನು ಭಗವಾನ್ ಶಂಕರನ ಕೈಯಲ್ಲಿ ಕೊಟ್ಟನು. ಕೂಡಲೆ ಆಕಾಶದಿಂದ ಪುಷ್ಪ ವೃಷ್ಟಿಯಾಯಿತು!

ವಿವಾಹೋತ್ತರದಲ್ಲಿ ಎಲ್ಲರೂ ತಮ್ಮ ತಮ್ಮ ಲೋಕಗಳಿಗೆ ಹೊರಡಲು ಸಿದ್ಧರಾದರು. ಶಿವನು ತನ್ನ ಪರಿವಾರದೊಡನೆ ಪ್ರಯಾಣ ಕೈಕೊಳ್ಳಲು ವಿಚಾರ ಮಾಡಿದನು.

ಮೇನಕೆ–ಕೃಪಾನಿಧಿಯೆ, ನಾನು ಅಜ್ಞಳು; ನೀನು ಸರ್ವಜ್ಞನು, ನನ್ನ ಪುತ್ರಿ ಶಿವೆಯನ್ನು ನೀನು ಪ್ರೇಮದಿಂದ ಲಾಲನೆ ಪಾಲನೆ ಮಾಡು. ನೀನು ಆಶುತೋಷನಿರುವೆ. ನನ್ನ ಅಪರಾಧಗಳನ್ನು ಕ್ಷಮಿಸು. ಜನ್ಮಜನ್ಮಾಂತರದಲ್ಲಿ ಪಾರ್ವತಿಯು ನಿನ್ನ ಪತ್ನಿಯೇ ಆಗಿರುವಳು.

ತರುವಾಯ ಮೇನಕೆಯು ಸಾಧ್ವಿಯಾದ ಬ್ರಾಹ್ಮಣಪತ್ನಿಯಿಂದ ಪಾರ್ವತಿಗೆ ಸತೀಧರ್ಮದ ಉಪದೇಶ ಮಾಡಿಸಿದಳು.

ಬ್ರಾಹ್ಮಣಪತ್ನಿ–ಗಿರಿರಾಜ ಕಿಶೋರಿ, ಸಾಧ್ವಿಪತ್ನಿಯು ಪತಿಯನ್ನು ಪರಮೇಶ್ವರನೆಂದು ಭಾವಿಸಬೇಕು. ನಿನ್ನ ಪತಿಯಂತೂ ಪರಮೇಶ್ವರನೇ ಇರುವನು. ಸಾವಿತ್ರಿ, ಲೋಪಾಮುದ್ರಾ, ಅರುಂಧತಿ, ಶಾಂಡಲಿ, ಶತರೂಪಾ, ಅನಸೂಯಾ, ಲಕ್ಷ್ಮೀ, ಸ್ವಧಾ, ಸತಿ, ಸಂಜ್ಞಾ, ಸುಮತಿ, ಶ್ರದ್ಧಾ, ಮೈನಾ, ಸ್ವಾಹಾ ಮೊದಲಾದ ಪಾವನ ಚರಿತೆಯರು ಮಹಾ ಸಾಧ್ವಿಯರಾಗಿರುವರು. ನೀನು ಈ ಪತಿವ್ರತೆಯರನ್ನು ಅನುಕರಿಸಬೇಕು.

ಯಥಾ ಗಂಗಾವಗಾಹೇನ ಶರೀರಂ ಪಾವನಂ ಭವೇತ್ ।
ತಥಾ ಪತಿವ್ರತಾಂ ದೃಷ್ಟ್ವಾ ಸಕಲಂ ಪಾವನಂ ಭವೇತ್ ॥

(ಶಿ. ಪು. ರು. ಸಂ. ಪಾ. ೫೦. ೫೪–೬೮)

ಭಗವಾನ್ ಶಂಕರನು ಪಾರ್ವತಿಯೊಡನೆ ಹೊರಡಲು ಸಿದ್ಧನಾದನು. ಗಿರಿಜಾ ಕಲ್ಯಾಣದ ಎಲ್ಲ ವಿಧಿಗಳು ಪೂರ್ತಿಗೊಂಡದ್ದರಿಂದ ವಿಷ್ಣು, ಬ್ರಹ್ಮ ದೇವೇಂದ್ರ, ಮೊದಲಾದ ದೇವತೆಗಳು ಪರ್ವತರಾಜನ ನಿರೋಪ ಹೊಂದಿ ಪ್ರಯಾಣ ಮಾಡಿದರು. ಶಿವ–ಪಾರ್ವತಿಯರು ಕೈಲಾಸಕ್ಕೆ ಬಿಜಯಂಗೈದರು.

ರುದ್ರ ಸಂಹಿತಾ : ತೃತೀಯ (ಪಾರ್ವತಿ) ಖಂಡ ಸಮಾಪ್ತ.

## ರುದ್ರ ಸಂಹಿತಾ : ಚತುರ್ಥ (ಕುಮಾರ) ಖಂಡ

# ಕುಮಾರ ಕಾರ್ತಿಕೇಯ

ಸೂತಪುರಾಣಿಕ–ಶೌನಕಾದಿ ಮಹರ್ಷಿಗಳೆ, ಗೌರೀ–ಹರರು ಕೈಲಾಸದಲ್ಲಿ ಆನಂದದಿಂದ ಕಾಲಕಳೆಯತೊಡಗಿದರು. ಭಗವಾನ್ ಮಹೇಶ್ವರನು ತಾರಕನನ್ನು ಸಂಹರಿಸುವ ಶಕ್ತಿಯುಳ್ಳ ಮಗನು ಜನಿಸಬೇಕೆಂದು ಪಾರ್ವತಿಯನ್ನು ವಿವಾಹ ವಾದನು. ಸ್ವಲ್ಪ ಕಾಲದಲ್ಲಿಯೆ ಷಣ್ಮುಖನ ಅವತಾರವಾಯಿತು. ಷಡಾನನನು ಕೃತ್ತಿಕಾದಿ ಆರು ಸ್ತ್ರೀಯರಿಂದ ಸಂರಕ್ಷಿತನಾದುದರಿಂದ ಅವನಿಗೆ ಕಾರ್ತಿಕೇಯ ನೆಂಬ ಹೆಸರು ಬಂದಿತು. ಪ್ರಾಪ್ತವಯಸ್ಕನಾದೊಡನೆ ಶಂಭುವು ಅವನಿಗೆ ಎಲ್ಲ ಶಾಸ್ತ್ರಗಳ ಅಧ್ಯಯನ ಮಾಡಿಸಿದನು. ಅನೇಕ ದಿವ್ಯಾಸ್ತ್ರಗಳ ಜ್ಞಾನವನ್ನೂ ಅವನಿಗೆ ಮಾಡಿಕೊಟ್ಟನು. ಪಾರ್ವತಿಯು ಅವನನ್ನು ಚಿರಂಜೀವಿಯನ್ನಾಗಿ ಮಾಡಿದಳು. ಲಕ್ಷ್ಮೀದೇವಿಯು ಅಲ್ಲಿಗೆ ಬಂದು, ಸಂಪತ್ತನ್ನೂ ವಿಶಾಲವೂ ಮನೋಹರವೂ ಆದ ಮಣಿಮಯಹಾರವನ್ನೂ ಕುಮಾರನಿಗೆ ಅರ್ಪಿಸಿದಳು. ಸಾವಿತ್ರಿಯು ಪ್ರಸನ್ನಳಾಗಿ ಸಿದ್ಧಿ ವಿದ್ಯೆಗಳನ್ನು ಪ್ರದಾನ ಮಾಡಿದಳು.

ಕಾರ್ತಿಕೇಯನು ಪ್ರಬುದ್ಧಾವಸ್ಥೆಗೆ ಬಂದ ಕೂಡಲೆ, ತಾರಕಾಸುರನೊಡನೆ ಸಂಗ್ರಾಮ ಮಾಡುವ ಉದ್ದೇಶದಿಂದ ಅವನನ್ನು ದೇವತೆಗಳಿಗೆ ಅರ್ಪಿಸಿದನು. ದೇವತೆಗಳು ಗುಹನನ್ನು ಸೇನಾಪತಿಯನ್ನಾಗಿ ನಿಯಮಿಸಿದರು. ಅವನಿಗೆ ಸೇನಾಪತಿಯ ಪಟ್ಟವು ಕಟ್ಟಲ್ಪಟಿತು. ದೇವಸೇನೆಯು ಯುದ್ಧಭೂಮಿಗೆ ಬಂದಿತು. ಈ ಸಂಗತಿಯನ್ನು ತಿಳಿದ ತಾರಕಾಸುರನು ತನ್ನ ಅಮೋಘ ಸೈನ್ಯದೊಡನೆ

ಶೋಣಿತಪುರವನ್ನು ಬಿಟ್ಟು ರಣಭೂಮಿಗೆ ಬಂದನು. ಭಗವಾನ್ ಶಂಕರನ ಪ್ರೇರಣೆಯಿಂದ ಆಕಾಶವಾಣಿಯಾಯಿತು.

ಆಕಾಶವಾಣಿ–ದೇವತೆಗಳೆ, ನೀವು ಕುಮಾರನನ್ನು ಸೇನಾಧಿಪತಿಯನ್ನಾಗಿ ನಿಯಮಿಸಿ, ತಾರಕಾಸುರನೊಡನೆ ಸಂಗ್ರಾಮಕ್ಕೆ ಅಣಿಯಾಗಿದ್ದೀರಿ. ಮಹಾ ಪ್ರಳಯಕಾರಿಯಾದ ಭಾವೀಸಂಗ್ರಾಮದಲ್ಲಿ ದೇವತೆಗಳಿಗೆ ವಿಜಯವು ದೊರೆಯುವದು ನಿಶ್ಚಿತವು.

ಆಕಾಶವಾಣಿಯನ್ನು ಕೇಳಿ ದೇವತೆಗಳು ಸಂಭ್ರಮಗೊಂಡರು. ಅವರಲ್ಲಿ ಉತ್ಸಾಹವು ದ್ವಿಗುಣಿತವಾಯಿತು. ಅವರು ವೀರೋಚಿತ ಗರ್ಜನೆ ಮಾಡ ತೊಡಗಿದರು. ಮಹೀನದಿಯ ಸಂಗಮದ ತಟದ ಭೂಮಿಯು ರಣರಂಗ ವಾಯಿತು. ಕುಮಾರನ ಆಧಿಪತ್ಯದಲ್ಲಿ ದೇವಸೈನ್ಯವೂ, ತಾರಕಾಸುರನ ಅಧಿಪತ್ಯದಲ್ಲಿ ಅಸುರಸೇನೆಯೂ ಮುನ್ನಡೆದವು. ಎರಡೂ ಸೈನ್ಯಗಳ ನಡುವೆ ಭಯಾನಕವಾದ ಸಂಗ್ರಾಮವು ಪ್ರಾರಂಭವಾಯಿತು. ಶ್ರೀಹರಿಯು ತಾರಕನ ಮೇಲೆ ತನ್ನ ಅದ್ಭುತವಾದ ಚಕ್ರವನ್ನು ಬಿಟ್ಟನು. ವಿಷ್ಣುವು ಚಕ್ರಪ್ರಹಾರ ಮಾಡಿದ ಕೂಡಲೆ ಬಲವಾನನಾದ ಅಸುರನಾಯಕನು ಅವನ ಚಕ್ರವನ್ನು ತುಂಡು ತುಂಡು ಮಾಡಿ ದನು. ಇಬ್ಬರೂ ಬಲವಾನರಿದ್ದರು. ಅವರು ಅತ್ಯಂತ ಶಕ್ತಿಯಿಂದ ಕಾದಾಡ ತೊಡಗಿದರು.

ಆಗ ಬ್ರಹ್ಮದೇವನು ಕುಮಾರನ ಬಳಿಗೆ ಹೋಗಿ ತಾರಕಾಸುರನು ದೊರಕಿಸಿದ ವರಗಳ ಸಂಗತಿಯನ್ನು ತಿಳಿಸಿದನು.

ಬ್ರಹ್ಮದೇವ–ಶಂಕರಸುತನಾದ ಸ್ವಾಮಿ ಕಾರ್ತಿಕೇಯಾ, ತಾರಕಾಸುರನಿಗೆ ತ್ರಿಮೂರ್ತಿಗಳಿಂದ ಮರಣವು ಸಂಭವಿಸುವದಿಲ್ಲ. ಅದರಂತೆ ನಾನು ಅವನಿಗೆ ವರ ಪ್ರದಾನ ಮಾಡಿರುವೆನು. ಪಾರ್ವತೀನಂದನಾ, ಅವನನ್ನು ಸಂಹರಿಸುವ ಸಾಮರ್ಥ್ಯವು ನಿನ್ನೊಬ್ಬನಲ್ಲಿ ಮಾತ್ರ ಇರುವದು. ಆದುದರಿಂದ ನೀನು ಶೀಘ್ರವಾಗಿ ತಾರಕಾಸುರನನ್ನು ಸಂಹರಿಸಬೇಕು. ಈ ಕಾರ್ಯಕ್ಕಾಗಿಯೆ ನೀನು ಶಂಕರನಿಂದ ಉತ್ಪನ್ನನಾಗಿರುವೆ.

ಬ್ರಹ್ಮದೇವನು ಹೀಗೆ ಹೇಳಿದ ಕೂಡಲೆ ಕಾರ್ತಿಕೇಯನು ವಿಮಾನದಿಂದ ರಣಭೂಮಿಯಲ್ಲಿಳಿದನು. ಕೂಡಲೇ ತಾರಕಾಸುರನು ಷಣ್ಮುಖನಿಗೆ ಎದುರಾದನು.

ತಾರಕಾಸುರ–ನನ್ನನ್ನು ವಧಿಸುವದಕ್ಕಾಗಿ ನೀನು ಅವತರಿಸಿ ಬಂದಿರುವೆಯಾ? ಲೇಸಾಯಿತು. ನಾನು ಎಲ್ಲ ದೇವತೆಗಳನ್ನು ಸಂಹರಿಸುವೆನು ! ನಾನು ಒಬ್ಬನೇ ಕುಮಾರನೊಡನೆ ಯುದ್ಧ ಮಾಡುವೆನು.

ಕಾರ್ತಿಕೇಯ–ತಾರಕರಲ್ಲಿ ಘನಘೋರವಾದ ಸಂಗ್ರಾಮವು ಪ್ರಾರಂಭವಾಯಿತು. ದೇವ–ದಾನವರು ಸಂಗ್ರಾಮವನ್ನು ನಿರೀಕ್ಷಣೆ ಮಾಡುತ್ತ ನಿಂತರು. ವಾಯುಸಂಚಾರವು ನಿಂತಿತು. ಭೂಮಿಯು ಕಂಪಿಸಿತು. ಸೂರ್ಯನ ಪ್ರಕಾಶವು ಕಳೆಗುಂದಿತು. ದೇವ–ದಾನವರು ಗಾಬರಿಯಾದರು. ಆಗ ಕುಮಾರನು ಎಲ್ಲರಿಗೂ ಧೈರ್ಯ ಹೇಳಿ, ತಾರಕಾಸುರನ ಮೇಲೆ ತನ್ನ ಅದ್ಭುತಶಕ್ತಿಯನ್ನು ಪ್ರಹರಿಸಿದನು. ಕೂಡಲೆ ಭೂತಲಕ್ಕೆ ಗಂಡಾಂತರಕಾರಿಯಾಗಿದ್ದ ಆ ಅಸುರನು ಗತಾಸುವಾಗಿ ಇಳೆಗುರುಳಿದನು. ಕೂಡಲೆ ದೇವದುಂದುಭಿಗಳು ಮೊಳಗಿದವು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ಎಲ್ಲ ದೇವತೆಗಳೂ ಕಾರ್ತಿಕೇಯನನ್ನು ಸ್ತುತಿಸತೊಡಗಿದರು. ತರುವಾಯ ಎಲ್ಲ ಪ್ರಮುಖ ದೇವತೆಗಳೂ ವಿಮಾನಾರೂಢರಾಗಿ ಜಯಜಯಕಾರ ಮಾಡುತ್ತ ಕೈಲಾಸಕ್ಕೆ ಪ್ರಯಾಣ ಮಾಡಿದರು.

ದೇವತೆಗಳು ವಿಜಯದುಂದುಭಿಯನ್ನು ಮೊಳಗಿಸುತ್ತ ಕೈಲಾಸವನ್ನು ತಲುಪಿದರು. ತನ್ನ ಕುಮಾರನಾದ ಸ್ಕಂದನು ತಾರಕಾಸುರನನ್ನು ಸಂಹರಿಸಿ, ದೇವತೆಗಳಿಗೆ ವಿಜಯವನ್ನು ಸಂಪಾದಿಸಿಕೊಟ್ಟು, ಜಗತ್ತಿನ ಗಂಡಾಂತರ ನಿವಾರಣೆ ಮಾಡಿದ್ದರಿಂದ ಶಿವನಿಗೆ ಸಂತಸವಾಯಿತು. ತನ್ನ ತಪವು ಸಾರ್ಥಕವಾಯಿತೆಂದು ಗಿರಿಜೆಯೂ ಸಂತುಷ್ಟಳಾದಳು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳು ಶಿವನನ್ನು ಬಹುಪರಿಯಾಗಿ ಕೊಂಡಾಡಿದರು; ಶಂಕರನಂದನ ಕುಮಾರನನ್ನೂ ಸ್ತುತಿಸಿದರು. ತರುವಾಯ ದೇವತೆಗಳು ಮಹಾದೇವನ ನಿರೋಪ ಹೊಂದಿ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

## ಮಂಗಲಮೂರ್ತಿ ಕುಮಾರ ಗಣೇಶ

ಸೂತಪುರಾಣಿಕ–ಶೌನಕಾದಿ ಮಹರ್ಷಿಗಳೆ, ತಾರಕಾರಿಯಾದ ಕುಮಾರ ಕಾರ್ತಿಕೇಯನ ಚರಿತ್ರವನ್ನು ಕೇಳಿದಿರಿ. ಬ್ರಹ್ಮದೇವನು ನಾರದಮಹರ್ಷಿಗೆ ಹೇಳಿದ ಗಣೇಶಕುಮಾರನ ಕತೆಯನ್ನು ಕೇಳಿರಿ.

ಪಾರ್ವತಿಯ ಸಖಿಯರಾದ ಜಯೆ-ವಿಜಯೆರು ಅವಳ ಬಳಿಗೆ ಬಂದು ಮಾತಾಡುತ್ತ ಕುಳಿತಾಗ ಪ್ರಮಥ ಗಣಗಳ ಬಗ್ಗೆ ಪ್ರಸ್ತಾಪವೆತ್ತಿದರು.

ಜಯೆ-ವಿಜಯೆರು-ದೇವಿ, ಕೈಲಾಸದಲ್ಲಿ ಅಸಂಖ್ಯ ಪ್ರಮಥ ಗಣಗಳಿದ್ದಾರೆ. ಅವರೆಲ್ಲರೂ ವಿಶೇಷವಾಗಿ ಶಿವನ ಪಕ್ಷಪಾತಿಗಳೂ, ಶಿವಾಜ್ಞಾಪರಿಪಾಲಕರೂ ಆಗಿರುವರು. ಕೇವಲ ನಿನ್ನ ಪಕ್ಷದವರೆಂಬವರು ಯಾರೂ ಇಲ್ಲ. ಆದುದರಿಂದ ಕೇವಲ ನಿನ್ನ ಪಕ್ಷಪಾತಿಯಾಗುವಂತಹ ಒಬ್ಬ ಗಣನನ್ನು ನೀನು ಉತ್ಪನ್ನ ಮಾಡಬೇಕು.

ಪಾರ್ವತಿ-ನಿಮ್ಮ ಹೇಳಿಕೆಯಂತೆ ನಾನು ಒಬ್ಬ ಮಾನಸ ಕುಮಾರನನ್ನು ನನ್ನ ಯೋಗಬಲದಿಂದ ನಿರ್ಮಿಸಿ, ಅವನನ್ನು ನನ್ನ ಅಂತಃಪುರದ ದ್ವಾರಪಾಲಕನನ್ನು ಮಾಡುವೆನು.

ಜಗಜ್ಜನನಿ ಪಾರ್ವತಿದೇವಿಯು ಸ್ನಾನಕ್ಕೆ ಕುಳಿತಾಗ ಮಹಾದೇವನು ಆಕಸ್ಮಿಕವಾಗಿ ಅಂತಃಪುರವನ್ನು ಪ್ರವೇಶಿಸಿದನು. ಅವನು ಸ್ನಾನಕ್ಕೆ ಕುಳಿತ ಪಾರ್ವತಿಯ ಬಳಿಗೆ ಬಂದನು. ಶಿವನನ್ನು ಕಂಡು ಅವಳು ನಾಚಿದಳು. ಅವಳು ಸ್ನಾನಗೃಹದಿಂದ ಹೊರಬಿದ್ದಳು. ಒಬ್ಬ ದ್ವಾರಪಾಲಕನನ್ನು ಉತ್ಪನ್ನ ಮಾಡುವದೇ ಉಚಿತವಾದ ಮಾರ್ಗವೆಂದು ಅವಳು ಭಾವಿಸಿದಳು. ಕೂಡಲೆ ಆ ಮಾಯಾದೇವಿಯು ತನ್ನ ಯೋಗಬಲದಿಂದ ಈ ಕಾರ್ಯವನ್ನು ನೆರವೇರಿಸಿಕೊಳ್ಳಬೇಕೆಂದು ನಿರ್ಧಾರ ಮಾಡಿದಳು. ಅವಳು ತನ್ನ ಮೈಯಲ್ಲಿಯ ಮೃತ್ತಿಕೆಯ ಅಂಶದಿಂದ ಒಬ್ಬ ಬಾಲಕನನ್ನು ನಿರ್ಮಾಣ ಮಾಡಿ ಪ್ರಾಣಪ್ರತಿಷ್ಠೆ ಮಾಡಿದಳು. ಅವಳು ತನ್ನ ಕುಮಾರನಿಗೆ ಮಂಗಲಮೂರ್ತಿ ಕುಮಾರ 'ಗಣೇಶ' ಎಂಬ ಹೆಸರಿಟ್ಟಳು.

ಗಣೇಶ-ಮಾತೆ, ನಾನು ನಿನ್ನ ಯಾವ ಕಾರ್ಯವನ್ನು ನೆರವೇರಿಸಲಿ?

ಪಾರ್ವತಿ-ಮಗು, ನೀನು ನನ್ನ ಪುತ್ರನು. ಇಂದಿನಿಂದ ನೀನು ನನ್ನ ದ್ವಾರಪಾಲಕನಾಗಿರುವೆ. ನನ್ನ ಆಜ್ಞೆಯಿಲ್ಲದೆ ಮಂದಿರದೊಳಗೆ ಯಾರನ್ನೂ ಬಿಡಲಾಗದು.

ಗಣೇಶನು 'ತಥಾಸ್ತು' ಎಂದು ಹೇಳಿದ ಬಳಿಕ ಗಿರಿಜೆಯು ಪುತ್ರನ ಕೈಯಲ್ಲಿ ಒಂದು ದಂಡವನ್ನು ಕೊಟ್ಟಳು. ಗಣೇಶನು ಅದನ್ನು ತೆಗೆದುಕೊಂಡು ಬಾಗಿಲು

ಕಾಯತೊಡಗಿದನು. ಸುಂದರನಾದ ಮಾನಸ ಪುತ್ರನನ್ನು ಕಂಡು ಮಹಾದೇವಿಯು ಅವನ ಬಳಿಗೆ ಬಂದು ಒಳ್ಳೆಯ ಪ್ರೇಮದಿಂದ ಮುಖವನ್ನು ಚುಂಬಿಸಿದಳು. ತರುವಾಯ ಅವಳು ಗಣೇಶನನ್ನು ದ್ವಾರಪಾಲಕನನ್ನಾಗಿ ನಿಯಮಿಸಿ, ಯಾರನ್ನೂ ಒಳಗೆ ಬಿಡಕೂಡದೆಂದು ಆಜ್ಞಾಪಿಸಿ, ಜಯೆ-ವಿಜಯೆರೊಡನೆ ಸ್ನಾನಗೃಹಕ್ಕೆ ಸ್ನಾನಮಾಡಲು ಹೋದಳು. ಸ್ವಲ್ಪ ವೇಳೆಯಲ್ಲಿ ಲೀಲಾನಾಟಕ ಸೂತ್ರಧಾರಿಯಾದ ಮಹಾದೇವನು ಹೊರಗಿನಿಂದ ಬಂದನು. ಅವನು ದ್ವಾರದಬಳಿಯಲ್ಲಿ ಬಂದ ಕೂಡಲೆ ಗಣೇಶನು ತನ್ನ ದಂಡವನ್ನು ಅಡ್ಡ ಹಿಡಿದನು.

ಗಣೇಶ-ದೇವಾ, ನಾನು ಪಾರ್ವತಿನಂದನ ಮಹಾವೀರ ಗಣೇಶನು. ಮಾತೆಯು ಸ್ನಾನಕ್ಕಾಗಿ ಒಳಗೆ ಹೋಗಿರುವಳು. ಈ ಸಮಯದಲ್ಲಿ ನೀನು ಇಲ್ಲಿಂದ ಹೊರಟುಹೋಗು.

ಶಿವ-ಶಿವಗಣರು ರಕ್ಷಕರಾಗಿಯೂ ದ್ವಾರಪಾಲಕರಾಗಿಯೂ ಇರುವರು. ನೀನು ತಮ್ಮ ಗಣಗಳಲ್ಲೊಬ್ಬನೆಂದು ಭಾವಿಸಿ ಅವರು ಸುಮ್ಮನೆ ಇರುವರು. ಇಲ್ಲದಿದ್ದರೆ ನಿನ್ನನ್ನು ದೂಡಿಬಿಡುತ್ತಿದ್ದರು. ನೀನು ಇಲ್ಲಿಂದ ಹೊರಟುಹೋಗು ನೀನು ಛಲಕ್ಕೆ ಬಿದ್ದರೆ ಪ್ರಾಣಕ್ಕೆರವಾಗುವೆ !

ಮಹಾವೀರಾಧಿವೀರನಾದ ಗಣೇಶನು ಶಿವನ ಗರ್ಜನೆಗೆ ಸೊಪ್ಪು ಹಾಕಲಿಲ್ಲ. ಮಹೇಶ್ವರನನ್ನೂ ದ್ವಾರಪಾಲಕ ಶಿವಗಣರನ್ನೂ ಬಾಗಿಲದ ಸಮೀಪಕ್ಕೆ ಬರಗೊಡಲಿಲ್ಲ.

ಶಿವ-ಈ ಉದ್ಧಟ ಬಾಲಕನನ್ನು ದೂಡಿ ಹೊರಗೆ ಹಾಕಿರಿ !

ಗಣೇಶನು ಶಿವಗಣಗಳಿಗೆ ಮಣಿಯಲಿಲ್ಲ. ತನ್ನ ದಂಡದಿಂದ ಅವರನ್ನು ಓಡಿಸಿಬಿಟ್ಟನು. ಕೂಡಲೆ ಶಿವನು ರೊಚ್ಚಿಗೆದ್ದು ತನ್ನ ಪಾರ್ಷದರನ್ನು ಕರೆಯಿಸಿದನು. ಜಗನ್ಮಾತೆ ಜಗದಂಬೆಯ ಅನುಗ್ರಹದಿಂದ ಗಣೇಶನು ತುಮುಲವಾದ ಕಾಳಗ ನಡೆಸಿದನು. ಶಿವಗಣರೆಲ್ಲರೂ ಪಲಾಯನ ಮಾಡಿದರು. ಆಗ ರುದ್ರದೇವನು ಸಂತಪ್ತನಾಗಿ ಉಮೆಯ ಮಾನಸ ಪುತ್ರನ ಶಿರವನ್ನು ತನ್ನ ತ್ರಿಶೂಲದಿಂದ ಕತ್ತರಿಸಿ ಬಿಟ್ಟನು.

ಮಹೇಶ್ವರನು ತನ್ನ ಬಾಲಕನನ್ನು ಸಂಹರಿಸಿದ ವಾರ್ತೆಯು ಪಾರ್ವತಿಗೆ ತಲುಪಿತು. ಕೂಡಲೆ ಅವಳು ಅತ್ಯಂತ ಕ್ರುದ್ಧಳಾಗಿ, ಪುತ್ರವಧೆಯ ಸೇಡು

ತೀರಿಸಿಕೊಳ್ಳಲು ಅನೇಕ ಶಕ್ತಿದೇವತೆಗಳನ್ನು ನಿರ್ಮಾಣ ಮಾಡಿದಳು. ಶಿವಗಣಕ್ಕೂ ಶಕ್ತಿ ಗಣಕ್ಕೂ ನಡುವೆ ನಿಕರವಾದ ಕಾಳಗವು ನಡೆಯಿತು. ಇದೊಂದು ಮಹಾ ಪ್ರಳಯವೇ ಎಂದು ದೇವತೆಗಳಿಗೆ ಭಾಸವಾಯಿತು. ಶಕ್ತಿ ದೇವತೆಗಳು ಶಿವಗಣವನ್ನು ಓಡಿಸಿದರು. ಆಗ ದೇವತೆಗಳೂ ಋಷಿಗಳೂ ನಾರದ ಮುನಿಯನ್ನು ಮುಂದೆ ಮಾಡಿಕೊಂಡು ಭಗವತಿ ಉಮಾದೇವಿಯ ಬಳಿಗೆ ಬಂದು ಅವಳಿಗೆ ವಂದಿಸಿದರು.

ನಾರದ–ಜಗದಂಬೆ, ನಿನಗೆ ಅನಂತ ಪ್ರಣಾಮಗಳು. ನೀನು ಶಾಂತಳಾಗು. ನಾವೆಲ್ಲರೂ ನಿನಗೆ ಶರಣು ಬಂದಿರುವೆವು.

ಪಾರ್ವತಿ–ದೇವರ್ಷಿ ನಾರದಾ, ಮಹರ್ಷಿಗಳೆ, ದೇವತೆಗಳೆ, ನನ್ನ ಪುತ್ರನು ಜೀವಂತವಾಗಬೇಕು. ಅವನು ಸರ್ವರಿಗೂ ಪೂಜನೀಯನಾಗಬೇಕು. ಅವನನ್ನು ಪೂಜಿಸದ ಹೊರತು ಯಾವ ಕಾರ್ಯವೂ ಆರಂಭವಾಗಬಾರದು. ಅವನು ಶುಭ ದೇವತೆಯಾಗಬೇಕು. ವಿಘ್ನಗಳನ್ನು ನಾಶ ಮಾಡುವ ಸಾಮರ್ಥ್ಯವು ಅವನಲ್ಲಿ ಉಂಟಾಗಬೇಕು. ಇಷ್ಟು ಕಾರ್ಯಗಳು ಆದ ಹೊರತು ಭೂಮಂಡಲ ದಲ್ಲಿ ಯಾರಿಗೂ ಸೌಖ್ಯವು ದೊರೆಯಲಾರದು. ಇದು ನನ್ನ ಅಚಲವಾದ ಕಟ್ಟಳೆಯು !

ಗಿರಿಜಾದೇವಿಯು ಹೀಗೆ ಹೇಳಿದ ಕೂಡಲೆ ಇಂದ್ರಾದಿ ದೇವತೆಗಳು ದಿಙ್ಮೂಢರಾದರು. ಅವರು ಶಂಕರನ ಬಳಿಗೆ ಬಂದು ಎಲ್ಲ ಸಂಗತಿಯನ್ನು ನಿವೇದಿಸಿದರು. ಜಗದಂಬೆಯ ಕೋಪದಿಂದ ಸೃಷ್ಟಿಯು ಧ್ವಂಸವಾಗದಂತೆ ರಕ್ಷಿಸಬೇಕೆಂದು ಅವರು ರುದ್ರದೇವನಿಗೆ ಬೇಡಿಕೊಂಡರು.

ಶಿವ–ಗಣೇಶನನ್ನು ನಾನು ಬದುಕಿಸುವೆನು. ಅವನ ಶಿರವು ದೊರೆಯು ವದು ಅಸಂಭವವು. ನೀವು ಉತ್ತರ ದಿಶೆಗೆ ಹೋಗಿ, ಯಾವ ಜೀವಿಯು ಮೊದಲು ದೊರೆಯುವದೋ ಅದರ ಶಿರವನ್ನು ತೆಗೆದುಕೊಂಡು ಬರ್ರಿ. ಆ ಜೀವಿಯ ಶಿರವನ್ನು ಗಣೇಶನ ದೇಹಕ್ಕೆ ಹಚ್ಚಿದ ಕೂಡಲೆ ಅವನು ಜೀವಂತವಾಗುವನು.

ತರುವಾಯ ದೇವತೆಗಳು ಉತ್ತರದಿಕ್ಕಿಗೆ ತೆರಳಿದರು. ಅವರಿಗೆ ಮೊದಲು ಭೆಟ್ಟಿಯಾದದ್ದು ಒಂದು ಆನೆಯು. ಅವರು ಆ ಆನೆಯ ರುಂಡವನ್ನು ಕತ್ತರಿಸಿ ತಂದರು. ಶಿವನು ಗಜಶಿರವನ್ನು ಬಾಲಕನ ದಿಂಭಕ್ಕೆ ಹಚ್ಚಿದನು. ಋಷಿಗಳು

ಪ್ರಾಣಪ್ರತಿಷ್ಠೆಯ ವೇದಮಂತ್ರಗಳನ್ನು ಘೋಷಿಸತೊಡಗಿದರು. ಶಿವನ ನಾಮಸ್ಮರಣೆ ಮಾಡುತ್ತ ಅವರು ಮಂತ್ರಜಲ ಸಿಂಚನ ಮಾಡಿದರು. ಸರ್ವ ಬ್ರಹ್ಮಾಂಡವನ್ನು ಜೀವಮಯ ಮಾಡಿದ ಭಗವಾನ್ ಮೃತ್ಯುಂಜಯನು ಗಣೇಶನ ಪಾರ್ಥಿವ ದೇಹದಲ್ಲಿ ಪ್ರಾಣಸಂಚಾರ ಮಾಡಿಸಿದನು ! ಕೂಡಲೇ ಗಣಪತಿಯು ಮಾತೆಯಾದ ಅಂಬಿಕೆಗೂ, ತಂದೆಯಾದ ಶಂಕರನಿಗೂ ಪ್ರಣಾಮಗಳನ್ನರ್ಪಿಸಿದನು.

ಪಾರ್ವತಿ–ಮಂಗಲಮೂರ್ತಿ ಗಣೇಶಾ, ಎಲ್ಲ ದೇವತೆಗಳಲ್ಲಿ ಮೊದಲು ನಿನ್ನ ಅಗ್ರಪೂಜೆಯಾಗಲಿ ! ಎಂದು ವರವನ್ನು ಕೊಟ್ಟಳು. ತರುವಾಯ ಅವಳು ತನ್ನ ಪ್ರೇಮದ ಕುಮಾರನನ್ನು ಮಹಾದೇವನಿಗೆ ಒಪ್ಪಿಸಿದಳು. ಮಹಾದೇವನು ಗಣೇಶನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಮುದ್ದಾಡಿದನು. ದೇವಿಯು ತನ್ನ ಕುಮಾರ ಗಣೇಶನನ್ನು ನಾನಾಪ್ರಕಾರದ ವಸ್ತ್ರಾಲಂಕಾರಗಳಿಂದ ಅಲಂಕೃತಗೊಳಿಸಿದಳು. ಶಿವನು ತನ್ನ ಬಾಲಕನ ತಲೆಯ ಮೇಲೆ ತನ್ನ ಹಸ್ತವನ್ನಿಟ್ಟನು.

ತ್ರಿಮೂರ್ತಿಗಳು–ಈ ಬಾಲಕ ಗಣೇಶನು ಮಂಗಲಕರನಾದ ದೇವತೆಯು, ಇವನು ವಿಘ್ನ ನಾಶಕನಾಗುವನು. ಎಲ್ಲ ದೇವತೆಗಳು ಪೂಜೆಗೊಳ್ಳುವಂತೆ ಇವನೂ ಸರ್ವರಿಗೆ ಪೂಜ್ಯನಾಗುವನು. ಗಣಪತಿಯ ಪೂಜೆಯಿಂದ ಶುಭಾರಂಭವಾಗಬೇಕು. ಇವನ ಪೂಜೆಯಿಲ್ಲದೆ ಮಾಡಲ್ಪಡುವ ಕಾರ್ಯಗಳು ಸಿದ್ಧಿಯಾಗುವದಿಲ್ಲ. ಇವನ ಪೂಜೆಯಿಲ್ಲದೆ ಅನ್ಯ ದೇವತೆಗಳ ಪೂಜೆಯು ನಡೆದರೆ ಆ ಪೂಜೆ ನಿಷ್ಫಲವಾಗುವದು.

ಮಹೇಶ್ವರ–ಗಣೇಶ್ವರಾ, ಭಾದ್ರಪದಮಾಸ ಕೃಷ್ಣಪಕ್ಷದ ಚತುರ್ಥಿಯ ತಿಥಿಯಲ್ಲಿ ಚಂದ್ರಮನ ಶುಭೋದಯವಾದ ಬಳಿಕ ನೀನು ಉತ್ಪನ್ನನಾಗಿರುವೆ. ಈ ದಿನ ಗಿರಿಜೆಯ ಸುಂದರ ಚಿತ್ತದಿಂದ ನಿನ್ನ ರೂಪವು ಪ್ರಕಟವಾಗಿರುವದು. ಆ ದಿನದಿಂದ ಆರಂಭ ಮಾಡಿ ಅದೇ ತಿಥಿಯ ದಿನ ಹದಿಮೂರು ಉತ್ತಮ ವ್ರತಗಳನ್ನು ನೆರವೇರಿಸಬೇಕು. ಹೀಗೆ ಪೂಜಾ ವಿಧಾನವನ್ನು ಮಾಡಿದರೆ ಸಿದ್ಧಿ ವಿನಾಯಕನು ಸರ್ವ ಸಿದ್ಧಿಗಳನ್ನು ಒದಗಿಸಿಕೊಡುವನು. ಧಾತುವಿನಿಂದ ಇಲ್ಲವೆ ಮೃತ್ತಿಕೆಯಿಂದ ಗಣೇಶನ ಪ್ರತಿಮೆಯನ್ನು ಮಾಡಿ ಪೂಜಿಸಬೇಕು. ಸಂಕಷ್ಟ ಹರಚತುರ್ಥಿಯ ವ್ರತವು ಸಮಾಪ್ತಿಯಾದ ಬಳಿಕ ಉದ್ಯಾಪನೆ ಮಾಡಿ ಬ್ರಾಹ್ಮಣರಿಗೆ ಭೋಜನ ಕೊಡಬೇಕು.

ಮಹಾದೇವನು ಹೀಗೆ ಹೇಳಿದ ಬಳಿಕ ಎಲ್ಲ ಋಷಿ-ಮಹರ್ಷಿಗಳೂ ದೇವತೆಗಳೂ ತಮ್ಮ ತಮ್ಮ ಸ್ಥಾನಗಳಿಗೆ ಹೊರಟುಹೋದರು.

ಶಿವ-ಪಾರ್ವತಿಯರು ಕುಮಾರಕಾರ್ತಿಕೇಯ, ಕುಮಾರ ಗಣೇಶ ಈ ಇಬ್ಬರು ಪುತ್ರರ ಬಾಲಲೀಲೆಗಳನ್ನು ನೋಡುತ್ತ ಆನಂದದಿಂದ ಇರತೊಡಗಿದ್ದರು. ಕಾಲಕ್ರಮದಿಂದ ಇಬ್ಬರೂ ಬಾಲಕರು ಬೆಳೆದು ದೊಡ್ಡವರಾಗಿ ವಿವಾಹ ಯೋಗ್ಯರಾದರು. ಮೊದಲು ಯಾರ ವಿವಾಹವನ್ನು ಮಾಡಬೇಕೆಂಬ ವಿಚಾರವುಂಟಾಯಿತು. 'ನನ್ನ ವಿವಾಹವು ಮೊದಲು, ನನ್ನ ವಿವಾಹವು ಮೊದಲು' ಎಂದು ಷಣ್ಮುಖ, ಗಣಪತಿ ಇವರಲ್ಲಿ ವಾದವು ಪ್ರಾರಂಭವಾಯಿತು. ಆಗ ಅವರ ತಾಯಿ ಮಹಾದೇವಿಯು ಇಬ್ಬರೂ ಮಕ್ಕಳನ್ನು ತನ್ನ ಜಾಣ್ಮೆಯಿಂದ ಸಾಂತ್ವನ ಪಡಿಸಿದಳು. ಪೃಥ್ವಿಯ ಪ್ರದಕ್ಷಿಣೆಯನ್ನು ಯಾರು ಮೊದಲು ಮುಗಿಸಿಕೊಂಡು ಬರುವರೋ ಅವರ ವಿವಾಹವು ಮೊದಲು ಎಂದು ಪಾರ್ವತಿಯು ಇಬ್ಬರೂ ಮಕ್ಕಳಿಗೆ ಹೇಳಿದಳು. ಕೂಡಲೆ ಷಣ್ಮುಖನು ಮಯೂರ ವಾಹನನಾಗಿ ಪೃಥ್ವಿಯ ಪ್ರದಕ್ಷಿಣೆಗೆ ದ್ರುತಗತಿಯಿಂದ ಹೊರಟನು. ಗಣೇಶನು ಅಲ್ಲಿಯೇ ನಿಂತಿದ್ದನು. ಷಣ್ಮುಖನು ಹೋದ ಕೂಡಲೆ ಅವನು ಗಂಗೆಯಲ್ಲಿ ಮಿಂದು ಮಾತಾ-ಪಿತೃಗಳನ್ನು ಪೂಜಿಸಿ ಪ್ರದಕ್ಷಿಣೆಯನ್ನು ಹಾಕಿ ವಂದಿಸಿದನು.

ಪಾರ್ವತಿ, ಪರಮೇಶ್ವರರು-ಪುತ್ರಾ, ನೀನು ಭೂಪ್ರದಕ್ಷಿಣೆಗೆ ಯಾವಾಗ ಹೊರಡುವೆ? ಕುಮಾರನು ಹೋಗಿ ಬಹಳ ವೇಳೆಯಾಯಿತು. ನೀನು ಬೇಗ ಹೊರಡು. ನೀನು ಅವನಿಗಿಂತ ಮೊದಲು ಬಂದರೆ ನಿನ್ನ ವಿವಾಹವೇ ಮೊದಲು ಆಗುವದು.

ಗಣೇಶ-ಮಾತಾ-ಪಿತೃಗಳೆ, ವೇದಶಾಸ್ತ್ರಗಳ ಪರಿಜ್ಞಾನವಿಲ್ಲದವರಂತೆ ನೀವು ಹೇಳುವಿರಲ್ಲ! ಮಾತಾ-ಪಿತೃಗಳ ಪ್ರದಕ್ಷಿಣೆ ಮಾಡಿದರೆ ಪೃಥ್ವೀಪರಿಕ್ರಮ ಜನಿತ ಫಲವು ದೊರೆಯುವದೆಂದು ಶಾಸ್ತ್ರಗಳಲ್ಲಿ ಹೇಳಿಲ್ಲವೆ ? ಪುತ್ರರಿಗಾಗಿ ಮಾತಾ-ಪಿತೃಗಳೂ. ಸತಿಗಾಗಿ ಪತಿಯೂ ತೀರ್ಥಸಮಾನರು.

ಶಿವಾ, ಶಿವರು-ಗಣನಾಯಕಾ, ನೀನು ಬುದ್ಧಿವಂತರಲ್ಲಿ ಶ್ರೇಷ್ಠನಿರುವೆ !

ತರುವಾಯ ಪಾರ್ವತಿ-ಪರಮೇಶ್ವರರು ಸಿದ್ಧಿ ಹಾಗೂ ಬುದ್ಧಿ ಎಂಬ ಕನ್ಯೆಯರೊಡನೆ ಗಣಪತಿಯ ವಿವಾಹ ಮಂಗಲ ಮಹೋತ್ಸವವನ್ನು ವಿಜೃಂಭಣೆ

ಯಿಂದ ನೆರವೇರಿಸಿದರು. ಗಣೇಶಪತ್ನಿ ಸಿದ್ಧಿಯಿಂದ ಕ್ಷೇಮನೆಂಬ ಪುತ್ರನೂ, ಬುದ್ಧಿಯೆಂಬ ಪತ್ನಿಯಿಂದ ಲಾಭ ಎಂಬ ಪುತ್ರನೂ ಜನಿಸಿದರು.

ದೇವರ್ಷಿನಾರದನಿಂದ ಗಣಪತಿಯ ವಿವಾಹ ಸಮಾರಂಭದ ವಾರ್ತೆಯು ಕುಮಾರ ಕಾರ್ತಿಕೇಯನಿಗೆ ತಿಳಿಯಿತು. ಆಗ ಅವನು ಕ್ರುದ್ಧನಾಗಿ ಕ್ರೌಂಚ ಪರ್ವತಕ್ಕೆ ತೆರಳಿದನು. ಕುಮಾರ ಕಾರ್ತಿಕೇಯನು ಕೊನೆಗೂ ಕುಮಾರನಾಗಿಯೇ ಉಳಿದನು. ಪಾರ್ವತಿ–ಪರಮೇಶ್ವರರು ಷಣ್ಮುಖನ ದರ್ಶನಕ್ಕಾಗಿ ಹೋಗಹತ್ತಿದರು. ಅಮಾವಾಸ್ಯೆಯ ದಿನ ಪರಮೇಶ್ವರನೂ ಪೌರ್ಣಿಮೆಯ ದಿನ ಪಾರ್ವತಿಯೂ ಕ್ರೌಂಚ ಪರ್ವತಕ್ಕೆ ಹೋಗಿ ಪುತ್ರನ ಭೆಟ್ಟಿಯನ್ನು ತೆಗೆದುಕೊಂಡು ಆನಂದಪಡ ಹತ್ತಿದರು.

ರುದ್ರ ಸಂಹಿತಾ : ಚತುರ್ಥ (ಕುಮಾರ) ಖಂಡ ಸಮಾಪ್ತ.

## ರುದ್ರ ಸಂಹಿತಾ : ಪಂಚಮ (ಯುದ್ಧ) ಖಂಡ

# ತ್ರಿಪುರ ದಹನ

ಶಿವಕುಮಾರನಾದ ಸ್ಕಂದನು ತಾರಕಾಸುರನನ್ನು ಸಂಹರಿಸಿದ ಬಳಿಕ ತಾರಕನ ಪುತ್ರರಾದ ತಾರಕಾಕ್ಷ, ವಿದ್ಯುನ್ಮಾಲಿ, ಕಮಲಾಕ್ಷರು ಅತ್ಯಂತ ಸಂತಪ್ತ ರಾದರು. ಅವರು ದೇವತೆಗಳ ಮೇಲಿನ ಸೇಡಿಗಾಗಿ ಚಡಪಡಿಸತೊಡಗಿದರು. ತಪಸ್ಸಿನಿಂದ ಬ್ರಹ್ಮದೇವನನ್ನು ಒಲಿಸಿಕೊಂಡು ಅಜೇಯರಾಗುವಂತೆ ವರ ಪಡೆದು ಎಲ್ಲ ದೇವತೆಗಳನ್ನು ಸದೆಬಡಿಯಬೇಕೆಂದು ಯೋಚಿಸಿದರು. ಮೂವರೂ ಬಂಧುಗಳು ಮೇರು ಪರ್ವತದ ಒಂದು ಕಂದರದಲ್ಲಿ ಬ್ರಹ್ಮದೇವನನ್ನು ಕುರಿತು ತಪಶ್ಚರ್ಯ ಮಾಡತೊಡಗಿದರು. ಬ್ರಹ್ಮದೇವನು ಅವರ ತಪಸ್ಸಿಗೆ ಮೆಚ್ಚಿ ವರವನ್ನು ಕೇಳಿಕೊಳ್ಳಲು ತಿಳಿಸಿದನು.

ಆಗ ಮೂವರೂ ದೈತ್ಯರು ತಾವು ಅಜೇಯರೂ, ಅಮರರೂ ಆಗಬೇಕೆಂದು ಬ್ರಹ್ಮದೇವನಲ್ಲಿ ವರಯಾಚನೆ ಮಾಡಿದರು.

ತ್ರಿಪುರರು–ಪಿತಾಮಹಾ, ನಾವು ಅವಧ್ಯರಾಗಬೇಕು; ಜರಾ, ರೋಗ ರುಜಿನಗಳಿಂದ ಮುಕ್ತರಾಗಬೇಕು. ಮೃತ್ಯುವು ನಮ್ಮ ನೆರಳಿಗೆ ಕೂಡ ಬರಕೂಡದು.

ನಾವು ಸರ್ವತ್ರ ಅಜೇಯರಾಗಬೇಕು; ಅಜರರೂ ಅಮರರೂ ಆಗಬೇಕು. ನಮಗಾಗಿ ಆಕಾಶದಲ್ಲಿ ಮೂರು ಪಟ್ಟಣಗಳು ನಿರ್ಮಾಣವಾಗಿ ನಮಗೆ ದೊರೆಯಬೇಕು.

ಬ್ರಹ್ಮದೇವ–ತ್ರಿಪುರಾಸುರರೆ, ಅಮರತ್ವವು ಭಗವಾನ್ ಶಿವನ ಹೊರತು ಯಾರಿಗೂ ದೊರೆಯುವದಿಲ್ಲ. ನೀವು ಆ ವಿಚಾರವನ್ನು ಬಿಟ್ಟು ಕೊಡಿರಿ. ಭೂತಳದಲ್ಲಿ ಜನಿಸಿದ ಪ್ರಾಣಿಗಳು ಅಜರವೂ ಅಮರವೂ ಆಗುವದು ಸಾಧ್ಯವೇ ಇಲ್ಲ.

ತ್ರಿಪುರರು–ಶತ್ರುಗಳಿಂದ ಸುರಕ್ಷಿತವಾಗಿರುವಂತೆ ಮೂವರಿಗೂ ಮೂರು ಬೇರೆ ಬೇರೆ ನಗರಗಳನ್ನು ಆಕಾಶದಲ್ಲಿ ನಿರ್ಮಾಣ ಮಾಡಿಕೊಡು, ಎಂದು ಮೂವರೂ ಹೇಳಿ, ತಾರಕಾಕ್ಷನು ತನ್ನ ಸಲುವಾಗಿ ಸುವರ್ಣಮಯ ನಗರವನ್ನು ಕೇಳಿಕೊಂಡನು; ಕಮಲಾಕ್ಷನು ರೌಪ್ಯನಗರವನ್ನು ಬೇಡಿದನು. ವಿದ್ಯುನ್ಮಾಲಿಯು ವಜ್ರಸಮಾನವಾಗಿ ಬಲವುಳ್ಳ ಲೋಹನಗರವನ್ನು ಕೇಳಿದನು. ಈ ನಗರಗಳು ಒಂದರ ಮೇಲೆ ಒಂದರಂತೆ ಪ್ರತ್ಯೇಕವಾಗಿದ್ದು ಜನರಿಗೆ ಗೋಚರವಾಗಬಾರದು. ಸಹಸ್ರ ವರ್ಷಗಳಾದ ಬಳಿಕ ಈ ಮೂರೂ ನಗರಗಳು ಏಕತ್ರವಾಗಿ ಕೂಡಬೇಕು. ಆಗ ಭಗವಾನ್ ಶಂಕರನು ರಥಾರೂಢನಾಗಿ ಬಂದು ಬಾಣದಿಂದ ನಗರಗಳನ್ನು ಭೇದಿಸಬೇಕು. ನಾವು ಸದಾಶಿವನ ಪರಮ ಭಕ್ತರು, ಅವನು ನಮಗೆ ವಂದನೀಯನು. ಅವನು ಪುರಗಳನ್ನು ಭೇದಿಸಿದರೂ ನಮ್ಮನ್ನು ಭಸ್ಮ ಮಾಡುವದಿಲ್ಲ.

ತರುವಾಯ ಬ್ರಹ್ಮದೇವನು ಮಯನನ್ನು ಕರೆದು, ಮೂರು ನಗರಗಳನ್ನು ನಿರ್ಮಾಣ ಮಾಡಲು ಆಜ್ಞಾಪಿಸಿ ಸತ್ಯಲೋಕಕ್ಕೆ ಪ್ರಯಾಣ ಮಾಡಿದನು. ಮಯನು ನಗರಗಳನ್ನು ನಿರ್ಮಿಸಿ ತಾನು ಅಲ್ಲಿಯೆ ನಿವಾಸ ಮಾಡಿದನು. ತಾರಕ ಪುತ್ರರು ತಮ್ಮ ತಮ್ಮ ನಗರಗಳಲ್ಲಿ ವಾಸಮಾಡಿ ಸುಖೋಪಭೋಗಗಳನ್ನು ಅನುಭವಿಸುತ್ತಲಿದ್ದರು. ಅವರು ತಮ್ಮ ಪರಾಕ್ರಮದಿಂದ ದೇವತೆಗಳನ್ನು ಜರ್ಜರಿತ ಮಾಡಿದರು. ದೇವೇಂದ್ರಾದಿ ದೇವತೆಗಳೆಲ್ಲರೂ ದೇವಲೋಕದಿಂದ ಪಲಾಯನ ಮಾಡಿದರು. ದೇವೇಂದ್ರನು ಸತ್ಯಲೋಕಕ್ಕೆ ಹೋಗಿ ಬ್ರಹ್ಮದೇವನಲ್ಲಿ ತನ್ನ ಗೋಳನ್ನು ಹೇಳಿದನು. ಬ್ರಹ್ಮದೇವನು ಇಂದ್ರಾದಿ ದೇವತೆಗಳೊಡನೆ ಪರಮೇಶ್ವರ ಉಮಾಪತಿಯ ಸನ್ನಿಧಿಗೆ ಹೋಗಿ ದೇವತೆಗಳಿಗೆ ಒದಗಿದ ಗಂಡಾಂತರವು

ದೂರವಾಗಬೇಕಾದರೆ ತ್ರಿಪುರಗಳನ್ನು ದಹಿಸಿ ಆ ಮ್ಲೇಂಛರನ್ನು ಸಂಹರಿಸ ಬೇಕೆಂದೂ ಹೇಳಿದನು. ಆ ಮೂವರೂ ದೈತ್ಯರು ತನ್ನಿಂದ ವರಗಳನ್ನು ಪಡೆದು ಬಲಾಢ್ಯರಾಗಿರುವರೆಂದೂ ತಿಳಿಸಿದನು.

ಮಹೇಶ್ವರ–ಬ್ರಹ್ಮದೇವಾ, ನನ್ನಲ್ಲಿ ಸಂಗ್ರಾಮದ ಸಾಮಗ್ರಿಯು ಏನಿರುವದು? ರಥವಿಲ್ಲ, ಧನುರ್ಬಾಣಗಳಿಲ್ಲ, ಉಪಯುಕ್ತ ಸಾರಥಿಯು ಇರುವದಿಲ್ಲ. ನಾನೇನು ಮಾಡಲಿ ?

ವಿಷ್ಣು–ದೇವತೆಗಳೆ, ಈ ಕಾರ್ಯವು ಶ್ರೀಮನ್ಮಹಾದೇವನಿಂದಲೇ ಸಾಧ್ಯವು. ನೀವು 'ಓಂ ನಮಃ ಶಿವಾಯ' ಎಂಬ ಶಿವನಾಮ ಮಂತ್ರವನ್ನು ಜಪಿಸಿ ಶಂಭುವನ್ನು ಪ್ರಸನ್ನೀಕರಿಸಿರಿ.

ದೇವತೆಗಳು ಶಿವನಾಮ ಜಪದಲ್ಲಿ ಮಗ್ನರಾದರು. ಕೆಲಕಾಲದ ಮೇಲೆ ಮೃತ್ಯುಂಜಯನು ಅವರಿಗೆ ಒಲಿದನು; ತ್ರಿಪುರಸಂಹಾರ ಕಾರ್ಯವನ್ನು ಜರುಗಿಸುವೆನೆಂದು ಅವರಿಗೆ ಆಶ್ವಾಸನೆ ನೀಡಿ ಕಳುಹಿಸಿದನು.

ವಿಶ್ವಕರ್ಮನು ದಿವ್ಯರಥವನ್ನು ಸಿದ್ಧಪಡಿಸಿ ಮಹಾದೇವನಿಗೆ ಅರ್ಪಿಸಿದನು. ಕೂಡಲೆ ಅವನು ಭದ್ರಕಾಳಿಯೊಡನೆ ಗಣಪತಿಯನ್ನು ಪೂಜಿಸಿದನು. ತರುವಾಯ ರಥಪೂಜೆ ಮಾಡಿದನು. ಬಳಿಕ ಮಹಾರಥವನ್ನು ಏರಿ ಆಕಾಶಸ್ಥ ತ್ರಿಪುರಗಳ ಕಡೆಗೆ ವೇಗದಿಂದ ರಥವನ್ನು ಸಾಗಿಸಿದನು. ರಥದ ಅಬ್ಬರಕ್ಕೆ ಭೂಕಂಪವಾಯಿತು. ಭಗವಾನ್ ಮಹೇಶ್ವರನು ಧನುಸ್ಸನ್ನು ಕೈಯಲ್ಲಿ ತೆಗೆದು ಕೊಂಡು ಅಗ್ನಿಪ್ರತಿಷ್ಠಾಪನೆ ಮಾಡಿದ್ದ ಬಾಣವನ್ನು ಹೂಡಿ, ತ್ರಿಪುರಗಳ ಮೇಲೆ ಪ್ರಹಾರ ಮಾಡಿದನು. ಆ ಮೂರೂ ಪುರಗಳು ಭಸ್ಮವಾಗಿ ಹೋದವು! ಮೂವರೂ ತಾರಕಪುತ್ರರು ತಮ್ಮ ಅನುಯಾಯಿಗಳ ಸಹಿತ ಭಸ್ಮವಾಗಿ ಹೋದರು. ಆ ದೈತ್ಯರು ಶಿವಭಕ್ತಿ ಪರಾಯಣರಿದ್ದುದರಿಂದ ಗಣಾಧಿಪತಿಗ ಳಾದರು. ದೈತ್ಯರ ಮಹಾಶಿಲ್ಪಿಯಾದ ಮಯನು ಶಿವನಿಗೆ ಶರಣು ಬಂದನು. ಅವನು ದೇವತೆಗಳಿಗೆ ಅವಿರೋಧಿಯಾಗಿದ್ದನು. ಆದುದರಿಂದ ಅವನು ಸುರಕ್ಷಿತವಾಗಿ ಉಳಿದನು. ಶಂಭುವು ಅವನನ್ನು ವಿತಲಲೋಕಕ್ಕೆ ಕಳುಹಿಸಿದನು.

ದೇವೇಂದ್ರನೂ, ದೇವತಗಳೂ, ಅಪ್ಸರೆಯರೂ, ಮುನಿಗಳೂ ಸಂಭ್ರಮ ದಿಂದ ಸ್ವರ್ಗಲೋಕಕ್ಕೆ ತೆರಳಿದರು.

# ಶ್ರೀ ತುಲಸಿ

ಸೂತಪುರಾಣಿಕ–ಶೌನಕ ಮಹರ್ಷಿಯೆ, ತ್ರಿಪುರಾಸುರರ ಚರಿತ್ರೆಯನ್ನು ಸನತ್ಕುಮಾರನು ವ್ಯಾಸ ಮಹರ್ಷಿಗೆ ಹೇಳಿದನು. ತರುವಾಯ ಅವನು ಜಲಂಧರ (ಶಂಖಚೂಡ) ನ ಕಥೆಯನ್ನು ವರ್ಣಿಸತೊಡಗಿದನು.

ಸನತ್ಕುಮಾರ–ವ್ಯಾಸಮುನಿಯೆ, ಬ್ರಹ್ಮಪುತ್ರನಾದ ಮರೀಚಿಯ ಪುತ್ರನು ಕಶ್ಯಪನು. ದಕ್ಷ ಪ್ರಜಾಪತಿಯು ತನ್ನ ಹದಿಮೂರು ಪುತ್ರಿಯರನ್ನು ಕಶ್ಯಪನಿಗೆ ವಿವಾಹ ಮಾಡಿಕೊಟ್ಟನು. ಅವರಲ್ಲಿದನು ಎಂಬ ಪುತ್ರಿಯ ಉದರದಿಂದ ಮಹಾ ಬಲಿಷ್ಠರಾದ ಅನೇಕ ದಾನವರು ಹುಟ್ಟಿದರು. ಅವರಲ್ಲಿ ವಿಪ್ರಚಿತ್ತಿ ಎಂಬವನು ಮಹಾ ಬಲವಾನನಾಗಿದ್ದನು. ಅವನು ಜಿತೇಂದ್ರಿಯನೂ, ಧಾರ್ಮಿಕನೂ, ಆಗಿದ್ದನು. ವಿಪ್ರಚಿತ್ತಿಯ ಪುತ್ರನು ದಂಭನು. ಇವನು ಶುಕ್ರಾಚಾರ್ಯನನ್ನು ಗುರುವನ್ನಾಗಿ ಮಾಡಿಕೊಂಡು ಅವನಿಂದ ಶ್ರೀಕೃಷ್ಣಮಂತ್ರವನ್ನು ಪ್ರಾಪ್ತ ಮಾಡಿಕೊಂಡನು. ದಂಭನು ಘೋರ ತಪಾಚರಣೆ ಮಾಡಹತ್ತಿದನು. ಅವನ ತಪೋಜ್ವಾಲೆಯು ಇಂದ್ರಲೋಕವನ್ನು ಸುಡತೊಡಗಿತು. ದೇವತೆಗಳು ಹೆದರಿ ಶ್ರೀಹರಿಗೆ ಶರಣು ಹೋದರು. ಆಗ ಹರಿಯು ದಂಭನಿಗೆ ದರ್ಶನ ಕೊಟ್ಟನು. ತಾನು ತ್ರೈಲೋಕ್ಯ ವಿಜಯಿಯಾಗಬೇಕೆಂದು ದಂಭನು ಅವನಿಂದ ವರವನ್ನು ಪಡೆದನು. ಅವನ ಪುತ್ರನಾದ ಶಂಖಚೂಡನು ಮಹಾ ಪರಾಕ್ರಮಿಯಾಗಿದ್ದನು. ಅವನು ಪ್ರಬುದ್ಧನಾದ ಬಳಿಕ ಜೈಗಿಷವ್ಯ ಮುನಿಯಿಂದ ಉಪದೇಶ ಹೊಂದಿ ಪುಷ್ಕರ ತೀರ್ಥದಲ್ಲಿ ಬ್ರಹ್ಮದೇವನನ್ನು ಸಂತುಷ್ಟಗೊಳಿಸಲು ತಪಸ್ಸು ಮಾಡ ತೊಡಗಿದನು. ಅವನು ಕೆಲವು ಕಾಲ ತಪಸ್ಸು ಮಾಡುವಷ್ಟರಲ್ಲಿ ಬ್ರಹ್ಮದೇವನು ಅವನಿಗೆ ಮೆಚ್ಚಿ ದರ್ಶನ ಕೊಟ್ಟನು. ದೇವತೆಗಳಿಗೆ ತಾನು ಅಜೇಯನಾಗ ಬೇಕೆಂದು ಶಂಖಚೂಡನು ವರವನ್ನು ಪಡೆದನು. ಬ್ರಹ್ಮದೇವನು ಅವನಿಗೆ ಶ್ರೀಕೃಷ್ಣ ಕವಚವನ್ನು ಕೊಟ್ಟು ಅದನ್ನು ಕಂಠದಲ್ಲಿ ಧಾರಣ ಮಾಡಿದರೆ ಅಜಿಂಕ್ಯ ನಾಗುವೆಯೆಂದು ಅವನಿಗೆ ವರವನ್ನು ಕೊಟ್ಟನು.

ಬ್ರಹ್ಮದೇವ–ಶಂಖಚೂಡಾ, ನೀನು ಬದರೀವನಕ್ಕೆ ಹೋಗು. ಅಲ್ಲಿ ಧರ್ಮಧ್ವಜನ ಪುತ್ರಿಯಾದ ತುಲಸಿಯು ತಪಾಚರಣೆ ಮಾಡುತ್ತಿರುವಳು. ಹಿಂದಿನ ಜನ್ಮದಲ್ಲಿ ನಿನಗೂ ಅವಳಿಗೂ ಸಂಬಂಧವಿದೆ. ನೀನು ನಿನ್ನ ಪೂರ್ವಜನ್ಮದ

ಕಥೆಯನ್ನು ಅರಿತಿರುವೆ. ತುಲಸಿಯು ಮಹಾ ಸಾಧ್ವಿಯೂ; ರೂಪವತಿಯೂ ಇರುವಳು. ನೀನು ಅವಳನ್ನು ವಿವಾಹವಾಗು.

ಬ್ರಹ್ಮದೇವನ ಹೇಳಿಕೆಯಂತೆ ಶಂಖಚೂಡನು ಬದರಿಕಾಶ್ರಮಕ್ಕೆ ಹೋದನು. ಅವನು ತಲುಸಿಯ ಬಳಿಗೆ ಹೋಗಿ ಅವಳ ರೂಪವನ್ನು ಕಂಡು ಮೋಹಿತನಾದನು.

ಶಂಖಚೂಡ–ಸುಂದರಿ, ನೀನು ಯಾರು ? ಈ ನಿಬಿಡವಾದ ವನದಲ್ಲಿ ಏಕಾಕಿಯಾಗಿ ತಪಾಚರಣೆ ಮಾಡುತ್ತಿರುವ ಕಾರಣವೇನು ?

ತುಲಸಿ–ನಾನು ಧರ್ಮಧ್ವಜನ ಕುಮಾರಿಯು. ನೀನು ಇಲ್ಲಿಗೆ ಬಂದುದೇಕೆ ? ಯಾರೂ ಇಲ್ಲದಿದ್ದಾಗ ತರುಣರು ತರುಣಿಯರ ಬಳಿಯಲ್ಲಿ ಸುಳಿಯಬಾರದು. ನೀನು ನಿನ್ನ ಅಭೀಷ್ಟ ಸ್ಥಾನಕ್ಕೆ ಹೊರಟುಹೋಗು. ನಾರಿ ಜಾತಿಯು ಪುರುಷರನ್ನು ಮೋಹವಶ ಮಾಡುವದು. ಸ್ತ್ರೀಯು ಮಾಯಾ ರೂಪಿಣಿಯೆಂಬುದನ್ನು ನೀನು ಬಲ್ಲೆ.

ಶಂಖಚೂಡ–ನೀನು ಪತಿವ್ರತೆಯರಿಗೆ ಶೋಭಿಸುವಂತಹ ಮಾತುಗಳನ್ನು ಹೇಳಿದೆ. ನಾನು ಇಲ್ಲಿಗೆ ಬಂದದ್ದು ಬ್ರಹ್ಮದೇವನ ಆಜ್ಞಾನುಸಾರವಾಗಿ. ನಿನ್ನನ್ನು ವಿವಾಹವಾಗಬೇಕೆಂದು ಅವನು ತಿಳಿಸಿದ್ದರಿಂದಲೇ ನಾನು ಇಲ್ಲಿಗೆ ಬಂದೆನು. ನೀನು ಧರ್ಮಧ್ವಜನ ಪುತ್ರಿ ತುಲಸಿಯೆಂದು ಅವನು ತಿಳಿಸಿದನು. ನೀನು ಸಕಾಮ ಭಾವದಿಂದ ತಪಶ್ಚರ್ಯ ಮಾಡತೊಡಗಿರುವಿಯೆಂಬುದನ್ನೂ ಅವನು ಹೇಳಿದ್ದಾನೆ. ನೀನು ಯಾವ ಉದ್ದೇಶದಿಂದ ತಪಸ್ಸು ಮಾಡತೊಡಗಿರುವೆ ?

ತುಲಸಿ–ನಾನು ಧರ್ಮಧ್ವಜನ ತಪಸ್ವಿನಿ ಕನ್ಯೆಯೆಂಬುದು ನಿಜವು. ನೀನು ಯಾರು ? ಯಾರಿದ್ದರೂ ನಿನ್ನ ಅಭೀಷ್ಟ ಸ್ಥಾನಕ್ಕೆ ಹೊರಟು ಹೋಗು. ನಾರಿ ಜಾತಿಯು ಬ್ರಹ್ಮಾದಿಗಳನ್ನು ಕೂಡ ಮೋಹದಲ್ಲಿ ಕೆಡಹುವದು. ಸ್ತ್ರೀಯರ ಸಹವಾಸವು ವಿಷತುಲ್ಯವೂ, ನಿಂದನೀಯವೂ, ದೋಷಜನಕವೂ ಇದ್ದು ಸ್ತ್ರೀ. ಜಾತಿಯು ಮಾಯಾರೂಪಿಣಿಯಾಗಿದೆ. ಅದು ಎಂತಹ ವಿಚಾರಶೀಲನನ್ನಾದರೂ ಬಂಧನದಲ್ಲಿ ಕೆಡಹುವದು.

ಶಂಖಚೂಡ–ದೇವಿ, ನೀನಾಡುವದೆಲ್ಲವೂ ಮಿಥ್ಯವೆಂದು ನಾನು ಅನ್ನಲಾರೆನು. ಅದರಲ್ಲಿ ಸತ್ಯಾಂಶವಿದೆ. ಶೋಭನೆ, ನೀನು ಜಗತ್ತಿನ ಪತಿವ್ರತಾ

ನಾರಿಯರಲ್ಲಿ ಅಗ್ರಗಣ್ಯಳಾಗಿರುವೆ. ನೀನು ಕಾಮಾಧೀನಳಲ್ಲವೆಂಬುದನ್ನು ನಾನು ಬಲ್ಲೆನು. ನಾನು ಬ್ರಹ್ಮದೇವನ ಆಜ್ಞೆಯಂತೆ ಇಲ್ಲಿಗೆ ಬಂದಿರುವೆನು. ಭದ್ರೆ, ನಿನ್ನನ್ನು ನಾನು ಗಾಂಧರ್ವವಿವಾಹ ವಿಧಿಯಿಂದ ಗ್ರಹಣ ಮಾಡುವೆನು. ನಾನು ದಾನವಾಧಿಪತಿಯಾದ ಶಂಖಚೂಡನು, ಹಿಂದಿನ ಜನ್ಮದಲ್ಲಿ ನಾನು ಶ್ರೀಹರಿಯ ಪಾರ್ಷದನಾದ ಸುದಾಮ ಗೋಪನು, ಗೋಲೋಕವಾಸಿಯು. ಭಗವತಿ ರಾಧಿಕಾದೇವಿಯ ಶಾಪದಿಂದ ಶಂಖಚೂಡನಾಗಿರುವೆನು. ನಿನಗೆ ನಿನ್ನ ಗತ ಜನ್ಮದ ಜ್ಞಾಪಕವುಂಟಾದರೆ ನೀನು ನನ್ನನ್ನು ನಿರಾಕರಿಸಲಾರೆ.

ತುಲಸಿ–ಭದ್ರಪುರುಷಾ, ನೀನು ನಿನ್ನ ಸಾತ್ವಿಕ ವಿಚಾರಗಳಿಂದ ನನ್ನನ್ನು ಪರಾಭವಗೊಳಿಸಿದೆ.

ತುಲಸಿಯು ಹೀಗೆ ಹೇಳುವಷ್ಟರಲ್ಲಿ ಬ್ರಹ್ಮದೇವನು ಅಲ್ಲಿಗೆ ಬಂದನು.

ಬ್ರಹ್ಮದೇವ–ತುಲಸಿ, ಶಂಖಚೂಡಾ, ನೀವಿಬ್ಬರೂ ಗಾಂಧರ್ವ ವಿಧಿಯಿಂದ ವಿವಾಹವಾಗಿರಿ. ಶಂಖಚೂಡಾ, ನೀನು ಪುರುಷರತ್ನನಿರುವೆ; ತುಲಸಿ, ನೀನು ನಾರಿಯರಲ್ಲಿ ರತ್ನಸ್ವರೂಪಿಯಿರುವೆ. ಶರೀರಾಂತ್ಯವಾದ ಬಳಿಕ ನೀವಿಬ್ಬರೂ ಶ್ರೀಕೃಷ್ಣ ಸನ್ನಿಧಿಯನ್ನು ಸೇರುವಿರಿ.

ಶಂಖಚೂಡನು ತುಲಸಿಯ ಪಾಣಿಗ್ರಹಣ ಮಾಡಿದನು. ಅವನು ತ್ರಿಲೋಕಗಳನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಏಕಚಕ್ರಾಧಿಪತಿಯಾಗಿ ರಾಜ್ಯವಾಳತೊಡಗಿದನು. ಸಮಗ್ರ ದೇವತೆಗಳೂ, ದಾನವರೂ, ಅಸುರರೂ, ರಾಕ್ಷಸರೂ, ಗಂಧರ್ವರೂ, ನಾಗರೂ, ಕಿನ್ನರರೂ, ಮನುಷ್ಯರೂ ಇವನ ಆಧಿಪತ್ಯಕ್ಕೊಳಗಾದರು. ದೇವತೆಗಳಿಗೆ ದಿಗ್ಭ್ರಮೆಯಾಯಿತು. ಅವರು ಬ್ರಹ್ಮ ದೇವನ ಮೊರೆ ಹೊಕ್ಕರು. ಬ್ರಹ್ಮದೇವನು ವೈಕುಂಠಕ್ಕೆ ತೆರಳಿ ವಿಷ್ಣುವಿಗೆ ದೇವತೆಗಳ ಮೇಲೆ ಬಂದ ವಿಪತ್ತಿನ ಸಂಗತಿಯನ್ನು ತಿಳಿಸಿದನು. ತರುವಾಯ ಈ ಸಂಗತಿಯ ಇತ್ಯರ್ಥವನ್ನು ಭಗವಾನ್ ಶಂಕರನಿಂದಲೇ ಮಾಡಬೇಕೆಂದು ಎಲ್ಲ ದೇವತೆಗಳೂ ಕೈಲಾಸಕ್ಕೆ ತೆರಳಿದರು. ಮಹೇಶ್ವರನು ಭಗವತಿ ಉಮಾದೇವಿಯೊಡನೆ ಸಿಂಹಾಸನದಲ್ಲಿ ಮಂಡಿಸಿದ್ದನು. ಅವನು ಎಲ್ಲ ದೇವತೆಗಳನ್ನು ಸ್ವಾಗತಿಸಿದನು. ತರುವಾಯ ಶ್ರೀಹರಿಯು ದೇವತೆಗಳಿಗೆ ಶಂಖಚೂಡನಿಂದ ಬಂದ ಆಪತ್ತನ್ನು ರುದ್ರದೇವನಿಗೆ ವಿವರಿಸಿ ಹೇಳಿದನು.

ಮಹೇಶ್ವರ–ಶ್ರೀಹರಿಯೇ, ಶಂಖಚೂಡನನ್ನು ರಣದಲ್ಲಿ ಸಂಹರಿಸಿ, ದೇವರಾಜ್ಯವನ್ನು ಗಂಡಾಂತರದಿಂದ ಮುಕ್ತಗೊಳಿಸುವೆನು.

ದೇವತೆಗಳು ಸಂತುಷ್ಟರಾಗಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ತರುವಾಯ ರುದ್ರದೇವನು ದಾನವರಾಜನ ಕಡೆಗೆ ಚಿತ್ರರಥನೆಂಬ ದೂತನನ್ನು ಕಳುಹಿಸಿ, ದೇವರಾಜ್ಯವನ್ನು ದೇವೇಂದ್ರನಿಗೆ ಒಪ್ಪಿಸಬೇಕೆಂದು ತಿಳಿಸಿದನು. ಅಭಿಮಾನಿಯಾದ ದಾನವರಾಜನು ಈ ಮಾತಿಗೆ ಒಪ್ಪಲಿಲ್ಲ. ಶಿವನು ಸಂಗ್ರಾಮಕ್ಕೆ ಅಣಿಯಾದನು. ವೀರಭದ್ರ, ನಂದೀಶ್ವರ, ಭದ್ರಕಾಳಿ ಮೊದಲಾದವರೂ ಸಂಗ್ರಾಮಕ್ಕೆ ಸಿದ್ಧರಾದರು. ಘನಘೋರವಾದ ಸಂಗ್ರಾಮವು ನಡೆಯಿತು. ಶಂಖಚೂಡನು ಒಲುಮೆಯಿಂದ ಪಟ್ಟಮಹಿಷಿ ತುಲಸಿಯಿಂದ ನಿರೋಪ ಹೊಂದಿ ಸಂಗ್ರಾಮದಲ್ಲಿ ಪ್ರಾಮುಖ್ಯವಾದ ಪಾತ್ರವನ್ನು ವಹಿಸಿದನು.

ಶಂಖಚೂಡನ ಸೇನೆಯ ಅಬ್ಬರಕ್ಕೆ ಶಿವಸೇನೆಯು ಜರ್ಜರಿತವಾಯಿತು. ಕೂಡಲೆ ಶಿವನು ಸಂತಪ್ತನಾಗಿ ತ್ರಿಶೂಲವನ್ನು ಪ್ರಹಾರ ಮಾಡಲು ಉದ್ಯುಕ್ತನಾದನು. ಕೂಡಲೆ ಆಕಾಶವಾಣಿಯಾಯಿತು.

ಆಕಾಶವಾಣಿ–ರುದ್ರದೇವಾ, ನೀನು ಜಗತ್ತಿನ ಪ್ರಳಯವನ್ನುಂಟು ಮಾಡಬೇಡ. ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಸಲ್ಲದು. ದೇವನಿಯಮಕ್ಕೆ ವಿರೋಧಿಯಾಗಕೂಡದು.

ಆಕಾಶವಾಣಿಯಾದ ಕೂಡಲೆ ಶಂಕರನು ತನ್ನ ತ್ರಿಶೂಲವನ್ನು ಹಿಂದಕ್ಕೆ ತೆಗೆದುಕೊಂಡು ವಿಷ್ಣುವನ್ನು ಕರೆದನು.

ರುದ್ರದೇವ–ಶ್ರೀಹರಿಯೆ, ಶಂಖಚೂಡನಲ್ಲಿ ಶ್ರೀಕೃಷ್ಣ ಕವಚವೂ, ತುಲಸಿಯಲ್ಲಿ ಸತಿಧರ್ಮವೂ ಇರುವವರೆಗೆ ದೇವತೆಗಳಿಗೆ ಜಯವು ಸಾಧ್ಯವಿಲ್ಲ. ನೀನು ಬೇಗನೆ ಮಾಯೆಯಿಂದ ಎರಡೂ ಕರ್ತವ್ಯಗಳನ್ನು ಈಡೇರಿಸಬೇಕು.

ಶ್ರೀವಿಷ್ಣುವು ಬ್ರಾಹ್ಮಣನ ವೇಷದಿಂದ ಶಂಖಚೂಡನ ಬಳಿಗೆ ಹೋಗಿ ಶ್ರೀಕೃಷ್ಣ ಕವಚವನ್ನು ದಾನ ಪಡೆದನು. ತರುವಾಯ ಅವನು ಶಂಖಚೂಡನ ವೇಷದಿಂದ ತುಲಸಿಯ ಬಳಿಗೆ ಹೋಗಿ ಅವಳ ಪಾತಿವ್ರತ್ಯ ಭಂಗ ಮಾಡಿದನು. ಕೂಡಲೆ ಪರಮೇಶ್ವರನ ಕೈಯಿಂದ ಶಂಖಚೂಡನು ರಣಭೂಮಿಯಲ್ಲಿ ಸಂಹರಿಸಲ್ಪಟ್ಟನು. ತುಲಸಿಗೆ ಶ್ರೀಹರಿಯ ಮಾಯೆಯು ತಿಳಿಯಿತು. ಆಗ ಅವಳು

ಸಂತಾಪಗೊಂಡು ರೋದನ ಮಾಡತೊಡಗಿದಳು. ಆಗ ವಿಷ್ಣುವು ನಿಯತಿಯ ನಿಯಮವನ್ನು ಯಾರೂ ಮೀರಲಾರರೆಂದು ಅವಳಿಗೆ ಹೇಳಿ, ನೀವಿಬ್ಬರೂ ಗೋಲೋಕಕ್ಕೆ ತೆರಳಿ, ಶ್ರೀಕೃಷ್ಣನ ಸನ್ನಿಧಿಯನ್ನು ಸೇರುವಿರಿ ! ಎಂದು ತಿಳಿಸಿದನು.

ತುಲಸಿ–ಶ್ರೀಹರಿ, ನೀನು ಮಾಯಾವಿ, ನಿನ್ನ ಹೃದಯವು ಪಾಷಾಣ ಸದೃಶವಾಗಿದೆ. ಆದುದರಿಂದ ನೀನು ಶಿಲೆಯಾಗು !

ಶ್ರೀಹರಿಯು ಶಾಲಗ್ರಾಮ ಶಿಲೆಯಾದನು. ತುಲಸಿಯು ಗಂಡಕಿ ನದಿಯಾದಳು. ಅವಳು ತುಲಸಿ ವೃಕ್ಷ ರೂಪವಾಗಿ ಶ್ರೀಹರಿಯ ವರದಂತೆ ಎಲ್ಲರಿಗೂ ಪೂಜನೀಯಳಾದಳು.

## ಅಂಧಕಾಸುರ

ಭಗವಾನ್ ಶಂಕರನಿಗೆ ಪಾರ್ವತಿಯೊಡನೆ ವಿಹಾರ ಮಾಡಬೇಕೆಂಬ ಇಚ್ಛೆಯಾಯಿತು. ಆಗ ಅವನು ಪಾರ್ವತಿಯೊಡನೆ ಕೈಲಾಸವನ್ನು ಬಿಟ್ಟು ಕಾಶೀಪುರಿಗೆ ಬಂದನು. ಅವನು ಆ ನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ಭೈರವನನ್ನು ರಕ್ಷಕನೆಂದು ನಿಯುಕ್ತಗೊಳಿಸಿದನು. ಒಂದಾನೊಂದು ಸಮಯದಲ್ಲಿ ಮಹಾದೇವನು ಅನೇಕ ವೀರಾಗ್ರಗಣ್ಯ ಗಣೇಶ್ವರರನ್ನೊಡಗೊಂಡು ಶಿವೆಯೊಡನೆ ಮಂದರಾಚಲಕ್ಕೆ ತೆರಳಿದನು. ಅಲ್ಲಿ ಅವನು ಪಾರ್ವತಿಯೊಡನೆ ವಿವಿಧ ಕ್ರೀಡೆಗಳನ್ನು ಮಾಡತೊಡಗಿದನು. ಒಮ್ಮೆ ಪಾರ್ವತಿಯು ಶಿವನ ಹಿಂದೆ ಬಂದು ಅವನ ಕಣ್ಣುಗಳನ್ನು ತನ್ನ ಕೈಯಿಂದ ಗಟ್ಟಿಯಾಗಿ ಮುಚ್ಚಿದಳು.

ಶಿವ–ಪಾರ್ವತಿ, ಕಣ್ಣು ಬಿಡು.

ಪಾರ್ವತಿಯು ಕಣ್ಣು ಬಿಟ್ಟಳು. ಅವನ ಕಣ್ಣೊಳಗಿಂದ ನೀರ ಹನಿಗಳು ಟಪಟಪ ಬೀಳತೊಡಗಿದವು. ಕೂಡಲೆ ಅವನ ಒಂದು ಕಣ್ಣೀರಿನ ಹನಿಯಿಂದ ಒಬ್ಬ ರಾಕ್ಷಸನು ಉತ್ಪನ್ನನಾದನು. ಕಣ್ಣು ಮುಚ್ಚಿದಾಗ ಬಿದ್ದ ಕಣ್ಣೀರಿನಿಂದ ಉತ್ಪನ್ನನಾದ ಆ ರಾಕ್ಷಸನು ಅಂಧನಾದನು.

ಪಾರ್ವತಿ–ದೇವಾ, 'ಇಂತಹ ಕುರೂಪಿ ಕುರುಡನನ್ನು ಏಕೆ ಉತ್ಪನ್ನ ಮಾಡಿದೆ ?

ಶಿವ–ಗೌರಿ, ಹೇಗಿದ್ದರೂ ಇವನನ್ನು ನೀನೂ ನಿನ್ನ ಸಖಿಯರೂ ಜತನ ಮಾಡಬೇಕು. ಇವನು ನನ್ನ ಗಣದಲ್ಲಿ ಸಮಾವೇಶವಾಗುವನು. ನನ್ನ ಗಣದಲ್ಲಿ ಅನೇಕರು ಒಕ್ಕಣ್ಣರು, ಕಣ್ಣಿಲ್ಲದವರು ಇಲ್ಲವೆ ?

ಗೌರಿಯು ಸುಮ್ಮನಾಗಿಯೇ ಆ ಮಗುವನ್ನು ಸಂರಕ್ಷಣೆ ಮಾಡ ತೊಡಗಿದಳು.

ಒಂದಾನೊಂದು ಸಮಯದಲ್ಲಿ ಹಿರಣ್ಯಾಕ್ಷನು ಪುತ್ರಪ್ರಾಪ್ತಿಗಾಗಿ ತಪಶ್ಚರ್ಯ ಮಾಡತೊಡಗಿದನು. ಅವನ ತಪಸ್ಸಿಗೆ ಪರಮೇಶ್ವರನು ಮೆಚ್ಚಿ ಅವನಿಗೆ ದರ್ಶನ ಕೊಟ್ಟನು.

ಪರಮೇಶ್ವರ–ಹಿರಣ್ಯಾಕ್ಷಾ, ನೀನು ಪುತ್ರಪ್ರಾಪ್ತಿಗಾಗಿ ತಪಸ್ಸು ಮಾಡುತ್ತಿರುವೆ. ಆದರೆ ನಿನ್ನ ವೀರ್ಯದಿಂದ ಪುತ್ರರು ಉತ್ಪನ್ನರಾಗುವ ಯೋಗವಿಲ್ಲ. ನಾನು ನನ್ನ ಅಂಧಕನೆಂಬ ಪುತ್ರನನ್ನು ನಿನಗೆ ಕೊಡುವೆನು.

ಉಮಾ–ಮಹೇಶ್ವರರು ಅಂಧಕಾಸುರನನ್ನು ಹಿರಣ್ಯಾಕ್ಷನಿಗೆ ಒಪ್ಪಿಸಿದರು. ದೈತ್ಯನು ಸಂತುಷ್ಟನಾಗಿ ಕುರುಡ ಮಗನನ್ನು ಕರೆದುಕೊಂಡು ಹೊರಟು ಹೋದನು.

ಮುಂದೆ ಹಿರಣ್ಯಾಕ್ಷನು ದೇವತೆಗಳನ್ನು ಜಯಿಸಿ ಭೂಭಾಗವನ್ನು ರಸಾತಲಕ್ಕೆ ಒಯ್ದನು. ದೇವತೆಗಳು ಶ್ರೀಹರಿಯ ಬೆನ್ನುಬಿದ್ದರು. ದಯಾಮಯ ನಾದ ಭಗವಂತನು ವರಾಹಾವತಾರ ತಾಳಿ, ರಾಕ್ಷಸನನ್ನು ಸಂಹರಿಸಿ ಭೂಮಿಯನ್ನು ರಸಾತಲದಿಂದ ಮೇಲೆ ತಂದನು.

ಹಿರಣ್ಯಾಕ್ಷನ ಬಂಧುವಾದ ಹಿರಣ್ಯಕಶ್ಯಪನು ಬಂಧುವಧೆಗಾಗಿ ಸಂತಪ್ತ ನಾದನು. ಅವನು ಶ್ರೀಹರಿಯ ಮೇಲಿನ ಸೇಡು ತೀರಿಸಿಕೊಳ್ಳಲು ಕಟಿಬದ್ಧ ನಾದನು. ಅವನು ದೇವತೆಗಳನ್ನು ಪರಾಭವಗೊಳಿಸಿ ಮೂಲೋಕಗಳಿಗೆ ಒಡೆಯ ನಾದನು. ಅವನು ತನ್ನ ಪುತ್ರನಾದ ಪ್ರಹ್ಲಾದನನ್ನು ಪರಿಪರಿಯಾಗಿ ಕಾಡತೊಡಗಿ ದನು. ಪ್ರಹ್ಲಾದನು ಶ್ರೀಹರಿಯ ಭಕ್ತನಾಗಿದ್ದನು. ಹಿರಣ್ಯಕಶ್ಯಪನಿಗೆ ಶ್ರೀಹರಿಯೂ ವೈರಿಯೂ; ಹರಿಭಕ್ತರೂ ವೈರಿಗಳು. ಪ್ರಹ್ಲಾದನಿಗೆ ಹಿರಣ್ಯಕಶ್ಯಪನು ಬಹು ಪರಿಯಾಗಿ ಪೀಡೆ ಮಾಡತೊಡಗಿದ್ದರಿಂದ ಶ್ರೀಹರಿಯು ನರಸಿಂಹಾವ ತಾರ ತಾಳಿ ಹಿರಣ್ಯಕಶ್ಯಪನನ್ನು ಸಂಹರಿಸಿದನು. ಆಗ ಪ್ರಹ್ಲಾದನ ಹಾಗೂ ದೇವತೆಗಳ ಗಂಡಾಂತರವು ದೂರವಾಯಿತು.

ಸೂತಪುರಾಣಿಕ–ಶೌನಕಾದಿ ಋಷಿಗಳೆ, ಹಿರಣ್ಯಾಕ್ಷನ ಪುತ್ರನಾದ ಅಂಧಕನಿಗೆ ಅವನ ದಾಯಾದಿಗಳು ರಾಜ್ಯವನ್ನು ಕೊಡಲಿಲ್ಲ. ಅಂಧಕಾಸುರನು ಕುರುಡನಿದ್ದುದರಿಂದಲೂ, ಹಿರಣ್ಯಾಕ್ಷನ ಔರಸ ಸಂತಾನವಾಗಿರದೆ ಶಿವನಿಂದ ದತ್ತು ಸ್ವರೂಪವಾಗಿ ಬಂದವನಾಗಿದ್ದುದರಿಂದಲೂ ಅವನಿಗೆ ರಾಜ್ಯವನ್ನು ಕೊಡಲು ಬಾಧ್ಯಸ್ಥರು ನಿರಾಕರಿಸಿದರು. ಆದುದರಿಂದ ಅವನು ಖೇದಗೊಂಡು ವನಕ್ಕೆ ತೆರಳಿದನು. ಬ್ರಹ್ಮದೇವನಿಂದ ವರವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಅಂಧಕಾಸುರನು ತಪಸ್ಸು ಮಾಡತೊಡಗಿದನು. ಬ್ರಹ್ಮದೇವನು ಅವನಿಗೆ ಪ್ರತ್ಯಕ್ಷನಾಗಿ ವರಗಳನ್ನು ಬೇಡಲು ತಿಳಿಸಿದನು.

ಅಂಧಕಾಸುರ–ನನ್ನ ದಾಯಾದಿಗಳು ರಾಜ್ಯವನ್ನು ಕೊಡದೆ ವನಕ್ಕೆ ದೂಡಿದರು. ಆ ದಾನವರೆಲ್ಲ ನನಗೆ ಭೃತ್ಯರಾಗಬೇಕು. ನನ್ನ ಅಂಧತ್ವದ ನಿವಾರಣೆ ಯಾಗಬೇಕು. ಇನ್ನೊಂದು ವರವನ್ನು ಬೇಡುವೆನು : ನಾನು ಅಮರನಾಗಬೇಕು.

ಬ್ರಹ್ಮದೇವ–ನಿನಗೆ ರಾಜ್ಯದಾನ, ನೇತ್ರದಾನ ಮಾಡಿರುವೆನು. ಆದರೆ ನಾನೇ ಅಮರನಲ್ಲ. ಭಗವಾನ್ ಸದಾಶಿವನ ಹೊರತು ಎಲ್ಲರೂ ಕಾಲವಶರು. ನೀನು ನಿನ್ನ ವಿನಾಶಕ್ಕಾಗಿ ಯಾವುದಾದರೊಂದು ಕಾರಣವನ್ನು ಕೇಳು.

ಅಂಧಕಾಸುರ–ದೇವಾ, ರಾಕ್ಷಸಭಾವದಿಂದ ನಾನು ಮಾತೃಸಮಾನ ಸ್ತ್ರೀಯಲ್ಲಿ ಕಾಮನೆಯುಳ್ಳವನಾದರೆ ನನಗೆ ಮೃತ್ಯುವು ಒದಗಬೇಕು. ನನ್ನ ದೇಹವು ಅಸ್ಥಿಪಂಜರವಾಗಿದೆ. ಅದನ್ನು ನೀನು ಬಲಾಢ್ಯಗೊಳಿಸಬೇಕು.

ಬ್ರಹ್ಮದೇವನು ಅಂಧಕಾಸುರನ ಪ್ರಾರ್ಥನೆಯಂತೆ ಅವನ ಶರೀರವು ಸುದೃಢವಾಗುವಂತೆ ಮಾಡಿದನು. ತರುವಾಯ ಆ ದಾನವನು ತನ್ನ ರಾಜ್ಯಕ್ಕೆ ಬಂದನು. ಪ್ರಹ್ಲಾದ ಮೊದಲಾದ ಬಂಧುಗಳು ಅವನಿಗೆ ರಾಜ್ಯವನ್ನೊಪ್ಪಿಸಿ ಭೃತ್ಯರಾದರು. ತರುವಾಯ ಅಂಧಕಾಸುರನು ದಿಗ್ವಿಜಯವನ್ನು ಸಾಧಿಸಿ ಮೂರು ಲೋಕಗಳಿಗೂ ಅಧಿಪತಿಯಾದನು. ಒಮ್ಮೆ ಅಂಧಕಾಸುರನ ಮಂತ್ರಿಗಳು ಒಂದು ಗುಹೆಯಲ್ಲಿ ತಪಸ್ಸು ಮಾಡುತ್ತಿರುವ ಮಹಾದೇವನನ್ನೂ ಅವನ ಪತ್ನಿಯಾದ ಅಂಬಿಕಾದೇವಿಯನ್ನೂ ಕಂಡರು. ಅವರು ಅಂಬಿಕಾದೇವಿಯ ರೂಪ, ಲಾವಣ್ಯ ಗಳನ್ನು ಬಹಳವಾಗಿ ವರ್ಣಿಸಿದರು. ಕೂಡಲೆ ಆ ಅಸುರನು ಕಾಮಾಂಧನಾಗಿ ತನ್ನ ಸೈನ್ಯವನ್ನೂ, ಮಂತ್ರಿಗಳನ್ನೂ ಸಂಗಡ ಕರೆದುಕೊಂಡು ಆ ಗುಹೆಗೆ ಹೋದನು.

ಅವನು ದಕ್ಷ ಪುತ್ರಿಯಾದ ಸತಿದೇವಿಯನ್ನು ಕಂಡು ಮೋಹಿತನಾದನು. ಅವನು ತನ್ನ ಮಂತ್ರಿಗಳನ್ನು ಶಿವನ ಬಳಿಗೆ ಕಳುಹಿಸಿ, ತನ್ನ ಮನೋದಯವನ್ನು ತಿಳಿಸಲು ಹೇಳಿದನು. ಕಾಮಾಂಧದಾನವನಿಗೆ ಮರಣಕಾಲವು ಸಮೀಪಿಸಿರುವದೆಂದು ರುದ್ರದೇವನು ಅಂಧಕನ ಮಂತ್ರಿಗಳಿಗೆ ಹೇಳಿದನು. ಅಂಧಕಾಸುರನು ಶಿವನ ಸೇನೆಯೊಡನೆ ಯುದ್ಧವನ್ನು ಪ್ರಾರಂಭಿಸಿದನು. ನಂದೀಶ್ವರನು ಅತ್ಯಂತ ಶೌರ್ಯದಿಂದ ಕಾದತೊಡಗಿದನು. ದಾನವನ ರಕ್ತಬಿಂದುಗಳು ಭೂಮಿಗೆ ಬಿದ್ದ ಕೂಡಲೆ ಅನೇಕ ಅಂಧಕಾಸುರರು ಉತ್ಪನ್ನರಾಗ ತೊಡಗಿದರು. ಕೂಡಲೆ ವಿಷ್ಣುವು ಶಕ್ತಿ ರೂಪವನ್ನು ತಾಳಿ ದಾನವನ ರಕ್ತವು ಕೆಳಗೆ ಬೀಳದಂತೆ ಪಾನ ಮಾಡತೊಡಗಿದನು. ಪಿನಾಕಪಾಣಿಯು ತನ್ನ ಪಿನಾಕದಿಂದ ಅವನ ದೇಹವನ್ನು ವಿದೀರ್ಣಗೊಳಿಸಿದನು. ರಣದಲ್ಲಿ ಮಡಿದ ದಾನವರನ್ನು ಬದುಕಿಸುವ ಶುಕ್ರಾಚಾರ್ಯನನ್ನು ಪಶುಪತಿಯು ನುಂಗಿಬಿಟ್ಟನು. ಅಂಧಕನು ಗತಪ್ರಾಣ ನಾಗದ್ದನ್ನು ಮಹಾದೇವನು ಕಂಡನು. ಅವನು ತನ್ನ ಕರ್ಮಕ್ಕಾಗಿ ಪಶ್ಚಾತ್ತಾಪ ಪಡತೊಡಗಿದ್ದರಿಂದ ಅವನನ್ನು ಆ ಮಹೇಶ್ವರನು ತನ್ನ ಗಣದಲ್ಲಿ ಸಮಾವೇಶ ಗೊಳಿಸಿದನು. ಶುಕ್ರಾಚಾರ್ಯನನ್ನು ಮಹಾದೇವನು ತನ್ನ ದೇಹದಿಂದ ಹೊರಗೆ ಕಳುಹಿಸಿದನು. ಶುಕ್ರನು ಶಂಭುವನ್ನು ಅನನ್ಯಭಾವದಿಂದ ಪ್ರಾರ್ಥಿಸಿದನು. ಪರಮಾತ್ಮನ ಅನುಗ್ರಹದಿಂದ ಅವನ ಮೃತ ಸಂಜೀವನಿ ಮಂತ್ರವು ಊರ್ಜಿತ ಗೊಂಡಿತು.

ಅಂಧಕಾಸುರನು ಭಗವಾನ್ ಶಂಕರನನ್ನು ಅನನ್ಯಭಾವದಿಂದ ಪ್ರಾರ್ಥನೆ ಮಾಡಿದನು.

ಅಂಧಕಾಸುರ–ಚಂದ್ರಶೇಖರಾ, ನೀನು ನನ್ನ ಮೇಲೆ ಕೃಪೆ ಮಾಡು. ಭಗವತಿ ಜಗದಂಬೆಯ ವಿಷಯವಾಗಿ ನನ್ನಲ್ಲಿ ಪಾಪಬುದ್ಧಿಯು ಹುಟ್ಟಿದ್ದಕ್ಕಾಗಿ ನನ್ನಲ್ಲಿ ಪಶ್ಚಾತ್ತಾಪವು ಉತ್ಪನ್ನವಾಗಿದೆ. ಅವಳು ನನ್ನ ಜನನಿಯು. ರಾಕ್ಷಸ ಬುದ್ಧಿಯು ಮುಸುಕಿಸಿತ್ತು. ಈಗ ನಾನು ಶುದ್ಧ ಮನಸ್ಕನಾಗಿರುವೆನು, ನನ್ನನ್ನು ನಿನ್ನ ಗಣದಲ್ಲಿ ಸೇರಿಸಿದ್ದರಿಂದ ನನ್ನ ಪಾಪಬುದ್ಧಿಯು ನಷ್ಟವಾಗಿ ಹೋಗಿದೆ.

ಅಂಬಿಕೆಯೂ ಮಹಾದೇವನೂ ಅಂಧಕಾಸುರನ ಮೇಲೆ ಅನುಗ್ರಹ ಮಾಡಿದರು.

# ಬಾಣಾಸುರ

ಸೂತಪುರಾಣಿಕ–ಶೌನಕ ಮಹರ್ಷಿಯೆ, ಬ್ರಹ್ಮನ ಮಾನಸಪುತ್ರನಾದ ಸನತ್ಕುಮಾರನು ವ್ಯಾಸಮುನಿಗೆ ಬಾಣಾಸುರನ ಕಥೆಯನ್ನು ಹೇಳತೊಡಗಿದನು.

ಸನತ್ಕುಮಾರ–ವ್ಯಾಸಮಹರ್ಷಿ, ಕಶ್ಯಪ ಮಹರ್ಷಿಯ ಜ್ಯೇಷ್ಠ ಪತ್ನಿಯಾದ ದಿತಿಯ ಗರ್ಭದಿಂದ ಹಿರಣ್ಯಕಶ್ಯಪನು ಜನಿಸಿದನು. ಹಿರಣ್ಯಕಶ್ಯಪನಿಗೆ ಪ್ರಹ್ಲಾದ ಮೊದಲಾದ ನಾಲ್ವರು ಪುತ್ರರು. ಪ್ರಹ್ಲಾದನ ಪುತ್ರನು ವಿರೋಚನನು. ವಿರೋಚನನ ಪುತ್ರನು ಬಲಿಯು, ಬಲಿಯ ಮಗನು ಬಾಣಾಸುರನು. ಬಲಿಯನ್ನು ಭಗವಾನ್ ವಾಮನನು ಪಾತಾಳಲೋಕಕ್ಕೆ ಕಳುಹಿಸಿದ ಬಳಿಕ ಅವನ ಪುತ್ರನಾದ ಬಾಣನು ದಿಗ್ವಿಜಯ ಮಾಡಿ ಶೋಣಿತಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳತೊಡಗಿದನು. ಇವನು ಪರಮ ಶಿವಭಕ್ತನಾಗಿದ್ದನು. ಒಮ್ಮೆ ಅವನು ಪರಮೇಶ್ವರನ ಬಳಿಗೆ ಹೋದನು. ಅವನು ಮೃತ್ಯುಂಜಯನಿಗೆ ಪ್ರಣಾಮಗಳನ್ನರ್ಪಿಸಿ, ಗಣಸಹಿತನಾಗಿ ಆಗಮಿಸಿ ತನ್ನ ನಗರದ ಅಧ್ಯಕ್ಷನಾಗಬೇಕೆಂದು ಬೇಡಿಕೊಂಡನು. ಭಕ್ತವತ್ಸಲನಾದ ಶಂಭುವು ಅವನ ಮಾತಿಗೆ ಒಪ್ಪಿಗೆ ಕೊಟ್ಟು, ತನ್ನ ಗಣಗಳೊಡನೆ ಶೋಣಿತಪುರದಲ್ಲಿ ವಾಸ ಮಾಡಿದನು.

ಒಂದಾನೊಂದು ಸಮಯದಲ್ಲಿ ಬಾಣನು ಶಿವನ ಬಳಿಗೆ ಹೋಗಿ ಅವನನ್ನು ನಮಸ್ಕರಿಸಿ, ಬಾಹುಗಳ ಸಾಮರ್ಥ್ಯವುಳ್ಳ ತನಗೆ ಯೋಗ್ಯಶತ್ರುವನ್ನು ದೊರಕಿಸಿ ಕೊಡಬೇಕೆಂದು ಬೇಡಿಕೊಂಡನು. ಬಾಣನ ಮಾತಿನಿಂದ ಮಹಾದೇವನು ಖತಿಗೊಂಡನು. ದುರಹಂಕಾರಿಯಾದ ಬಾಣನ ಗರ್ವಹರಣ ಮಾಡುವ ಶತ್ರುವನ್ನು ಅವನಿಗೆ ಕೂಡಿಸಿ ಕೊಡಬೇಕೆಂದು ನಿರ್ಧಾರ ಮಾಡಿದನು. ನಿನ್ನ ಅಪೇಕ್ಷೆಯು ಈಡೇರುವದೆಂದು ಅವನು ಬಾಣನಿಗೆ ಹೇಳಿದನು. ಕೆಲವು ಕಾಲವು ಕಳೆದ ಬಳಿಕ ಬಾಣನ ರಾಜ್ಯದಲ್ಲಿ ಅನೇಕ ಉತ್ಪಾತಗಳಾಗತೊಡಗಿದವು. ಶಂಕರನ ಹೇಳಿಕೆಯಂತೆ ದುಶ್ಶಕುನಗಳು ತೋರಿಬಂದುದರಿಂದ ತನ್ನ ವೈರಿಯು ಆಗಮಿಸುವ ದಿನಗಳು ಸಮೀಪಿಸಿದವೆಂದು ಬಾಣನು ಹರ್ಷಿತನಾದನು.

ಒಂದು ದಿನ ಬಾಣಾಸುರನ ಪುತ್ರಿಯಾದ ಉಷೆಯು ವೈಶಾಖ ಮಾಸದಲ್ಲಿ ಮಾಂಗಲಿಕ ಶೃಂಗಾರದಿಂದ ಸುಸಜ್ಜಿತಳಾಗಿ ಮಾಧವನ ಪೂಜೆಯನ್ನು ವಿಜೃಂಭಣೆಯಿಂದ ನೆರವೇರಿಸಿದಳು. ಅಂದು ಅವಳು ತನ್ನ ಗುಪ್ತ ಅಂತಃಪುರದಲ್ಲಿ ಶಯನ

ಮಾಡಿದಳು. ಆಗ ಅವಳಲ್ಲಿ ಯೌವನ ಸಹಜ ಸ್ತ್ರೀಭಾವವು ಉತ್ಪನ್ನವಾಯಿತು. ದೇವಿ ಪಾರ್ವತಿಯ ಶಕ್ತಿಯಿಂದ ಉಷೆಯ ಸ್ವಪ್ನದಲ್ಲಿ ಶ್ರೀಕೃಷ್ಣಪುತ್ರ ಪ್ರದ್ಯುಮ್ನನ ಮಗನಾದ ಅನಿರುದ್ಧನ ಮಿಲನವಾಯಿತು. ಆಗ ಅವಳು ತನ್ನ ಜೀವದ ಗೆಳತಿಯಾದ ಚಿತ್ರಲೇಖೆಯನ್ನು ಕರೆದು ಸ್ವಪ್ನದ ಸಂಗತಿಯನ್ನು ತಿಳಿಸಿ, ಸ್ವಪ್ನದಲ್ಲಿ ತನಗೆ ಮಿಲನವಾದ ಸುಂದರ ಪುರುಷನನ್ನು ತಂದುಕೊಡಬೇಕೆಂದು ತಿಳಿಸಿದಳು.

ಚಿತ್ರಲೇಖೆ–ಸಖಿ, ಸ್ವಪ್ನದಲ್ಲಿ ಸಮಾಗಮ ಮಾಡಿದ ಪುರುಷನು ಯಾರೆಂಬುದನ್ನು ತಿಳಿಸು. ನಿನ್ನ ಸಲುವಾಗಿ ನಾನು ಶ್ರಮವಹಿಸಿ ನಿನ್ನ ಪ್ರಣಯ ದೇವನನ್ನು ಕರೆತರುವೆನು.

ಉಷೆ–ನನಗೆ ಅವನ ಹೆಸರು ತಿಳಿಯದು.

ಚಿತ್ರಲೇಖೆಯು ಕಲಾಕುಶಲಳಲ್ಲದೆ ಯೋಗಬಲವೂ ಅವಳಲ್ಲಿತ್ತು. ಅವಳು ವಸ್ತ್ರದ ತೆರೆಯ ಮೇಲೆ ಪ್ರಖ್ಯಾತ ದೇವ–ದಾನವರು, ಯಕ್ಷರು, ಕಿನ್ನರರು, ರಾಜಪುತ್ರರು ಮೊದಲಾದವರ ಚಿತ್ರಗಳನ್ನು ಬರೆದು ತೋರಿಸಿದಳು. ತರುವಾಯ ವೃಷ್ಣಿ ವಂಶದ ರಾಜಕುಮಾರರ ಪ್ರಕರಣವು ಆರಂಭವಾಯಿತು. ಕೊನೆಗೆ ಅವಳು ಪ್ರದ್ಯುಮ್ನನಂದನ ಅನಿರುದ್ಧನ ಚಿತ್ರವನ್ನು ಲೇಖಿಸಿದಳು.

ಉಷೆ–ಪ್ರೀತಿಯ ಗೆಳತಿ, ಇವನೇ ಅವನು ! ನಿನ್ನೆ ರಾತ್ರಿ ಸ್ವಪ್ನದಲ್ಲಿ ನನ್ನೊಡನೆ ರತಿ ಕ್ರೀಡೆಯಾಡಿ ನನ್ನ ಮನಸ್ಸನ್ನು ಸೆಳೆದಿರುವನು.

ಚಿತ್ರಲೇಖೆ–ಸಖಿ, ನೀನು ನಿಶ್ಚಿಂತಳಾಗು. ಇವನು ಶ್ರೀಕೃಷ್ಣನಂದನ ನಾದ ಪ್ರದ್ಯುಮ್ನ ಕುಮಾರ ಅನಿರುದ್ಧನು. ಇವನು ಎಲ್ಲ ವಿಧದಿಂದಲೂ ನಿನಗೆ ಅನುರೂಪನಾಗಿರುವನು.

ಚಿತ್ರಲೇಖೆಯು ತನ್ನ ಯೋಗಬಲದಿಂದ ದ್ವಾರಕೆಗೆ ಹೋಗಿ, ಅನಿರುದ್ಧನನ್ನು ಕರೆತಂದು ಉಷೆಯ ಮಂಚದ ಮೇಲೆ ಕುಳ್ಳಿರಿಸಿದಳು ! ಅತ್ಯಂತ ಸುಂದರ ಪುರುಷನಾದ ಅನಿರುದ್ಧನನ್ನು ನೋಡಿ ಉಷೆಯು ಆನಂದಸಾಗರದಲ್ಲಿ ಮುಳುಗಿದಳು. ಇಬ್ಬರೂ ಪ್ರಣಯಿಗಳು ಅತ್ಯಂತ ಗುಪ್ತವಾಗಿ ಇರತೊಡಗಿದರು. ಉಷೆಯ ಅಂತಃಪುರದಲ್ಲಿ ಯಾವನೋ ಪುರುಷನು ವಾಸ ಮಾಡಿದ ಸಂಗತಿಯು ಗುಪ್ತಚಾರರಿಂದ ಬಾಣಾಸುರನಿಗೆ ತಿಳಿಯಿತು. ಅವನು ಆಶ್ಚರ್ಯ ಚಕಿತನಾದನು. ರಾಜಕುಮಾರಿಯ ಅಂತಃಪುರದಲ್ಲಿ ಕಳ್ಳನಂತೆ ಪ್ರವೇಶ ಮಾಡಿದ ಆ ದುಷ್ಟ ತರುಣನನ್ನು ಸಂಹಾರ ಮಾಡಲು ಅವನು ಹತ್ತು ಸಾವಿರ ವೀರ ಯೋಧರನ್ನು

ಕಳುಹಿಸಿದನು. ಅನಿರುದ್ಧನು ಸಂಗ್ರಾಮಪಟುವಾಗಿದ್ದನು. ಅವನಲ್ಲಿ ಅಮೋಘವಾದ ದಿವ್ಯಾಸ್ತ್ರಗಳಿದ್ದವು. ಬಾಣಾಸುರನ ಸೈನಿಕರು ಅಂತಃಪುರವನ್ನು ಮುತ್ತಿದರು. ಅನಿರುದ್ಧನು ಧನುರ್ಧಾರಿಯಾಗಿ ಹೊರಬಿದ್ದು ಎಲ್ಲ ಸೈನಿಕರನ್ನು ಸಂಹರಿಸಿದನು. ತರುವಾಯ ರಥರೂಢನಾಗಿ ಬಂದಿದ್ದ ಬಾಣನ ಮೇಲೆ ತನ್ನಲ್ಲಿಯ ಅದ್ಭುತ ಶಕ್ತಿಯನ್ನು ಪ್ರಯೋಗಿಸಲು ಸಿದ್ಧನಾದನು. ಕೂಡಲೆ ಅವನು ರಥ, ಸಾರಥಿ ಕುದುರೆಗಳಿಂದ ಸಹಿತನಾಗಿ ಅದೃಶ್ಯನಾದನು. ತರುವಾಯ ಅವನು ಅನಿರುದ್ಧನನ್ನು ನಾಗಪಾಶದಿಂದ ಬಂಧಿಸಿ ಪಂಜರದಲ್ಲಿಡಿಸಿದನು. ತರುವಾಯ ಅವನನ್ನು ಸಂಹರಿಸಿಬಿಡುವ ಯೋಚನೆ ಮಾಡಿ, ಸೂತನಾದ ಕುಂಭಾಂಡನನ್ನು ಕರೆಯಿಸಿ ಆ ಬಗ್ಗೆ ವಿಚಾರ ಮಾಡತೊಡಗಿದನು. ಬಾವಿಯಲ್ಲಿ ಕೆಡಹಿ ಕೊಲ್ಲಬೇಕೆಂದು ಅವನು ಸೂತನಿಗೆ ಹೇಳಿದನು.

ಕುಂಭಾಂಡ–ರಾಜೇಂದ್ರಾ, ನೀನು ಈ ವಿಷಯದಲ್ಲಿ ವಿಚಾರದಿಂದ ಕಾರ್ಯ ಮಾಡು. ನಿನ್ನ ಪುತ್ರಿಯ ಅಂತಃಪುರವನ್ನು ಪ್ರವೇಶಿಸಬೇಕಾದರೆ ಆ ತರುಣನು ವೀರಾಧಿ ವೀರನಿರಬೇಕು. ಒಬ್ಬನೇ ನಿನ್ನ ಹತ್ತು ಸಾವಿರ ಸೈನಿಕರನ್ನು ಸಂಹರಿಸಿದನು. ನೋಡಲಿಕ್ಕೆ ಅವನು ಶ್ರೀವಿಷ್ಣುವಿನಂತೆ ಕಾಣುತ್ತಿರುವನು.

ಕುಂಭಾಂಡನು ಹೀಗೆ ಬಾಣನಿಗೆ ಹೇಳಿ ಅನಿರುದ್ಧನ ಬಳಿಗೆ ಬಂದು, ಬಾಣನಿಗೆ ಶರಣಾಗತನಾಗಲು ತಿಳಿಸಿದನು.

ಅನಿರುದ್ಧ–ನಿಶಾಚರಾ, ನಿನಗೆ ಕ್ಷತ್ರಿಯ ಧರ್ಮದ ಜ್ಞಾನವಿಲ್ಲ. ವೀರ ಕ್ಷತ್ರಿಯನು ಪ್ರಾಣ ಹೋದರೂ ಶರಣಾಗತನಾಗುವದಿಲ್ಲ. ಕಾದುತ್ತ ಕಾದುತ್ತ ಮರಣವನ್ನಪ್ಪುವದೇ ಕ್ಷತ್ರಿಯನಿಗೆ ಭೂಷಣವೂ, ಸದ್ಗತಿದಾಯಕವೂ ಆಗಿದೆ.

ಕ್ಷತ್ರಿಯಸ್ಯ ರಣೇ ಶ್ರೇಯೋ ಮರಣಂ ಸಮ್ಮುಖೇ ಸದಾ ।
ನ ವೀರ ಮಾನಿನೋ ಭೂಮೌ ದೀನಸ್ಯೇವ ಕೃತಾಂಜಲೇ ॥

(ಶಿ. ಪು. ರು. ಸಂ. ಯುದ್ಧ ಖಂಡ, ೫೩–೩೫)

ಮಹಾ ಬಲಶಾಲಿಯಾದ ಬಾಣಾಸುರಾ, ನಿನ್ನ ಇಚ್ಛೆಯ ಪ್ರಕಾರ ಭಗವಾನ್ ರುದ್ರದೇವನು ಹೂಡಿದ ನಾಟಕವಿದು. ಇದರಲ್ಲಿ ನಿನ್ನ ಗರ್ವಭಂಗ ಮಾಡುವ ಉದ್ದೇಶವು ಸದಾಶಿವನದಿರುವದು. ದೈವಸಂಕೇತದ ಮೇರೆಗೆ ನಿನ್ನ ಕುಮಾರಿಯ ಅಂತಃಪುರದಲ್ಲಿ ಆ ದೇವಕುಮಾರನ ಪ್ರವೇಶವಾಗಿದೆ. ನೀನು ಅವನ

ಪ್ರಾಣಕ್ಕೆ ಅಪಾಯ ಮಾಡುವ ಗೋಜಿಗೆ ಹೋಗಕೂಡದು, ಎಂದು ಆಕಾಶ ವಾಣಿಯಾಯಿತು.

ಅನಿರುದ್ಧನು ತನ್ನ ಮೇಲೆ ಬಂದ ವಿಪತ್ತನ್ನು ಪರಿಹರಿಸಬೇಕೆಂದು ದುರ್ಗೆಯನ್ನು ಅನನ್ಯಭಾವದಿಂದ ಸ್ತುತಿಸತೊಡಗಿದನು. ಕೂಡಲೆ ಆದಿ ಮಾಯೆಯು ಅವನನ್ನು ನಾಗಪಾಶದಿಂದ ಮುಕ್ತಗೊಳಿಸಿದಳು. ಕೂಡಲೆ ಅವನು ಪ್ರೇಯಸಿಯಾದ ಉಷೆಯ ಬಳಿಗೆ ಬಂದನು.

ದೇವರ್ಷಿ ನಾರದನು ಶೋಣಿತಪುರದಲ್ಲಿ ನಡೆದ ಸಂಗತಿಯನ್ನು ದ್ವಾರಕೆಯಲ್ಲಿರುವ ಶ್ರೀಕೃಷ್ಣನಿಗೆ ತಿಳಿಸಿದನು. ಕೂಡಲೆ ಪ್ರದ್ಯುಮ್ನನ ನಾಯಕತ್ವದಲ್ಲಿ ಹತ್ತುಸಾವಿರ ಯಾದವ ಸೈನ್ಯವನ್ನು ತೆಗೆದುಕೊಂಡು ಶ್ರೀಕೃಷ್ಣನು ಶೋಣಿತಪುರಕ್ಕೆ ಬಂದನು. ಶ್ರೀಕೃಷ್ಣನು ಮೊದಲು ನಗರಾಧಿಪತಿಯಾಗಿದ್ದ ರುದ್ರದೇವನ ಬಳಿಗೆ ಬಂದು ಅವನಿಗೆ ವಂದಿಸಿದನು.

ಶಿವ–ಬಾಣಾಸುರನಿಗೆ ತನ್ನ ಬಾಹುಬಲದ ಅಹಂಕಾರವು ಯಥೇಷ್ಟ ವಾಗಿರುವದರಿಂದ ಅವನ ಗರ್ವಭಂಗಕ್ಕಾಗಿ ಈ ನಾಟಕವನ್ನು ಹೂಡಿರುವೆನು. ನೀನು ಸುದರ್ಶನದಿಂದ ಅವನ ಬಾಹುಗಳನ್ನು ಛೇದಿಸು.

ಶೋಣಿತಪುರದಲ್ಲಿ ಶ್ರೀಕೃಷ್ಣನ ಸೈನ್ಯಕ್ಕೂ ಬಾಣಾಸುರನ ಸೈನ್ಯಕ್ಕೂ ಸಂಗ್ರಾಮವು ಪ್ರಾರಂಭವಾಯಿತು. ಶ್ರೀಕೃಷ್ಣನು ಬಾಣನ ಬಾಹುಗಳನ್ನು ಸುದರ್ಶನದಿಂದ ಛೇದಿಸಿ ಗರ್ವಭಂಗ ಮಾಡಿದನು. ತರುವಾಯ ಅವನು ಶ್ರೀಕೃಷ್ಣನಿಗೆ ಶರಣಾಗತನಾದನು. ಭಗವಾನ್ ಶಂಭುವಿನ ಬಳಿಗೆ ಬಂದು ವಂದಿಸಿ ಕ್ಷಮೆ ಬೇಡಿದನು.

ಬಾಣಾಸುರನು ಶಿವನ ಕೃಪೆಯಿಂದ ಸಂಗ್ರಾಮಕ್ಲೇಶರಹಿತನಾದನು. ಅವನು ತನ್ನ ವಾತ್ಸಲ್ಯದ ಪುತ್ರಿಯಾದ ಉಷೆಯನ್ನು ವಿಧಿಪೂರ್ವಕವಾಗಿ ಅನಿರುದ್ಧ ನಿಗೆ ವಿವಾಹ ಮಾಡಿಕೊಟ್ಟನು.

ಮಹೇಶ್ವರನು ಬಲಿಪುತ್ರ ಬಾಣನನ್ನು ತನ್ನ ಪ್ರಮಥ ಗಣದ ಅಕ್ಷಯ ಗಣನಾಯಕತ್ವವನ್ನು ದೊರಕಿಸಿ ಕೊಟ್ಟನು. ಶ್ರೀಕೃಷ್ಣನು ಭಗವಾನ್ ರುದ್ರ ದೇವನಿಗೆ ವಂದಿಸಿದನು. ಬಾಣಾಸುರನ ನಿರೋಪ ಹೊಂದಿ ಮೊಮ್ಮಗನಾದ ಅನಿರುದ್ಧನನ್ನೂ ಮೊಮ್ಮಗಳಾದ ಉಷೆಯನ್ನೂ ಕರೆದುಕೊಂಡು ಹರುಷದಿಂದ ದ್ವಾರಕಾವತಿಗೆ ಪ್ರಯಾಣ ಮಾಡಿದನು.

# ಗಜಾಸುರ, ದುಂದುಭಿ, ನಿರ್ಹ್ರಾದ, ವಿದಲ-ಉತ್ಪಲರ ವಧ

ಸೂತಪುರಾಣಿಕ–ಶೌನಕ ಮಹರ್ಷಿಯೆ, ವ್ಯಾಸಮುನಿಯು ಶಿವನ ಚರಿತ್ರವನ್ನು ಕೇಳಲು ಆತುರನಾಗಿದ್ದನು. ಭಗವಾನ್ ರುದ್ರದೇವನಿಂದ ಮತ್ತೆ ಯಾವ ಯಾವ ನಾಮಾಂಕಿತ ದೈತ್ಯರು ನಾಶವಾದರೆಂಬುದನ್ನು ವಿಚಾರಿಸಿದನು.

ಸನತ್ಕುಮಾರ–ಒಂದಾನೊಂದು ಕಾಲದಲ್ಲಿ ದಾನವರಾಜ ಗಜಾಸುರನು ಅತ್ಯಂತ ಬಲಾಢ್ಯನಾಗಿದ್ದನು. ಅವನು ಮಹಿಷಾಸುರನ ಪುತ್ರನು. ಭಗವತಿ ಜಗದಂಬೆಯು ದೇವತೆಗಳ ಪ್ರೇರಣೆಯಿಂದ ತನ್ನ ತಂದೆಯನ್ನು ಸಂಹರಿಸಿದ್ದಕ್ಕಾಗಿ ಅವನು ಅವಳ ಮೇಲೆ ರುಷ್ಟನಾಗಿದ್ದನು. ಈ ಸೇಡನ್ನು ತೀರಿಸಿಕೊಳ್ಳಬೇಕೆಂದು ಅವನು ಉಗ್ರ ತಪವನ್ನು ಮಾಡಿ ಬ್ರಹ್ಮನನ್ನು ಮೆಚ್ಚಿಸಿಕೊಂಡನು. ಕಾಮವಶರಾದ ಸ್ತ್ರೀ–ಪುರುಷರಿಂದ ತನಗೆ ಮರಣವು ಸಂಭವಿಸಬಾರದೆಂದು ವರವನ್ನು ಪಡೆದನು.

ಗಜಾಸುರನು ದೇವತೆಗಳಿಗೆ ಪೀಡೆ ಕೊಡತೊಡಗಿದನು. ಆಗ ರುದ್ರದೇವನು ಅವನನ್ನು ಸಂಹರಿಸಲು ಕಟಿಬದ್ಧನಾದನು. ರುದ್ರದೇವನು ಕಾಮ ವಿಜಯಿಯಾದುದರಿಂದ ಗಜಾಸುರನನ್ನು ಸಂಗ್ರಾಮಕ್ಕೆ ಆಹ್ವಾನಿಸಿದನು. ಕಾಳಗದಲ್ಲಿ ಶಿವನು ಗಜಾಸುರನನ್ನು ಸಂಹರಿಸಿದನು. ತನ್ನ ಚರ್ಮವನ್ನು ಧರಿಸಬೇಕೆಂದು ಗಜಾಸುರನು ಪ್ರಾಣೋತ್ಕ್ರಮಣಕ್ಕಿಂತ ಮೊದಲು ಶಿವನನ್ನು ಪ್ರಾರ್ಥಿಸಿದ್ದನು. ಭಕ್ತವತ್ಸಲನಾದ ಶಿವನು ಅವನ ಚರ್ಮವನ್ನು ಧರಿಸಿ ಗಜಚರ್ಮಾಂಬರನೆಂದೂ ಕೃತ್ತಿವಾಸನೆಂದೂ ಕರೆಯಿಸಿಕೊಂಡನು.

ಕಶ್ಯಪಪತ್ನಿಯಾದ ದಿತಿಯು ತನ್ನ ಪುತ್ರರಾದ ಹಿರಣ್ಯಕಶ್ಯಪ, ಹಿರಣ್ಯಾಕ್ಷ ರನ್ನು ಭಗವಾನ್ ಶ್ರೀಹರಿಯು ನರಸಿಂಹವರಾಹತಾರವನ್ನು ತಾಳಿನಾಶ ಮಾಡಿದ್ದನು. ಆಗ ಅವನ ವಂಶಜರಾದ ದುಂದುಭಿ ನಿರ್ಹ್ರಾದನು ಈ ಸೇಡು ತೀರಿಸಿಕೊಳ್ಳಲು ಕಟ್ಟಿಬದ್ಧನಾದನು. ಬ್ರಾಹ್ಮಣರ ಯಜ್ಞದಿಂದಲೇ ದೇವತೆಗಳಿಗೆ ಬಲಬರುವದೆಂದು ಭಾವಿಸಿ ಅವನನ್ನು ಕೊಲ್ಲುವ ಸಂಕಲ್ಪ ಮಾಡಿದನು. ಅವನು ವ್ಯಾಘ್ರರೂಪದಿಂದ ಬ್ರಾಹ್ಮಣರನ್ನು ಹಿಡಿದು ತಿನ್ನತೊಡಗಿದನು, ಭಗವಾನ್ ರುದ್ರದೇವನು ವ್ಯಾಘ್ರರೂಪದ ಆ ದೈತ್ಯನನ್ನು ಬಗಲಲ್ಲಿ ತೆಗೆದುಕೊಂಡು ಅವನ

ಶಿರಸ್ಸಿಗೆ ಬಲವಾದ ಆಘಾತಮಾಡಿ ಸಂಹರಿಸಿದನು. ದೈತ್ಯನು ನಷ್ಟವಾದ ಸ್ಥಳದಲ್ಲಿಯ ಲಿಂಗಕ್ಕೆ ವ್ಯಾಘ್ರೇಶ್ವರನೆನ್ನುವರು.

ವಿದಲ-ಉತ್ಪಲರೆಂಬ ದೈತ್ಯರು ಜಗಜ್ಜನನಿ ಪಾರ್ವತಿಯ ಮೇಲೆ ಮೋಹಿತರಾದರು. ರುದ್ರದೇವನಿಗೆ ಈ ಸಂಗತಿಯು ತಿಳಿಯಿತು. ಆಗ ಅವನು ಚೆಂಡಿನ ಪ್ರಹಾರದಿಂದ ದೈತ್ಯರನ್ನು ನಾಶಗೊಳಿಸಬೇಕೆಂದು ಪಾರ್ವತಿಗೆ ತಿಳಿಸಿದನು. ಅದರಂತೆ ದೇವಿಯು ಆ ದೈತ್ಯರ ಮೇಲೆ ಚೆಂಡಿನಿಂದ ಪ್ರಹಾರ ಮಾಡಿ ಸಂಹರಿಸಿದಳು. ತರುವಾಯ ಆ ಚೆಂಡು ಅಲ್ಲಿಯೇ ಶಿವಲಿಂಗ ಸ್ವರೂಪದಿಂದ ನೆಲೆಯೂರಿತು. ಆ ಲಿಂಗಕ್ಕೆ ಕಂದುಕೇಶ್ವರನೆನ್ನುವರು.

ರುದ್ರ ಸಂಹಿತಾ : ಪಂಚಮ (ಯುದ್ಧ) ಖಂಡ ಸಮಾಪ್ತ.

## ಶತರುದ್ರಸಂಹಿತಾ

# ಶಿವನ ಐದು ಅವತಾರಗಳು

ವಂದೇ ಮಹಾನಂದಮನಂತಲೀಲಂ ಮಹೇಶ್ವರಂ ಸರ್ವವಿಭುಂ
ಮಹಾಂತಂ ।
ಗೌರೀಪ್ರಿಯಂ ಕಾರ್ತಿಕ-ವಿಘ್ನರಾಜಸಮುದ್ಭವಂ ಶಂಕರ
ಮಾದಿದೇವಂ ॥

ಪರಮಾನಂದಮಯನೂ ಅನಂತಲೀಲೆಯವನೂ, ಮಹೇಶ್ವರನೂ, ಸರ್ವವಿಭುವೂ, ಮಹಾಂತನೂ, ಗೌರೀಪ್ರಿಯನೂ ಕಾರ್ತಿಕ, ವಿಘ್ನೇಶ್ವರ ಗಣೇಶನನ್ನು ಉತ್ಪನ್ನ ಮಾಡಿದವನೂ ಆದ ಆದಿದೇವ ಶಂಕರನನ್ನು ವಂದಿಸುವೆನು.

ಶೌನಕ ಮಹರ್ಷಿ-ಮಹಾಭಾಗನಾದ ಸೂತಪುರಾಣಿಕನೆ, ನೀನು ವ್ಯಾಸಮುನಿಯ ಪರಮ ಶಿಷ್ಯನಿರುವೆ, ಜ್ಞಾನಿಯಿರುವೆ. ಶಂಭುವಿನ ಅವತಾರಗಳ ಜ್ಞಾನ ಮಾಡಿಕೊಡಬೇಕು.

ಸೂತಪುರಾಣಿಕ–ಶೌನಕಋಷಿಯೆ, ಪೂರ್ವಕಾಲದಲ್ಲಿ ಸನತ್ಕುಮಾರನು ನಂದೀಶ್ವರನಿಗೆ ಹೀಗೆಯೆ ಪ್ರಶ್ನೆ ಮಾಡಿದನು. ಆಗ ನಂದೀಶ್ವರನು ಶಿವಸ್ಮರಣೆ ಮಾಡಿ, ಶಂಭುವಿನ ಅವತಾರಗಳ ಬಗೆಗೆ ವಿವರಿಸಿದನು.

ನಂದೀಶ್ವರ–ಮುನೀಶ್ವರನೆ, ಸರ್ವೇಶ್ವರ ಶಂಭುವು ಕಲ್ಪ ಕಲ್ಪಾಂತರದಲ್ಲಿ ಅಸಂಖ್ಯ ಅವತಾರ ತಾಳಿದನು. ಆದರೆ ನಾನು ನನ್ನ ಬುದ್ಧಿಗನುಸಾರವಾಗಿ ಅವುಗಳಲ್ಲಿ ಕೆಲವು ಹೇಳುವೆನು. ಶ್ವೇತಲೋಹಿತವೆಂಬ ಹತ್ತೊಂಭತ್ತನೆಯ ಕಲ್ಪದಲ್ಲಿ ಶಿವನು ಸದ್ಯೋಜಾತ ಎಂಬ ಹೆಸರಿನ ಅವತಾರ ತಾಳಿದನು. ಇದು ಅವನ ಮೊದಲ ಅವತಾರವು. ಆ ಕಾಲದಲ್ಲಿ ಬ್ರಹ್ಮನು ಪರಬ್ರಹ್ಮನ ಧ್ಯಾನಮಗ್ನನಾದಾಗ ಒಬ್ಬ ಶ್ವೇತ ಮತ್ತು ಲೋಹಿತ ವರ್ಣದ ಶಿಖಾಧಾರಿ ಕುಮಾರನು ಉತ್ಪನ್ನನಾದನು. ಇವನು ಶಿವನೇ ಇರುವನೆಂದು ಬ್ರಹ್ಮನಿಗೆ ಜ್ಞಾನವಾಯಿತು. ಅವನು ಸದ್ಯೋಜಾತನನ್ನು ವಂದಿಸಿದನು. ಅಷ್ಟರಲ್ಲಿ ನಾಲ್ಕು ಜನ ಯಶಸ್ವಿ ಕುಮಾರರು ಪ್ರಕಟರಾದರು. ಸುನಂದ, ನಂದನ, ವಿಶ್ವ ನಂದ, ಉಪನಂದನ ಎಂಬ ಹೆಸರಿನ ಈ ನಾಲ್ವರೂ ಮಹಾತ್ಮರಾಗಿದ್ದರು. ಸದ್ಯೋಜಾತ ರೂಪದಿಂದ ಪ್ರಕಟನಾದ ಶಿವನು ಬ್ರಹ್ಮನಿಗೆ ಸೃಷ್ಟಿ ರಚನಾದಿ ಶಕ್ತಿಯನ್ನು ಕೊಟ್ಟನು. ಒಂದನೆಯ ಅವತಾರವು ಸದ್ಯೋಜಾತ.

ತರುವಾಯ ರಕ್ತವೆಂಬ ಹೆಸರಿನ ಇಪ್ಪತ್ತನೆಯ ಕಲ್ಪದಲ್ಲಿ ಬ್ರಹ್ಮನು ರಕ್ತವರ್ಣದ ಶರೀರವನ್ನು ಧಾರಣ ಮಾಡಿದನು. ಆಗ ವಾಮದೇವ ಶಿವನು ಪ್ರಾದುರ್ಭವಿಸಿದನು. ಬ್ರಹ್ಮದೇವನು ವಾಮದೇವನಿಗೆ ಪ್ರಣಾಮ ಮಾಡಿದನು. ಬ್ರಹ್ಮದೇವನಿಗೆ ವಾಮದೇವನು ಸೃಷ್ಟಿ ರಚನೆಯ ಶಕ್ತಿಯನ್ನು ದಯಪಾಲಿಸಿದನು. ಶಿವನ ಎರಡನೆಯ ಅವತಾರವು ವಾಮದೇವ.

ತರುವಾಯ ಪೀತಾವಾಸನೆಂಬ ಇಪ್ಪತ್ತೊಂದನೆಯ ಕಲ್ಪದಲ್ಲಿ ತತ್ಪುರುಷ ಎಂಬ ಶಿವನ ಮೂರನೆಯ ಅವತಾರವಾಯಿತು. ಆಗ ಬ್ರಹ್ಮದೇವನು ಧ್ಯಾನಯುಕ್ತನಾಗಿ ಮಹಾದೇವೀ, ಶಾಂಕರೀ, ಗಾಯತ್ರೀ (ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ) ಜಪದಿಂದ ನಮಸ್ಕರಿಸಿದನು. ಇದು ತತ್ಪುರುಷ ಎಂಬ ಹೆಸರಿನ ಮೂರನೆಯ ಅವತಾರವು.

ಬಳಿಕ 'ಶಿವ' ನಾಮಕ ಕಲ್ಪವು ಪ್ರಾರಂಭವಾಯಿತು. ಬ್ರಹ್ಮನು ಪ್ರಜಾ

ಸೃಷ್ಟಿಯ ವಿಚಾರ ಮಾಡುತ್ತಿರುವಾಗ ಒಬ್ಬ ಕುಮಾರನು ಉತ್ಪನ್ನವಾದನು. ಆ ಬಾಲಕನ ಅಂಗವು ಕಪ್ಪಾಗಿತ್ತು. ಅವನು ಭಯಂಕರ ಪರಾಕ್ರಮಿಯಾಗಿದ್ದನು. ಬ್ರಹ್ಮ ದೇವನು ಅಘೋರನಿಗೆ ಪ್ರಣಾಮ ಮಾಡಿದನು. ಅಘೋರನ ಪಾರ್ಶ್ವ ಭಾಗದಲ್ಲಿ ಕೃಷ್ಣ, ಕೃಷ್ಣ ಶಿಖ, ಕೃಷ್ಣಾಸ್ಯ, ಕೃಷ್ಣ ಕಂಠದ್ಯಕ್ ಎಂಬ ನಾಲ್ಕು ಮನಸ್ವಿ ಕುಮಾರರು ಉತ್ಪನ್ನರಾದರು. ಈ ಮಹಾತ್ಮರು ಬ್ರಹ್ಮನ ಸೃಷ್ಟಿ ರಚನೆಗಾಗಿ ಘೋರ ಎಂಬ ಹೆಸರಿನ ಯೋಗವನ್ನು ಪ್ರಚಾರ ಮಾಡಿದರು. ಇದು ಅಘೋರ ಎಂಬ ಹೆಸರಿನ ನಾಲ್ಕನೆಯ ಅವತಾರವು.

ಅನಂತರದಲ್ಲಿ ವಿಶ್ವರೂಪವೆಂಬ ಕಲ್ಪವು ಪ್ರಾರಂಭವಾಯಿತು. ಈ ಕಲ್ಪದಲ್ಲಿ ಬ್ರಹ್ಮನು ಪ್ರಜೋತ್ಪತ್ತಿಗಾಗಿ ಶಿವನ ಧ್ಯಾನಮಾಡತೊಡಗಿದನು. ಆ ಸಮಯದಲ್ಲಿ ಸಿಂಹನಾದ ಮಾಡುವ ಸರಸ್ವತಿಯು ಪ್ರಕಟಳಾದಳು; ಹಾಗೂ ಪರಮೇಶ್ವರ ಈಶಾನನು ಪ್ರಾದುರ್ಭೂತನಾದನು. ಅವನ ವರ್ಣವು ಸ್ಫಟಿಕ ಸದೃಶವಾಗಿತ್ತು. ಬ್ರಹ್ಮದೇವನು ಈಶಾನನಿಗೆ ವಂದಿಸಿದನು. ಶಕ್ತಿ ಸಹಿತನಾದ ಪ್ರಭು ಈಶಾನನು ಬ್ರಹ್ಮನಿಗೆ ಉಪದೇಶ ಮಾಡಿ, ಜಟಿ, ಮುಂಡೀ, ಶಿಖಂಡಿ, ಅರ್ಧಮುಂಡ ಎಂಬ ನಾಲ್ಕು ಬಾಲಕರನ್ನು ನಿರ್ಮಾಣ ಮಾಡಿದನು. ಈ ಈಶಾನನು ಶಿವನ ಐದನೆಯ ಅವತಾರವು.

ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ, ಈಶಾನ ಇವು ಐದು ಶಿವನ ಅವತಾರಗಳಾಗಿವೆ.

## ನಂದೀಶ್ವರ

ಶಿಲಾದನೆಂಬ ಧರ್ಮಾತ್ಮನಾದ ಮುನಿಯು ಇದ್ದನು. ಅವನು ಪಿತೃಗಳ ಆದೇಶದಂತೆ ಅಯೋನಿಜನೂ ಚಿರಂಜೀವಿಯೂ ಆದ ಪುತ್ರನನ್ನು ಪಡೆದು ಕೊಳ್ಳಲು ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಿಕೊಂಡನು. ಶಿವನು ಅವನ ಅಭಿಲಾಷೆಯನ್ನು ಈಡೇರಿಸಿದನು. ಶಿಲಾದ ಮುನಿಯು ಪುತ್ರಪ್ರಾಪ್ತಿಗೆ ಯಜ್ಞವನ್ನು ಪ್ರಾರಂಭಿಸುವಷ್ಟರಲ್ಲಿ ಅವನ ದೇಹದಿಂದ ಒಬ್ಬ ಪುತ್ರನು ಪ್ರಕಟನಾದನು. ಶಿವಾಜ್ಞೆಯಂತೆ ಶಿಲಾದ ಮುನಿಯು ಆ ಪುತ್ರನಿಗೆ ನಂದಿ ಎಂದು ನಾಮಕರಣ ಮಾಡಿದನು. ನಂದಿಯು ಶಿವನ ಅಂಶವೇ ಆಗಿದ್ದನು. ಪರಮಾತ್ಮನೇ ತನಗೆ

ಮಗುವಾಗಿ ಜನಿಸಿದನೆಂದು ಮುನಿಯು ಆನಂದವುಳ್ಳವನಾದನು. ನಂದಿಯು ಅತ್ಯಂತ ಪ್ರಭಾವಶಾಲಿಯಾಗಿದ್ದನು. ಅವನು ರುದ್ರನ ಪ್ರತಿರೂಪವೇ ಆಗಿದ್ದನು. ಸಾಲಂಕಾಯನ ನಂದನನಾದ ಶಿಲಾದ ಮುನಿಯು ನಂದೀಶ್ವರನ ಜಾತಕರ್ಮಾದಿಗಳನ್ನು ಪೂರ್ತಿಗೊಳಿಸಿ ಐದನೆಯ ವರ್ಷದಲ್ಲಿ ಸಂಪೂರ್ಣ ವೇದಶಾಸ್ತ್ರಗಳ ಅಧ್ಯಯನ ಮಾಡಿಸಿದನು. ಮುಂದೆ ಸ್ವಲ್ಪ ದಿನಗಳಲ್ಲಿ ಮಿತ್ರ ಹಾಗೂ ವರುಣ ಮುನಿಗಳು ಶಿಲಾದ ಮುನಿಯ ಆಶ್ರಮಕ್ಕೆ ಬಂದರು. ಆಗ ಅವರು ನಂದೀಶ್ವರನನ್ನು ನೋಡಿದರು. ಕೂಡಲೆ ಅವರು ಶಿಲಾದ ಮುನಿಯನ್ನುದ್ದೇಶಿಸಿ ಹೇಳಿದರು.

ಮಿತ್ರ ಮತ್ತು ವರುಣ–ಶಿಲಾದ ಮುನೀಶ್ವರಾ, ಈ ನಿನ್ನ ಕುಮಾರನು ಪರಾಕ್ರಮಿಯೂ ವಿದ್ವಾಂಸನೂ ಇರುವನು. ಆದರೆ ಇವನ ಆಯುವು ಮುಗಿಯುತ್ತ ಬಂದಿರುವದು. ನಿನ್ನ ಪುತ್ರನಾದ ನಂದೀಶ್ವರನು ಅಲ್ಪಾಯುವಾಗಿರುವನು. ಇವನು ಇನ್ನು ಒಂದು ವರ್ಷ ಮಾತ್ರ ಬಾಳುವನು.

ಮಿತ್ರ, ವರುಣ ಋಷಿಗಳಿಂದ ಮಗನು ಅಲ್ಪಾಯುವಾಗಿರುವ ಸಂಗತಿಯನ್ನು ಕೇಳಿ ಶಿಲಾದ ಮುನಿಗೆ ಬಹಳೇ ದುಃಖವಾಯಿತು. ಆಗ ನಂದೀಶ್ವರನು ತಂದೆಯನ್ನು ಸಾಂತ್ವನಪಡಿಸತೊಡಗಿದನು.

ನಂದೀಶ್ವರ–ತಂದೆಯೆ, ನೀನು ಚಿಂತಿಸಬೇಡ, ನಾನು ಮಹಾದೇವನ ಭಜನೆ ಮಾಡಿ ಮೃತ್ಯುವನ್ನು ಜಯಿಸುವೆನು. ನೀನು ನಿಶ್ಚಿಂತನಾಗು.

ನಂದೀಶ್ವರನು ಹೀಗೆ ನುಡಿದು ತಂದೆಗೆ ಪ್ರದಕ್ಷಿಣೆ ಮಾಡಿ, ತಪಾಚರಣೆ ಮಾಡುವದಕ್ಕಾಗಿ ವನಕ್ಕೆ ತೆರಳಿದನು. ಅವನು ತ್ರಿನೇತ್ರಧಾರಿ ಸದಾಶಿವನನ್ನು ಏಕಾಗ್ರ ಚಿತ್ತದಿಂದ ಧ್ಯಾನಮಾಡತೊಡಗಿದನು. ಅವನ ತಪಕ್ಕೆ ಶಿವನು ಒಲಿದನು. ಅವನು ಉಮಾದೇವಿಯೊಡನೆ ಬಂದು ನಂದಿಗೆ ದರ್ಶನ ಕೊಟ್ಟನು.

ಶಿವ–ಶಿಲಾದ ನಂದನಾ, ನೀನು ನನಗೆ ಸಮಾನವಾಗಿರುವೆ. ನಿನ್ನ ತಪಸ್ಸಿಗೆ ನಾನು ಸಂತುಷ್ಟನಾಗಿದ್ದೇನೆ. ಇನ್ನು ನಿನಗೆ ಮೃತ್ಯುವಿನ ಭಯವಿಲ್ಲ. ನೀನು ಅಜರನೂ ಅಮರನೂ ದುಃಖರಹಿತನೂ, ಅವ್ಯಯನೂ, ಅಕ್ಷಯನೂ ಆಗಿ ನನ್ನ ಹತ್ತಿರವೇ ವಾಸಮಾಡುವೆ. ನೀನು ಗಣಾಧ್ಯಕ್ಷನಾಗುವೆ.

ಪರಮೇಶ್ವರನು ಹೀಗೆ ನುಡಿದು ತನ್ನ ಕೊರಳಲ್ಲಿದ್ದ ಕಮಲ ಮಾಲೆಯನ್ನು ನಂದಿಯ ಕೊರಳಲ್ಲಿ ಹಾಕಿದನು. ತರುವಾಯ ಅವನು ತನ್ನ ಜಟದಲ್ಲಿರುವ

ಗಂಗಾಜಲವನ್ನು ಭೂಮಿಗೆ ಹಾಕಿದನು. ಕೂಡಲೆ ಆ ಜಲವು ಪಂಚ ನದಿಯಾಗಿ ಹರಿಯತೊಡಗಿತು. ಜಟೋದಕಾ, ತ್ರಿಸ್ರೋತಾ, ವೃಷಧ್ವನಿ, ಸ್ವರ್ಣೋದಕಾ, ಜಂಬೂನದಿ ಹೀಗೆ ಆ ಪಂಚ ನದಿಗಳ ಹೆಸರುಗಳಾದವು.

ಉಮಾದೇವಿ–ಜಗದೀಶ್ವರಾ, ಶಿಲಾದ ನಂದನನು ನನಗೆ ಪುತ್ರ ಸಮಾನನು. ನೀನು ಇವನನ್ನು ಗಣಾಧ್ಯಕ್ಷನನ್ನು ಮಾಡಿದ್ದು ವಿಹಿತವಾಯಿತು.

ನಂದೀಶ್ವರನಿಗೆ ಗಣಾಧ್ಯಕ್ಷ ಸ್ಥಾನದ ಪಟ್ಟಾಭಿಷೇಕವಾಯಿತು. ತರುವಾಯ ಎಲ್ಲ ಮುನಿಗಳೂ ಸೇರಿ ಮರುತರ ಸುಲಕ್ಷಣ ಕನ್ಯೆಯಾದ ಸುಯಶೆಯನ್ನು ನಂದೀಶ್ವರನಿಗೆ ಕೊಡಿಸಿ ವಿವಾಹ ಸಮಾರಂಭವನ್ನು ನೆರವೇರಿಸಿದರು. ಶಿವನು ಶಿಲಾದ ಮುನಿಯನ್ನು ಪ್ರಮಥ ಗಣಗಳಲ್ಲಿ ಸಮಾವೇಶಗೊಳಿಸಿದನು. ಉಮಾದೇವಿಯು ನಂದೀಶ್ವರನಿಗೆ ಆಶೀರ್ವಾದ ಮಾಡಿದಳು.

## ಶಿವನ ದಶಾವತಾರ-ಏಕಾದಶ ರುದ್ರರು

ನಂದೀಶ್ವರ–ಸನತ್ಕುಮಾರ ಮುನಿಯೆ, ಪರಮೇಶ್ವರ ಶಿವನು ಜಗತ್ಕಲ್ಯಾಣಕ್ಕಾಗಿ ಅನೇಕ ಅವತಾರಗಳನ್ನು ಮಾಡಿದನು. ಅವನು ಮಾರ್ಗಶೀರ್ಷ ಮಾಸ ಕೃಷ್ಣ ಪಕ್ಷ ಅಷ್ಟಮಿಯ ದಿವಸ ಕಾಲಭೈರವ ರೂಪದಿಂದ ಅವತಾರ ಮಾಡಿದನು. ಅಂದು ಕಾಲಭೈರವನನ್ನು ಪೂಜಿಸಿ, ಉಪವಾಸ ಮಾಡಿ ರಾತ್ರಿಯಲ್ಲಿ ಜಾಗರಣ ಮಾಡಿ ಅವನ ಧ್ಯಾನ ಮಾಡಿದರೆ ಮನುಷ್ಯನು ಸರ್ವಪಾಪದಿಂದ ಮುಕ್ತನಾಗುವನು. ಕಾಶಿಯಲ್ಲಿ ಅವನ ಪ್ರಭಾವವು ಬಹಳ. ವಾರಣಾಸಿಯಲ್ಲಿ ನಿವಾಸ ಮಾಡಿ ಕಾಲಭೈರವನ ಭಜನ, ಪೂಜನಗಳನ್ನು ಮಾಡಿದರೆ ಸದ್ಗತಿಯು ದೊರೆಯುವದು.

ಮುನಿಯೆ, ಭಗವಾನ್ ಶಿವನು ವಿಶ್ವಾನರ ಋಷಿಯ ಪತ್ನಿಯಾದ ಶುಚಿಷ್ಮತಿಯ ಉದರದಿಂದ ಗೃಹಪತಿ ಎಂಬ ಹೆಸರಿನಿಂದ ಜನಿಸಿದನು. ಗೃಹಪತಿಯು ಅಗ್ನಿಲೋಕದ ಅಧಿಪತಿಯಾಗಿ ದಿಕ್ಪತಿ ಆಗ್ನೇಯನಾದನು. ವಿಶ್ವಾನರನ ಹಾಗೂ ಅವನ ಪತ್ನಿಯ ತಪಸ್ಸಿಗೆ ಮೆಚ್ಚಿ, ಅವರಿಗೆ ವರವನ್ನು ಕೊಟ್ಟ ಪ್ರಕಾರ ಆ ದಂಪತಿಗಳಿಂದ ಉತ್ಪನ್ನನಾದನು. ವಾರಣಾಸಿಯಲ್ಲಿ ಗೃಹಪತಿಯಿಂದ ಸ್ಥಾಪನೆಗೊಂಡ ಲಿಂಗಕ್ಕೆ ಅಗ್ನೀಶ್ವರನೆಂಬ ಹೆಸರು ಇರುವದು.

ಬ್ರಹ್ಮಪುತ್ರ ಸನತ್ಕುಮಾರಾ, ಭಗವಾನ್ ಶಂಕರನು ಹತ್ತು ಅವತಾರಗಳನ್ನು ಗ್ರಹಣ ಮಾಡಿದನು. ಅವುಗಳಲ್ಲಿ ಮಹಾಕಾಲನು ಮೊದಲನೆಯ ಅವತಾರವು. ಈ ಅವತಾರದಲ್ಲಿ ಭಗವತಿ ಮಹಾಕಾಲಿಯು ಶಕ್ತಿಯು. ಇವಳು ಭಕ್ತರ ಮನೋವಾಂಛನೆಯನ್ನು ಪೂರ್ಣಮಾಡುವ ಶಕ್ತಿಸಂಪನ್ನಳಿರುವಳು. ತಾರ ಎಂಬುದು ಶಿವನ ಎರಡನೆಯ ಅವತಾರವು. ತಾರದೇವನ ಶಕ್ತಿಯು ತಾರಾದೇವಿಯು. ಬಾಲ ಭುವನೇಶನೆಂಬುದು ಮಹಾದೇವನ ಮೂರನೆಯ ಅವತಾರವು. ಭುವನೇಶಿ ಶಿವೆಯು ಇವನ ಶಕ್ತಿಯು. ಷೋಡಶ ಶ್ರೀವಿದ್ಯೇಶ ಎಂಬುದು ಶಂಕರನ ನಾಲ್ಕನೆಯ ಅವತಾರವು. ಷೋಡಶ ಶ್ರೀವಿದ್ಯಾಶಿವೆಯು ಅವನ ಶಕ್ತಿಯು. ಭೈರವನು ಅವನ ಐದನೆಯ ಅವತಾರವು. ಭೈರವಿ ಗಿರಿಜೆಯು ಅವನ ಶಕ್ತಿಯು. ಛಿನ್ನಮಸ್ತಕವೆಂಬುದು ಶಿವನ ಆರನೆಯ ಅವತಾರವು. ಅವನ ಶಕ್ತಿಯು ಛಿನ್ನಮಸ್ತೆಯು. ಶಂಭುವಿನ ಏಳನೆಯ ಅವತಾರವು ಧೂಮ್ರವಾನ್. ಧೂಮಾವತಿಯು ಅವನ ಶಕ್ತಿಯು. ಶಿವನ ಎಂಟನೆಯ ಅವತಾರವು ಬಗಲಾ ಮುಖನು. ಅವನ ಶಕ್ತಿಯು ಬಗಲಾಮುಖಿಯು. ಒಂಭತ್ತನೆಯ ಶಿವಾವತಾರವು ಮಾತಂಗ. ಇವನ ಶಕ್ತಿಯು ಶರ್ವಾಣಿ ಮಾತಂಗಿ. ಹತ್ತನೆಯ ಅವತಾರವು ಕಮಲ. ಇವನ ಶಕ್ತಿಯು ಗಿರಿಜಾ ಕಮಲೆಯು. ಶಿವೋಪಾಸಕರು ಈ ದಶಾವತಾರಗಳ ಪೂಜೆ, ಧ್ಯಾನಾದಿಗಳಿಂದ ಇಚ್ಛಿತಫಲಗಳನ್ನು ಹೊಂದುವರು.

ಸನತ್ಕುಮಾರ ಮುನೀಶ್ವರಾ, ಭಗವಾನ್ ಶಂಕರನು ಏಕಾದಶ ರುದ್ರಾವತಾರ ಹೊಂದಿದನು. ಒಂದಾನೊಂದು ಸಮಯದಲ್ಲಿ ದೈತ್ಯರು ಅಮರಾವತಿಯ ಮೇಲೆ ದಾಳಿ ಮಾಡಿ ದೇವತೆಗಳನ್ನು ಪರಾಭವಗೊಳಿಸಿದರು. ಆಗ ಇಂದ್ರಾದಿ ದೇವತೆಗಳು ಕಶ್ಯಪ ಋಷಿಯ ಮೊರೆ ಹೊಕ್ಕರು. ಆಗ ಕಶ್ಯಪನು ಕಾಶಿಗೆ ಬಂದು ಶಿವಲಿಂಗ ಸ್ಥಾಪನೆ ಮಾಡಿ, ಭಗವಾನ್ ಮಹೇಶ್ವರನ ಧ್ಯಾನದಲ್ಲಿ ತೊಡಗಿದನು. ಆಗ ಶಿವನು ಅವನಿಗೆ ಪ್ರತ್ಯಕ್ಷನಾಗಿ ವರವನ್ನು ಬೇಡಲು ತಿಳಿಸಿದನು. ದೈತ್ಯರನ್ನು ಪರಾಭವಗೊಳಿಸಿ, ದೇವತೆಗಳಿಗೆ ಸ್ವರ್ಗರಾಜ್ಯವನ್ನು ದೊರಕಿಸಿ ಕೊಡಬೇಕೆಂದು ಕಶ್ಯಪನು ಬೇಡಿಕೊಂಡನು. ಸುರಭಿಯ ಉದರದಿಂದ ಹನ್ನೊಂದು ರುದ್ರರು ಪ್ರಾದುರ್ಭವ ಹೊಂದುವರೆಂದೂ ಅವರಿಂದ ದೇವತೆಗಳು ವಿಜಯ ಹೊಂದುವರೆಂದೂ ಶಂಕರನು ತಿಳಿಸಿದನು. ಪರಮಾತ್ಮನ ಹೇಳಿಕೆಯಂತೆ ಕಪಾಲಿ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಶಾಸ್ತಾ, ಅಜಪಾದ,

ಅಹಿರ್ಬುಧ್ನ್ಯ, ಶಂಭು, ಚಂಡ, ಭವ ಎಂಬವರು ಏಕಾದಶ ರುದ್ರರು. ಅವರು ದೈತ್ಯರನ್ನು ಸಂಹರಿಸಿದರು. ಸ್ವರ್ಗರಾಜ್ಯವು ದೇವತೆಗಳಿಗೆ ದೊರೆಯಿತು.

## ದತ್ತಾತ್ರೇಯ, ಆಂಜನೇಯ

ನಂದೀಶ್ವರ–ಸನತ್ಕುಮಾರ ಮುನಿಯೆ, ಪರಮ ಸತಿಶಿರೋಮಣಿ ಅನಸೂಯೆಯ ಪತಿಯಾದ ಅತ್ರಿಮಹರ್ಷಿಯು ಬ್ರಹ್ಮದೇವನ ನಿರ್ದೇಶಾನುಸಾರ ವಾಗಿ ಋಷ್ಯಕುಲ ಪರ್ವತದಲ್ಲಿ ಪುತ್ರೇಚ್ಛೆಯಿಂದ ಪತ್ನೀ ಸಮೇತನಾಗಿ ಘೋರ ತಪಶ್ಚರ್ಯ ಮಾಡಿದನು. ಅವನ ತಪಸ್ಸಿಗೆ ಪ್ರಸನ್ನರಾದ ತ್ರಿಮೂರ್ತಿಗಳು ಅವನ ಆಶ್ರಮಕ್ಕೆ ಬಂದು ಋಷಿಗೆ ದರ್ಶನ ಕೊಟ್ಟರು. ಆಗ ಬ್ರಹ್ಮ–ವಿಷ್ಣು–ಮಹೇಶ್ವರಿಗೆ ಪ್ರಣಾಮ ಮಾಡಿ, ಪುತ್ರರನ್ನು ದಯಪಾಲಿಸಬೇಕೆಂದು ಅತ್ರಿ ಮಹರ್ಷಿಯು ಬೇಡಿಕೊಂಡನು.

ತ್ರಿಮೂರ್ತಿಗಳು–ಅತ್ರಿಮುನಿಯೆ, ನೀನು ಯೋಗೇಶ್ವರನಿರುವೆ, ಸತಿ ಶಿರೋಮಣಿಯಾದ ಅನಸೂಯೆಯು ಯೋಗಿನಿಯಂತಿರುವಳು. ನಾವು ಮೂವರೂ ನಮ್ಮ ಅಂಶದಿಂದ ನಿಮ್ಮ ಪುತ್ರರಾಗುವೆವು. ಮೂವರು ಪುತ್ರರೂ ಲೋಕ ವಿಖ್ಯಾತರಾಗಿ ನಿಮ್ಮ ಕೀರ್ತಿಯನ್ನು ತ್ರಿಲೋಕಗಳಲ್ಲಿ ಬೆಳೆಯಿಸುವರು.

ತ್ರಿಮೂರ್ತಿಗಳು ಅಂತರ್ಧಾನರಾದರು. ಯೋಗ್ಯಕಾಲದಲ್ಲಿ ಆ ದಂಪತಿ ಗಳಿಗೆ ಬ್ರಹ್ಮದೇವನ ಅಂಶದಿಂದ ಚಂದ್ರಮನೂ, ವಿಷ್ಣುವಿನ ಅಂಶದಿಂದ ಶ್ರೇಷ್ಠ ಸಂನ್ಯಾಸ ಧರ್ಮವನ್ನು ಪ್ರಚಲಿತಗೊಳಿಸುವ ದತ್ತಾತ್ರೇಯನೂ, ರುದ್ರನ ಅಂಶದಿಂದ ಮುನಿವರ ದುರ್ವಾಸನೂ ಜನಿಸಿದರು. ದುರ್ವಾಸನು ಅಂಬರೀಷ ರಾಜನ ಸತ್ವ ಪರೀಕ್ಷೆ ಮಾಡ ಹೋಗಿ ಗಂಡಾಂತರದಲ್ಲಿ ಬಿದ್ದನು. ತನ್ನ ಭಕ್ತನಾದ ಅಂಬರೀಷ ರಾಜನ ರಕ್ಷಣೆಗಾಗಿ ಶ್ರೀವಿಷ್ಣುವು ಅವನ ಮೇಲೆ ಚಕ್ರವನ್ನು ಬಿಟ್ಟನು. ಚಕ್ರವು ಅವನ ಬೆನ್ನು ಹತ್ತಿತು. ಕೊನೆಗೆ ಅವನು ಶಿವನಿಗೆ ಶರಣಾಗತನಾದನು. ಶಿವನ ಆದೇಶದಂತೆ ಅಂಬರೀಷನು ವಿಷ್ಣುವನ್ನು ಪ್ರಾರ್ಥಿಸಿದನು. ಆಗ ಅವನು ತನ್ನ ಚಕ್ರವನ್ನು ಉಪಸಂಹಾರಗೊಳಿಸಿದನು. ಕಾಲನು ಮುನಿವೇಷಧಾರಣಮಾಡಿ ಶ್ರೀರಾಮನೊಡನೆ ಸಂಭಾಷಣೆ ನಡೆಸಿದಾಗ ದುರ್ವಾಸನು ಹಟದಿಂದ ಲಕ್ಷ್ಮಣ ನನ್ನು ರಾಮನ ಬಳಿಗೆ ಕಳುಹಿಸಿದನು. ಸಂಭಾಷಣೆ ನಡೆದಾಗ ಯಾರಾದರೂ ಪ್ರವೇಶ ಮಾಡಿದರೆ ಅವರನ್ನು ತ್ಯಾಗ ಮಾಡುವೆನೆಂದು ಶ್ರೀರಾಮನು ಕಟ್ಟಳೆ

ಮಾಡಿದ್ದನು. ಆದುದರಿಂದ ರಾಮನು ಲಕ್ಷ್ಮಣನ, ಮಹಾಕಾಲನ ತ್ಯಾಗ ಮಾಡಿದನು. ದುರ್ವಾಸ ಮಹರ್ಷಿಯ ಚರಿತ್ರವು ಇಂತಹ ಅನೇಕ ವಿಚಿತ್ರ ಘಟನೆಗಳಿಂದ ಕೂಡಿದ್ದಾಗಿದೆ.

ಶಿವನು ಹನುಮದ್ರೂಪದಿಂದ ಅನೇಕ ಉತ್ತಮ ಲೀಲೆಗಳನ್ನು ಮಾಡಿದನು. ಮಾಹೇಶ್ವರನು ಭಗವಾನ್ ಶ್ರೀರಾಮನಿಗೆ ಹನುಮಂತನಂತಹ ಏಕನಿಷ್ಠ ಸೇವಕನನ್ನು ಒದಗಿಸಿ ರಾಮಕಾರ್ಯವನ್ನು ನೆರವೇರಿಸಿಕೊಟ್ಟನು. ಒಂದಾನೊಂದು ಸಮಯದಲ್ಲಿ ಶಂಭುವಿಗೆ ವಿಷ್ಣುವಿನ ಮೋಹಿನಿ ರೂಪದ ದರ್ಶನವಾಯಿತು. ಅವನು ಮೋಹಿನಿಯ ರೂಪಕ್ಕೆ ಮೋಹಿತನಾದನು. ಕಾಮಬಾಣದಿಂದ ಆಹತನಾದ ಶಂಭುವಿನ ವೀರ್ಯಪಾತವಾಯಿತು. ಸಪ್ತರ್ಷಿಗಳು ಆ ವೀರ್ಯವನ್ನು ಪತ್ರ ಸಂಪುಟದಲ್ಲಿರಿಸಿ ಜತನ ಮಾಡಿದರು. ಶಿವನ ಪ್ರೇರಣೆಯಂತೆ ರಾಮ ಕಾರ್ಯ ದುರಂಧರನ ನಿರ್ಮಾಣಕ್ಕಾಗಿ ಆ ವೀರ್ಯವು ಗೌತಮಪುತ್ರಿ ಅಂಜನಾದೇವಿಯ ಕರ್ಣದ್ವಾರವಾಗಿ ಅವಳ ದೇಹದಲ್ಲಿ ಸ್ಥಾಪಿಸಲ್ಪಟ್ಟಿತು. ಯೋಗ್ಯಕಾಲದಲ್ಲಿ ಅವಳು ಹನುಮಂತನನ್ನು ಪ್ರಸವಿಸಿದಳು. ಆಂಜನೇಯನು ಅನೇಕ ಅದ್ಭುತಕಾರ್ಯಗಳನ್ನು ಮಾಡಿದನು. ಅವನು ರಾಮಕಾರ್ಯಕ್ಕಾಗಿ ಅವತಾರ ತಾಳಿದ್ದರಿಂದ ಅತ್ಯಂತ ನಿಷ್ಠೆಯಿಂದ ರಾಮನ ಸೇವೆ ಮಾಡಿದನು. ಇವನು ಸುಗ್ರೀವನ ಮಂತ್ರಿಯಾಗಿಯೂ ರಾಮನ ಸೇವಕನಾಗಿಯೂ ದುಡಿದನು. ರುದ್ರಾವತಾರದ ಇವನು ಲಕ್ಷ್ಮಣನಿಗೆ ಪ್ರಾಣದಾನ ಮಾಡಿದನು. ಭೂಮಂಡಲದಲ್ಲಿ ಶ್ರೀರಾಮ ಭಕ್ತಿಯನ್ನು ಪ್ರಚಾರವನ್ನು ಮಾಡಿದನು.

## ಪಿಪ್ಪಲಾದ

ವೃತ್ರಾಸುರನು ತನ್ನ ಪರಾಕ್ರಮದಿಂದ ದೇವೇಂದ್ರನನ್ನೂ, ಪ್ರಮುಖ ದೇವತೆಗಳನ್ನೂ ದೇವಲೋಕದಿಂದ ಓಡಿಸಿದನು. ಆಗ ದೇವತೆಗಳು ಬ್ರಹ್ಮದೇವನ ಮೊರೆಹೊಕ್ಕರು. ತ್ವಷ್ಟನು ತನ್ನ ಪುತ್ರನಾದ ವಿಶ್ವರೂಪನ ವಧೆಯ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ವೃತ್ರನನ್ನು ನಿರ್ಮಾಣ ಮಾಡಿರುವದರಿಂದ ನೀವೂ ತಪಾಚರಣೆ ಮಾಡಿ ಬಲವನ್ನು ಬೆಳೆಯಿಸಿಕೊಳ್ಳಬೇಕೆಂದು ಬ್ರಹ್ಮದೇವನು ದೇವತೆಗಳಿಗೆ ಹೇಳಿದನು. ಮಹಾತಪಸ್ವಿಯಾದ ದಧೀಚಿ ಮಹರ್ಷಿಯ ಅಸ್ಥಿಗಳು

ವಜ್ರಕ್ಕಿಂತಲೂ ಕಠಿಣವಾಗಿವೆ. ಲೋಕೋಪಕಾರಕ್ಕಾಗಿ ಆತ್ಮತ್ಯಾಗ ಮಾಡ ಬೇಕೆಂದು ಆ ಮಹರ್ಷಿಗೆ ತಿಳಿಸಬೇಕೆಂದೂ, ಅವನ ಅಸ್ಥಿಗಳಿಂದ ಬ್ರಹ್ಮ ದಂಡವನ್ನು ನಿರ್ಮಿಸಿಕೊಳ್ಳಬೇಕೆಂದೂ ಅವನು ದೇವೇಂದ್ರನಿಗೆ ತಿಳಿಸಿದನು.

ನಂದೀಶ್ವರ–ಬ್ರಹ್ಮದೇವನು ಹೀಗೆ ಹೇಳಿದ ಬಳಿಕ ಇಂದ್ರನೂ ದೇವ ಗುರು ಬೃಹಸ್ಪತಿಯೂ ದಧೀಚಿ ಮಹರ್ಷಿಯ ಆಶ್ರಮಕ್ಕೆ ಬಂದು, ಅವನಿಗೆ ನಮ್ರಭಾವದಿಂದ ಎಲ್ಲ ಸಂಗತಿಯನ್ನು ತಿಳಿಸಿ, ದೇವತೆಗಳ ಕಲ್ಯಾಣಕ್ಕಾಗಿ ಆತ್ಮತ್ಯಾಗ ಮಾಡಬೇಕೆಂದು ಪ್ರಾರ್ಥಿಸಿದರು. ಪರೋಪಕಾರ ಪರಾಯಣನಾದ ದಧೀಚಿಯು ಶಿವಧ್ಯಾನ ಮಾಡುತ್ತ ಆತ್ಮತ್ಯಾಗ ಮಾಡಿದನು. ಆಗ ದೇವತೆಗಳು ಆಕಾಶದಿಂದ ದಧೀಚಿಯ ಪಾರ್ಥಿವ ಶರೀರದ ಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು. ತರುವಾಯ ದೇವೇಂದ್ರನು ಸುರಭಿಯನ್ನು ಕರೆದು ಅವನ ದೇಹವನ್ನು ನೆಕ್ಕಿಸಿದನು. ಅನಂತರದಲ್ಲಿ ಅವನು ವಿಶ್ವಕರ್ಮನನ್ನು ಕರೆದು, ದಧೀಚಿಯ ಅಸ್ಥಿಗಳಿಂದ ವಜ್ರಾಯುಧವನ್ನು ಸಿದ್ಧಪಡಿಸಿಕೊಂಡನು. ಬ್ರಹ್ಮದಂಡವೆಂಬ ವಜ್ರಾಯುಧವೂ ಬ್ರಹ್ಮಶಿರವೆಂಬ ಬಾಣವೂ ಸಿದ್ಧವಾದವು. ಕೂಡಲೆ ಇಂದ್ರನು ವೃತ್ರನೊಡನೆ ಸಂಗ್ರಾಮ ಮಾಡಿ ಅವನನ್ನು ಸಂಹರಿಸಿದನು. ಪತಿಯು ದೇಹತ್ಯಾಗ ಮಾಡಿದ್ದ ರಿಂದ ದುಃಖಿತಳಾದ ದಧೀಚಿ ಪತ್ನಿ ಸುವರ್ಚಲೆಯು ಚಿತೆಯನ್ನು ಸಿದ್ಧಪಡಿಸಿ ಅವಶಿಷ್ಟ ದೇಹದೊಡನೆ ಚಿತಾರೋಹಣ ಮಾಡಲು ಸಿದ್ಧಳಾದಳು. ಆಗ ದಧೀಚಿ ಪತ್ನಿಯು ಗರ್ಭಿಣಿಯಿದ್ದಳು. ಮುನಿಯ ತೇಜವು ಉದರದಲ್ಲಿ ಸ್ಥಿತವಾಗಿರುವದ ರಿಂದ ಸಹಗಮನ ಮಾಡಲಾಗದೆಂದು ಆಕಾಶವಾಣಿಯಾಯಿತು. ಆಗ ಸುವರ್ಚಲೆಯು ಪಾಷಾಣವನ್ನು ಕೈಯಲ್ಲಿ ತೆಗೆದುಕೊಂಡು ಉದರವನ್ನು ವಿದೀರ್ಣಗೊಳಿಸಿದಳು. ಕೂಡಲೆ ದಿವ್ಯ ಶರೀರವು ಸುವರ್ಚೆಯ ಉದರದಿಂದ ಹೊರಬಿದ್ದಿತು. ಆ ಮಗುವಿನ ತೇಜಸ್ಸು ಕಂಡು, ರುದ್ರನ ಅವತಾರವೇ ಈ ಶಿಶುವೆಂದು ಅವಳು ಉದ್ಗಾರ ತೆಗೆದಳು. ಆಗ ಅವಳು ಆನಂದಗೊಂಡು ಮಗುವನ್ನು ಅಶ್ವತ್ಥ ವೃಕ್ಷದ ಕೆಳಗಿರಿಸಿ ಸಮಾಧಿ ದ್ವಾರವಾಗಿ ಪತಿಯ ಅನುಗಮನ ಮಾಡಿದಳು. ಆಗ ಇಂದ್ರಾದಿದೇವತೆಗಳು ಶಿಶುವಿದ್ದ ಸ್ಥಳಕ್ಕೆ ಬಂದರು. ಬ್ರಹ್ಮದೇವನು ಆ ಮಗುವಿಗೆ ಪಿಪ್ಪಲಾದ ಎಂದು ನಾಮಕರಣ ಮಾಡಿದನು. ದಧೀಚಿ ಪುತ್ರನಾದ ಪಿಪ್ಪಲಾದನು ಬಹುಕಾಲದವರೆಗೆ ತಪಸ್ಸು ಮಾಡಿದನು.

ಅನಂತರದಲ್ಲಿ ರುದ್ರದೇವನ ಅವತಾರವಾದ ಪಿಪ್ಪಲಾದನು ಅನರಣ್ಯ

ರಾಜನ ಪುತ್ರಿಯಾದ ಪದ್ಮಾದೇವಿಯನ್ನು ವಿವಾಹವಾದನು. ಪದ್ಮಾದೇವಿಯು ಹತ್ತು ಮಕ್ಕಳನ್ನು ಪಡೆದಳು. ಎಲ್ಲರೂ ತಂದೆಯಂತೆ ತಪಸ್ವಿಗಳಾಗಿದ್ದರು. ಮಹಾಪ್ರಭು ಶಂಭುವಿನ ಲೀಲಾವತಾರವಾಗಿದ್ದ ಪಿಪ್ಪಲಾದ ಮುನಿಯು ಅನೇಕ ಲೀಲೆಗಳನ್ನು ಮಾಡಿದನು. ಅವನು ಕೃಪಾಳುವಾಗಿದ್ದನು. ಲೋಕದಲ್ಲಿಯ ಜನರು ಶನೈಶ್ವರನ ಪೀಡೆಯಿಂದ ನಿರ್ವಿಣ್ಣರಾಗುತ್ತಿರುವದನ್ನು ಕಂಡು ಅವನಲ್ಲಿ ದಯೆಯು ಉತ್ಪನ್ನವಾಯಿತು. ಜನ್ಮಕಾಲದಿಂದ ಹದಿನಾರು ವರ್ಷಗಳ ವರೆಗೆ ಶಿವಭಕ್ತರಿಗೂ, ನಿಷ್ಠಾವಂತರಾದ ಮನುಷ್ಯರಿಗೂ ಶನಿಯಿಂದ ಪೀಡೆಯಾಗಕೂಡದೆಂದು ಅವನು ವರವನ್ನು ಕೊಟ್ಟನು. ಒಂದು ವೇಳೆ ಶನಿಯು ಮನುಷ್ಯರಿಗೆ ಪೀಡೆ ಕೊಟ್ಟರೆ ಅವನು ನಿಸ್ಸಂದೇಹವಾಗಿ ಭಸ್ಮವಾಗುವನೆಂದು ತಿಳಿಸಿದನು. ಪಿಪ್ಪಲಾದ ಮುನಿಯು ರುದ್ರನ ಅವತಾರವಾಗಿದ್ದು ಅವನು ಲೋಕಕಲ್ಯಾಣಕ್ಕಾಗಿ ಅನೇಕ ಲೀಲೆಗಳನ್ನು ಮಾಡಿದನು.

## ದ್ವಿಜೇಶ್ವರ

ನಂದೀಶ್ವರ-ಭಗವಾನ್ ಶಿವನ ಋಷಭರೂಪ ಅವತಾರದಿಂದ ಅನುಗ್ರಹ ಹೊಂದಿದ ನೃಪಶ್ರೇಷ್ಠ ಭದ್ರಾಯು ರಾಜನು ತನ್ನ ತಂದೆಯ ತರುವಾಯ ರಾಜಸಿಂಹಾಸನವನ್ನು ಏರಿದನು. ರಾಜಾ ಚಂದ್ರಾಂಗದ ಹಾಗೂ ರಾಣೀ ಸೀಮಂತಿನಿ ಈ ದಂಪತಿಗಳ ಉದರದಿಂದ ಜನಿಸಿದ ಕೀರ್ತಿಮಾಲಿನಿ ಎಂಬ ರಾಜಕುಮಾರಿಯನ್ನು ಭದ್ರಾಯು ರಾಜನು ವಿವಾಹವಾದನು. ಧರ್ಮವಂತರಾದ ಈ ರಾಜ-ರಾಣಿಯರು ಆನಂದದಿಂದ ಕಾಲ ಕಳೆಯತೊಡಗಿದ್ದರು. ವಸಂತ ಋತುವಿನಲ್ಲಿ ಒಂದು ದಿನ ಈ ನವದಂಪತಿಗಳು ವನವಿಹಾರಕ್ಕಾಗಿ ವನಕ್ಕೆ ತೆರಳಿದರು. ಈ ದಂಪತಿಗಳ ಧರ್ಮವನ್ನು ಪರೀಕ್ಷಿಸಬೇಕೆಂದು ಭಗವಾನ್ ಶಂಕರನು ಯೋಚಿಸಿದನು. ಕೂಡಲೆ ಅವನು ಉಮಾದೇವಿಯೊಡನೆ ಭದ್ರಾಯು ಕೀರ್ತಿಮಾಲಿನಿಯರು ವಿಹಾರ ಮಾಡುತ್ತಿದ್ದ ಗಹನ ವನಕ್ಕೆ ಬಂದರು. ಶಿವನೂ ಪಾರ್ವತಿಯೂ ಬ್ರಾಹ್ಮಣ, ಬ್ರಾಹ್ಮಣಿಯರ ರೂಪ ಹೊಂದಿದರು. ಅವರು ಆ ರಾಜದಂಪತಿಗಳ ದೃಷ್ಟಿಪಥಕ್ಕೆ ಬರುತ್ತಿರುವಾಗಲೆ ಒಂದು ಹುಲಿಯು ಆರ್ಭಟ ಮಾಡುತ್ತ ಅವರ ಕಡೆಗೆ ಓಡುತ್ತ ಬರತೊಡಗಿತು. ಕೂಡಲೆ ಆ ಬ್ರಾಹ್ಮಣ

ದಂಪತಿಗಳು ಗಾಬರಿಯಿಂದ ಕಿರಚತೊಡಗಿದರು. 'ರಾಜಾ ! ಈ ಬಡ ಬ್ರಾಹ್ಮಣ ದಂಪತಿಗಳನ್ನು ರಕ್ಷಿಸು' ಎಂದು ಅವರು ಕೂಗತೊಡಗಿದೊಡನೆಯೆ ಭದ್ರಾಯುವು ತನ್ನ ಧನುಸ್ಸನ್ನು ತೆಗೆದುಕೊಂಡು ಆ ವ್ಯಾಘ್ರದ ಮೇಲೆ ಶರಸಂಧಾನ ಮಾಡಿದನು. ಆ ಬಾಣವು ಹುಲಿಗೆ ತಾಗಲಿಲ್ಲ; ಸ್ವಲ್ಪಮಟ್ಟಿಗೆ ಗಾಯ ಮಾಡಿತು. ಅದು ಬ್ರಾಹ್ಮಣಿಯ ಮೇಲೆ ಜಿಗಿದು ಅವಳನ್ನು ಬಲವಾಗಿ ಎಳೆದು ಗಾಯಗೊಳಿಸಿ ಓಡಿಹೋಯಿತು. 'ಶಂಭೋ, ಶಂಕರಾ! ನನ್ನನ್ನು ರಕ್ಷಿಸು' ಎಂದು ಬ್ರಾಹ್ಮಣಿಯು ಕೂಗಿ ವಿಲಾಪ ಮಾಡತೊಡಗಿದಳು. ಬ್ರಾಹ್ಮಣನೂ ರೋದಿಸತೊಡಗಿದನು. ಕೂಡಲೆ ಭದ್ರಾಯು ರಾಜನೂ ಕೀರ್ತಿಮಾಲಿನಿ ರಾಣಿಯೂ ಬ್ರಾಹ್ಮಣ ಬ್ರಾಹ್ಮಣಿಯರ ಬಳಿಗೆ ಧಾವಿಸಿ ಬಂದರು.

ಬ್ರಾಹ್ಮಣ–ರಾಜಾ, ಪ್ರಜೆಗಳನ್ನು ರಕ್ಷಿಸುವದು ನಿನ್ನ ಧರ್ಮವಲ್ಲವೆ ? ನಿನ್ನ ದಿವ್ಯ ಶಸ್ತ್ರಾಸ್ತ್ರಗಳು ಎಲ್ಲಿ ಹೋದವು. ಒಂದು ಹುಲಿಯನ್ನು ಕೊಂದು ನಮ್ಮನ್ನು ರಕ್ಷಿಸುವದು ನಿನಗೆ ಸಾಧ್ಯವಾಗಲಿಲ್ಲ. ನೀನೆಂತಹ ಕ್ಷತ್ರಿಯನು? ನಿನ್ನ ಮಂತ್ರಾಸ್ತ್ರಗಳು ನಿರ್ವೀರ್ಯವಾದವೇನು? ನಿನ್ನಂತಹ ರಾಜನು ಇರುವದಕ್ಕಿಂತ ಸಾಯುವದೇ ಮೇಲು.

ಭದ್ರಾಯು–ವಿಪ್ರಶ್ರೇಷ್ಠಾ, ನನ್ನ ಧನುರ್ವಿದ್ಯೆಯು ಈ ಸಮಯದಲ್ಲಿ ನಿರರ್ಥಕವಾದದ್ದು ನನ್ನ ದೈವದುರ್ವಿಪಾಕವಾಗಿದೆ. ನನ್ನ ಕ್ಷಾತ್ರ ಧರ್ಮವು ಇಂದು ವ್ಯರ್ಥವಾದಂತಾಯಿತು. ನನ್ನ ಸಂಪದ, ರಾಜ್ಯ, ಆಯುಷ್ಯ ಎಲ್ಲವೂ ನಾಶವಾದಂತಾದವು, ಎಂದು ಖೇದದಿಂದ ನುಡಿದು ಬ್ರಾಹ್ಮಣನ ಪಾದಗಳಿಗೆರಗಿದನು. ತರುವಾಯ ಅವನು–ವಿಪ್ರೋತ್ತಮಾ, ನಾನು, ಈ ರಾಜ್ಯ, ನನ್ನ ಪತ್ನಿ, ನನ್ನ ಐಶ್ವರ್ಯ ಎಲ್ಲವೂ ನಿನ್ನ ಆಧೀನವಿರುವವು.

ಬ್ರಾಹ್ಮಣ–ನಿನ್ನ ರಾಜ್ಯೈಶ್ವರ್ಯಗಳಿಂದ ನನಗೇನು ಪ್ರಯೋಜನ ? ನಾನು ಭಿಕ್ಷೆ ಬೇಡಿಯಾದರೂ ಹೊಟ್ಟೆ ಹೊರೆದುಕೊಂಡೇನು ! ದರ್ಪಣದಿಂದ ಕುರುಡನಿಗೆ ಪ್ರಯೋಜನವೇನು ? ನಿರಕ್ಷರಕುಕ್ಷಿಗೆ ಪುಸ್ತಕದ ಉಪಯೋಗವೇನು? ನನ್ನ ಸ್ತ್ರೀಯು ವ್ಯಾಘ್ರನಿಂದ ಹತಳಾದಳು. ಇನ್ನು ನನಗೆ ಐಶ್ವರ್ಯವೇತಕ್ಕೆ ? ನನ್ನ ಪತ್ನಿಯು ಹೊರಟುಹೋದಳು. ಇನ್ನು ನನಗೆ ಕಾಮ ಸುಖವನ್ನು ಕೊಡುವವರಾರು? ಆದುದರಿಂದ ನೀನು ಈ ಮಹಾರಾಣಿಯನ್ನು ನನಗೆ ಒಪ್ಪಿಸಿಬಿಡು ! ಉಳಿದ

ದ್ದೇನೂ ನನಗೆ ಬೇಡ. ಚಲುವೆಯಾದ ನಿನ್ನ ರಾಣಿಯಿಂದ ನಾನು ಕಾಮೋಪಶಮನ ಮಾಡಿಕೊಳ್ಳುವೆನು!

ಭದ್ರಾಯು–ಭೂಸುರೋತ್ತಮಾ, ಇದು ನಿನ್ನ ಧರ್ಮವೇ ? ನಿನ್ನ ಗುರುವು ನಿನಗೆ ಇದೇ ಉಪದೇಶವನ್ನು ನೀಡಿರುವನೆ ? ಪರಸ್ತ್ರೀಸ್ಪರ್ಶವು ಕೀರ್ತಿಯನ್ನು ಹಾಳು ಮಾಡುವದಲ್ಲದೆ, ಸ್ವರ್ಗಕ್ಕೆ ಎರವು ಮಾಡುವದು. ಪರಸ್ತ್ರೀಯ ಉಪಭೋಗವು ಎಲ್ಲ ಪುಣ್ಯಗಳನ್ನು ನಾಶ ಮಾಡಿ, ನರಕಕ್ಕೆ ದೂಡುವದು. ಇಂತಹ ಪಾಪವು ಯಾವ ಪ್ರಾಯಶ್ಚಿತ್ತದಿಂದಲೂ ಕ್ಷಾಲನವಾಗುವದಿಲ್ಲ.

ಬ್ರಾಹ್ಮಣ–ರಾಜಾ, ನಾನು ನನ್ನ ತಪಸ್ಸಿನಿಂದ ಬ್ರಹ್ಮಹತ್ಯೆ, ಮದಿರಾಪಾನ ಮೊದಲಾದ ಮಹಾ ಪಾತಕಗಳನ್ನು ನಾಶಗೊಳಿಸಿಕೊಳ್ಳಬಲ್ಲೆನು. ಹೀಗಿದ್ದ ಬಳಿಕ ಪರಸ್ತ್ರೀಸಂಗಮವೇನು ಲೆಕ್ಕದ್ದು ? ನೀನು ನಿನ್ನ ಭಾರ್ಯೆಯನ್ನು ನನ್ನ ಸ್ವಾಧೀನಪಡಿಸು.

ಬ್ರಾಹ್ಮಣನು ಹೀಗೆ ನುಡಿದ ಬಳಿಕ ರಾಜನು ವಿಚಾರದಲ್ಲಿ ಬಿದ್ದನು. 'ಹುಲಿಯಿಂದ ಬ್ರಾಹ್ಮಣ ಪತ್ನಿಯನ್ನು ನನ್ನಿಂದ ರಕ್ಷಣೆ ಮಾಡುವದು ಆಗಲಿಲ್ಲ. ಇದು ನನ್ನ ಅಪರಾಧವಾಗಿದೆ. ಹುಲಿಯು ಬ್ರಾಹ್ಮಣಿಯನ್ನು ಸಂಹರಿಸಿದ್ದರಿಂದ ಸ್ತ್ರೀಹತ್ಯಾಪಾತಕಕ್ಕೆ ನಾನು ಬಾಧ್ಯನಾಗಿರುವೆನು. ಆದುದರಿಂದ ತನ್ನ ಪಟ್ಟಮಹಿಷಿಯಾದ ಕೀರ್ತಿಮಾಲಿನಿಯನ್ನು ಬ್ರಾಹ್ಮಣನಿಗೆ ಅರ್ಪಿಸಿಬಿಡುವದೇ ಶ್ರೇಷ್ಠ ಮಾರ್ಗವು.' ಅವನು ತನ್ನ ಪತ್ನಿಗೆ ತನ್ನ ಮನೋದಯವನ್ನು ತಿಳಿಸಿದನು. ಬ್ರಾಹ್ಮಣನ ವಶಕ್ಕೆ ಹೋಗಬೇಕಾದುದನ್ನು ನೆನೆದು ರಾಣಿಗೆ ಬಹಳೇ ದುಃಖವಾಯಿತು. ಅವಳು ಬೋರಾಡಿ ಅಳತೊಡಗಿದಳು.

ಭದ್ರಾಯು–ಭೂಸುರೋತ್ತಮಾ, ಇಗೋ ನನ್ನ ಪತ್ನಿಯನ್ನು ನಿನ್ನ ಸ್ವಾಧೀನಕ್ಕೆ ಕೊಟ್ಟಿರುವೆನು. ಮಹಾಸತಿ ಶಿರೋಮಣಿಗೆ ನನ್ನ ಕರ್ತವ್ಯದಿಂದ ಬಹಳೇ ಕಷ್ಟವಾಗಿದೆ. ನೀನು ಅವಳನ್ನೂ ನನ್ನನ್ನೂ ಕ್ಷಮಿಸು. ನಾನು ನನ್ನ ಪಾತಕಕ್ಕೆ ಪ್ರಾಯಶ್ಚಿತ್ತ ಹೊಂದುವೆನು.

ರಾಜನು ಹೀಗೆ ನುಡಿದು ಚಿತೆಯನ್ನು ರಚಿಸಿದನು. ಅವನು ಭಗವಾನ್ ಶಂಕರನನ್ನು ಅನನ್ಯ ಭಾವದಿಂದ ಸ್ಮರಿಸುತ್ತ ಧಗಧಗಾಯಮಾನವಾಗಿ ಉರಿಯುವ

ಚಿತೆಯನ್ನು ಪ್ರದಕ್ಷಿಣೆ ಮಾಡತೊಡಗಿದನು. ಪ್ರದಕ್ಷಿಣೆ ಮುಗಿದ ಕೂಡಲೆ ಅವನು ಅಗ್ನಿಯಲ್ಲಿ ಧುಮ್ಮಿಕ್ಕತಕ್ಕವನು ! ಅಷ್ಟರಲ್ಲಿ ಪಂಚಮುಖದ ಭಗವಾನ್ ವಿಶ್ವನಾಥನು ಪಾರ್ವತಿಯೊಡನೆ ನಂದಿವಾಹನನಾಗಿ ಅವನಿಗೆ ಸಾಕ್ಷಾತ್ಕಾರವಾದನು. ಕೂಡಲೆ ಭದ್ರಾಯು ರಾಜನೂ, ಕೀರ್ತಿಮಾಲಿನಿ ರಾಣಿಯೂ ಗೌರೀ-ಹರರಿಗೆ ಪ್ರಣಾಮ ಮಾಡಿದರು. ಧರ್ಮಾತ್ಮರಾದ ರಾಜ-ರಾಣಿಯರನ್ನು ಕಂಡು ಪಾರ್ವತಿ ಪರಮೇಶ್ವರರು ಪ್ರಸನ್ನರಾದರು.

ಶಿವ-ಭದ್ರಾಯು ರಾಜಾ, ಕೀರ್ತಿಮಾಲಿನಿ ರಾಣೀ, ನೀವಿಬ್ಬರೂ ದಂಪತಿಗಳು ಧರ್ಮಾತ್ಮರಿರುವಿರಿ. ನೀವಿಬ್ಬರೂ ಸದಾ ಸರ್ವದಾ ನನ್ನ ಭಜನೆ ಪೂಜನೆಗಳನ್ನು ಮಾಡುತ್ತಿರುವಿರಿ. ನಿಮ್ಮ ಭಕ್ತಿಭಾವಗಳನ್ನು ಪರೀಕ್ಷಿಸುವದಕ್ಕಾಗಿ ನಾನು ರಚಿಸಿದ ನಾಟಕವಿದು ! ಹುಲಿಯಿಂದ ಹತಳಾದ ಬ್ರಾಹ್ಮಣಿಯು ಬೇರಾರೂ ಆಗಿರದೆ ಈ ಗಿರಿರಾಜ ನಂದಿನಿ ಉಮಾದೇವಿಯಾಗಿರುವಳು. ವ್ಯಾಘ್ರವು ನನ್ನ ಮಾಯಾ ನಿರ್ಮಿತವಾಗಿತ್ತು. ಆದುದರಿಂದ ನಿನ್ನ ದಿವ್ಯಾಸ್ತ್ರದಿಂದ ಅದು ಸಂಹರಿಸಲ್ಪಡಲಿಲ್ಲ. ನೀನು ನನ್ನ ಬೇಡಿಕೆಯಂತೆ ನಿನ್ನ ಪತ್ನಿಯನ್ನು ನನಗೆ ಅರ್ಪಿಸಿದೆ! ಚಿತೆಯಲ್ಲಿ ಆತ್ಮದಾನಮಾಡಲು ಸಿದ್ಧನಾದೆ ! ನೀವಿಬ್ಬರೂ ನಿಮ್ಮನ್ನು ಸಮರ್ಪಿಸಿದ್ದೀರಿ. ನಿಮ್ಮಿಬ್ಬರ ಭೌತಿಕ ದೇಹವು ನಷ್ಟವಾದೊಡನೆಯೆ ನೀವು ನನ್ನ ಸನ್ನಿಧಿಯನ್ನು ಹೊಂದುವಿರಿ.

ಭದ್ರಾಯು-ದೇವಾ, ನನ್ನ ಮಾತಾ-ಪಿತೃಗಳು, ಪದ್ಮಾಕರ ವೈಶ್ಯ, ಅವನ ಪುತ್ರ ಸುನಯ, ಇವರೆಲ್ಲರನ್ನೂ ನಿನ್ನ ಸನ್ನಿಧಿಯಲ್ಲಿ ಸೇರಿಸಿಕೊಳ್ಳಬೇಕು.

ಕೀರ್ತಿಮಾಲಿನಿ-ಮಹಾದೇವಾ, ನನ್ನ ತಂದೆ ಚಂದ್ರಾಂಗದ, ನನ್ನ ತಾಯಿ ಸೀಮಂತಿನಿ ಇವರೂ ನಿನ್ನ ಪಾರ್ಶ್ವದಲ್ಲಿರುವಂತೆ ಅನುಗ್ರಹಿಸು.

ಆ ದಂಪತಿಗಳಿಗೆ ಮಹಾದೇವನು ಆಶೀರ್ವಾದಮಾಡಿ 'ಏವಮಸ್ತು' ಎಂದನು. ಭದ್ರಾಯುವು ದ್ವಿಜೇಶ್ವರ ಲಿಂಗವನ್ನು ಸ್ಥಾಪಿಸಿದನು. ಆ ದಂಪತಿಗಳು ಸದಾ ಸರ್ವದಾ ಶಂಭುವಿನ ಪೂಜೆ, ಭಜನೆಗಳಲ್ಲಿ ಮಗ್ನರಾದರು. ಅವರು ಬಹುಕಾಲ ಬಾಳಿ, ತಮ್ಮ ಪುತ್ರರಿಗೆ ರಾಜ್ಯವನ್ನೊಪ್ಪಿಸಿ ಶಿವಸನ್ನಿಧಿಯನ್ನು ಹೊಂದಿದರು.

# ಯತಿನಾಥ

ನಂದೀಶ್ವರ–ಸನತ್ಕುಮಾರ ಮುನಿಯೆ, ಭಗವಾನ್ ಶಂಭುವಿನ ಯತಿನಾಥ ನಾಮಕ ಅವತಾರದ ವರ್ಣನೆ ಮಾಡುವೆನು. ಮುನೀಶ್ವರಾ, ಒಂದಾನೊಂದು ಕಾಲದಲ್ಲಿ ಅರ್ಬುದಾಚಲ ಪರ್ವತ ಪ್ರದೇಶದಲ್ಲಿ ಆಹುಕನೆಂಬ ಭಿಲ್ಲನು ವಾಸಿಸಿದ್ದನು. ಅವನ ಪತ್ನಿಯ ಹೆಸರು ಆಹುಕೆ. ಈ ದಂಪತಿಗಳು ಪರಮ ಶಿವಭಕ್ತರು. ಇವರು ನಿತ್ಯವೂ ಶಿವನ ಆರಾಧನೆ, ಪೂಜೆ, ಭಜನೆಗಳನ್ನು ಮಾಡುತ್ತಿದ್ದರು. ಅವರು ಮಹಾ ಧರ್ಮವಂತರು. ಅವರಿಬ್ಬರೂ ವನದಲ್ಲಿ ತಿರುಗಾಡಿ ಆಹಾರಸಾಮಗ್ರಿಗಳನ್ನು ತರುತ್ತಿದ್ದರು. ಒಂದು ದಿನ ಅವರು ಸಾಯಂಕಾಲಕ್ಕೆ ಮನೆಗೆ ಬಂದರು. ಮನೆಗೆ ತಲುಪುವ ಹೊತ್ತಿಗೆ ಒಬ್ಬ ಯತಿಯು ಅಲ್ಲಿಗೆ ಬಂದನು. ಭಿಲ್ಲನು ಯತಿಯನ್ನು ಸ್ವಾಗತಿಸಿ, ಅವನನ್ನು ಪೂಜಿಸಿದನು.

ಯತಿನಾಥ–ಆಹುಕಾ, ಇಂದು ರಾತ್ರಿ ನಿನ್ನ ಕುಟೀರದಲ್ಲಿ ವಿಶ್ರಾಂತಿ ಹೊಂದಿ ನಾಳೆ ಬೆಳಿಗ್ಗೆ ಮುಂದೆ ಪ್ರಯಾಣ ಮಾಡುವೆನು.

ಆಹುಕ–ನೀನು ನಮ್ಮ ಮನೆಯಲ್ಲಿ ವಸತಿ ಮಾಡಲು ಅಡ್ಡಿಯಿಲ್ಲ. ಆದರೆ ಈ ಕುಟೀರವು ಬಹಳೇ ಸಣ್ಣದಿದೆ. ನಾವಿಬ್ಬರು ಹಾಗೂ ಹೀಗೂ ಮಲಗುತ್ತೇವೆ. ನಿನಗೆ ಸ್ಥಳವು ಸಾಲುವದಿಲ್ಲ.

ಭಿಲ್ಲನ ಮಾತು ಕೇಳಿ ಯತಿಯು ಅಲ್ಲಿಂದ ಹೊರಡಲು ಸಿದ್ಧನಾದನು. ಕೂಡಲೆ ಆಹುಕೆಯು ಪತಿಗೆ ಕೈಜೋಡಿಸಿ ಹೇಳಿದಳು.

ಆಹುಕೆ–ನಾಥಾ, ಮನೆಗೆ ಬಂದ ಅತಿಥಿಗಳಿಗೆ ಹೀಗೆ ಹೇಳಬೇಕೆ ? ಯತೀಶ್ವರನೂ ನೀನೂ ಒಳಗೆ ಮಲಗಿರಿ. ನಾನು ಧನುರ್ಬಾಣಗಳನ್ನು ತೆಗೆದು ಕೊಂಡು ಹೊರಗೆ ನಿಲ್ಲುವೆನು. ಯಾವ ಹಿಂಸ್ರ ಪಶುಗಳು ಬಂದರೂ ಅವುಗಳನ್ನು ನಾನು ಸಂಹರಿಸುವೆನು. ಅತಿಥಿಗಳನ್ನು ಸತ್ಕರಿಸುವದು ನಮ್ಮ ಧರ್ಮವಲ್ಲವೆ ? ರಾತ್ರಿಯ ವೇಳೆಯಲ್ಲಿ ಯತಿಯು ಎಲ್ಲಿ ಹೋಗಬೇಕು ?

ಹೆಂಡತಿಯ ಮಾತು ಕೇಳಿ ಭಿಲ್ಲನು ವಿಚಾರಕ್ಕೊಳಗಾದನು. ಹೆಂಡತಿಯನ್ನು ಹೊರಗೆ ಕಳುಹಿಸಿ ತಾನು ಒಳಗೆ ಇರುವದು ಸರಿದೋರಲಿಲ್ಲ. ಸಂನ್ಯಾಸಿಯನ್ನು ಹೊರಗೆ ಕಳುಹಿಸುವದೂ ಅವನಿಗೆ ಅಧರ್ಮವೆನಿಸಿತು. ಆಹುಕೆಯೂ ಸಂನ್ಯಾಸಿಯೂ ಒಳಗೆ ಸುರಕ್ಷಿತ ನಿದ್ರಿಸಲಿ, ಎಂದು ಯೋಚಿದನು.

ಆಹುಕ–ಆಹುಕೆ, ನಾನು ಧನುರ್ಬಾಣಗಳನ್ನು ತೆಗೆದುಕೊಂಡು ಹೊರಗೆ ಕಾವಲು ಮಾಡುವೆನು. ನೀನೂ ಯತಿ ಮಹಾರಾಜರೂ ಒಳಗೆ ಮಲಗಿರಿ.

ಯತಿಯೂ ಆಹುಕೆಯೂ ಒಳಗೆ ಮಲಗಿದರು. ಅಹುಕನು ಹೊರಗೆ ಬಿಲ್ಲು, ಬಾಣಗಳನ್ನು ತೆಗೆದುಕೊಂಡು ಹೊರಗೆ ನಿಂತನು. ರಾತ್ರಿಯಲ್ಲಿ ಕ್ರೂರ ಪಶುಗಳು ಉಪದ್ರವ ಕೊಡತೊಡಗಿದವು. ಭಿಲ್ಲನು ಬಲವಾನನೂ ಬಿಲ್ಲು ಬಾಣಗಳ ವಿದ್ಯೆಯಲ್ಲಿ ನಿಪುಣನೂ ಆಗಿದ್ದನು. ಆದರೆ ಪ್ರಾರಬ್ಧ ಯೋಗದಿಂದ ಹಿಂಸ್ರ ಪಶುಗಳು ಅವನನ್ನು ಕೊಂದು ತಿಂದುಬಿಟ್ಟವು. ಆಹುಕನ ಮರಣದಿಂದ ಸಂನ್ಯಾಸಿಯು ಕ್ಲೇಶಗೊಂಡನು. ಆಹುಕೆಗೆ ದುಃಖ ಬಲವಾಗಿದ್ದರೂ ಸಹಿಸಿಕೊಂಡು ಸ್ವಾಮಿ, ನೀನು ದುಃಖಿಸುವದೇಕೆ? ಭಿಲ್ಲರಾಜನಿಗೆ ಈ ಸಮಯದಲ್ಲಿ ಕಲ್ಯಾಣವೇ ಆಯಿತು. ಅವನು ಶಿವಸನ್ನಿಧಿಗೆ ಹೋದನು. ಇಂತಹ ಮೃತ್ಯುವು ಒದಗಿದ್ದರಿಂದ ಅವನು ಕೃತಾರ್ಥನಾದನು. ನಾನು ಸಹಗಮನ ಮಾಡಿ ನನ್ನ ಸ್ವಾಮಿಯನ್ನು ಅನುಸರಿಸುವೆನು. ಸ್ತ್ರೀಯರಿಗಾಗಿ ಇದು ಸನಾತನ ಧರ್ಮವು, ಎಂದು ಆಹುಕೆಯು ಹೇಳಿದೊಡನೆಯೆ ಯತಿಯು ಚಿತೆಯನ್ನು ಸಿದ್ಧಪಡಿಸಿದನು. ಆಹುಕೆಯು ಅದರಲ್ಲಿ ಪ್ರವೇಶ ಮಾಡಿದಳು. ಯತಿರೂಪದ ಶಂಕರನು ಅವಳಿಗೆ ಸಾಕ್ಷಾತ್ಕಾರನಾದನು. ಅವಳಿಗೆ ವರಗಳನ್ನು ಕೇಳಲು ತಿಳಿಸಿದನು. ಆಗ ಅವಳಿಗೆ ಪ್ರಜ್ಞೆಯಿರಲಿಲ್ಲ. ಭಗವಾನ್ ಶಂಕರನು ಸಂತುಷ್ಟನಾಗಿ ಹೇಳಿದನು.

ಶಂಕರ–ಆಹುಕೆ, ನಿನ್ನ ಪತಿಯು ಮುಂದಿನ ಜನ್ಮದಲ್ಲಿ ನಿಷಧ ದೇಶದ ರಾಜನಾದ ವೀರಸೇನನ ಜ್ಯೇಷ್ಠ ಪುತ್ರನಾಗುವನು. ನೀನು ವಿದರ್ಭ ದೇಶದ ಭೀಮಕ ರಾಜನ ಪುತ್ರಿಯಾಗುವೆ. ಆಗ ನಿನ್ನ ಹೆಸರು ದಮಯಂತಿಯೆಂದಾಗುವದು. ನಾನು ಈಗ ಯತಿನಾಥನಾಗಿದ್ದೇನೆ. ಮುಂದೆ ಹಂಸನಾಗಿ ನಿಮ್ಮಿಬ್ಬರ ವಿವಾಹ ಸಮಾರಂಭವು ನೆರವೇರುವಂತೆ ಮಾಡುವೆನು. ನೀವಿಬ್ಬರೂ ರಾಜಭೋಗಗಳನ್ನನುಭವಿಸಿ, ತರುವಾಯ ನನ್ನ ಸನ್ನಿಧಿಗೆ ಬರುವಿರಿ.

ನಂದೀಶ್ವರ–ಮುನೀಶ್ವರಾ, ಭಗವಾನ್ ಶಿವನು ನಿಂತ ಸ್ಥಳದಲ್ಲಿಯೆ ಲಿಂಗ ರೂಪವನ್ನು ಹೊಂದಿದನು. ಭಿಲ್ಲ, ಭಿಲ್ಲನಿಯರು ಅಚಲವಾದ ಧರ್ಮವನ್ನು ಅವಲಂಬಿಸಿದ್ದರಿಂದ ಆ ಶಿವಲಿಂಗಕ್ಕೆ ಅಚಲೇಶ್ವರನೆಂಬ ಹೆಸರು ಪ್ರಾಪ್ತವಾಯಿತು.

# ಕೃಷ್ಣ ದರ್ಶನ

ನಂದೀಶ್ವರ-ಸನತ್ಕುಮಾರ ಮುನೀಶ್ವರಾ, ಶಂಭುವಿನ ಕೃಷ್ಣ ದರ್ಶನ ಎಂಬ ಅವತಾರದ ಸಂಗತಿಯನ್ನು ನಿನಗೆ ತಿಳಿಸುವೆನು. ಶ್ರಾದ್ಧದೇವ ಮನುವಿಗೆ ಇಕ್ಷ್ವಾಕು ಮೊದಲಾದ ಒಂಭತ್ತು ಜನ ಪುತ್ರರಿದ್ದರು. ಕೊನೆಯ ಮಗನು ನಾಭಾಗನು. ನಾಭಾಗನು ವಿದ್ಯಾಭ್ಯಾಸಕ್ಕಾಗಿ ಗುರುಕುಲದಲ್ಲಿರುವಾಗ ಉಳಿದ ಎಂಟು ಜನ ಪುತ್ರರು ತಂದೆಯ ಸಂಪತ್ತನ್ನು ಹಂಚಿಕೊಂಡರು. ಇವರೆಲ್ಲರೂ ತಮ್ಮ ತಮ್ಮ ರಾಜ್ಯವನ್ನು ಆಳತೊಡಗಿದರು. ನಾಭಾಗನು ವಿದ್ಯಾಭ್ಯಾಸ ಮುಗಿಸಿ ಬಂದ ಬಳಿಕ ಅವರು ನಾಭಾಗನಿಗೆ ಏನೂ ಕೊಡಲಿಲ್ಲ. ದಾಯ ಭಾಗ ತೆಗೆದುಕೊಳ್ಳುವಾಗ ನಿನ್ನನ್ನು ಮರೆತೆವೆಂದೂ, ತಂದೆಯನ್ನು ನಿನ್ನ ಪಾಲಿಗೆ ಕೊಡುವೆವೆಂದೂ ಹೇಳಿದರು. ನಾಭಾಗನು ತಂದೆಯಾದ ಶ್ರಾದ್ಧದೇವನಿಗೆ ಈ ಸಂಗತಿಯನ್ನು ಅರುಹಿದನು. ಅವರೆಲ್ಲರೂ ವಂಚಕರೆಂದು ಶ್ರಾದ್ಧದೇವನು ನಾಭಾಗನಿಗೆ ತಿಳಿಸಿ ಆಂಗೀರಸ ಗೋತ್ರೀಯ ಬ್ರಾಹ್ಮಣರ ಮಹಾಯಜ್ಞಕ್ಕೆ ಹೋದರೆ ಅಮೋಘ ಧನಸಂಚಯ ವಾಗುವದೆಂದು ಹೇಳಿದನು. ಯಜ್ಞದಲ್ಲಿ ನಾಭಾಗನು ವಿಶ್ವೇದೇವ ಸಂಬಂಧವಾದ ಸೂಕ್ತಗಳನ್ನು ಹೇಳುತ್ತಿದ್ದನು. ಅದಕ್ಕಾಗಿ ಆ ಬ್ರಾಹ್ಮಣರು ಯಜ್ಞ ಸಮಾಪ್ತಿಯಾದ ಬಳಿಕ ಉಳಿದುಕೊಂಡಿದ್ದ ಧನವನ್ನೆಲ್ಲ ನಾಭಾಗನಿಗೆ ಕೊಟ್ಟರು. ಬಳಿಕ ಅವರೆಲ್ಲರೂ ಸ್ವರ್ಗಕ್ಕೆ ತೆರಳಿದರು. ಯಜ್ಞಾವಶಿಷ್ಟ ಧನವನ್ನು ತೆಗೆದುಕೊಳ್ಳುವಾಗ ಭಗವಾನ್ ಶಿವನು ಅಲ್ಲಿ ಪ್ರಕಟನಾದನು. ಅವನು ಧನವನ್ನು ತೆಗೆದುಕೊಳ್ಳಕೂಡದೆಂದು ನಾಭಾಗನಿಗೆ ಹೇಳಿದನು. ತಾನು ಯಜ್ಞಾವಶಿಷ್ಟಕ್ಕೆ ಅಧಿಕಾರಿಯಾದ ಕೃಷ್ಣ ದರ್ಶನ ನಾಮಕ ಶಿವನ ಅವತಾರವೆಂದು ತಿಳಿಸಿದನು. ನಾಭಾಗನು ತಂದೆಯ ಬಳಿಗೆ ಬಂದು ತಿಳಿಸಿದಾಗ ಈ ಸಂಗತಿಯು ನಿಜವೆಂದು ನಾಭಾಗನಿಗೆ ತಿಳಿಯಿತು. ಆಗ ನಾಭಾಗನು ಕೃಷ್ಣ ದರ್ಶನನಿಗೆ ವಂದಿಸಿ ತನ್ನ ತಪ್ಪನ್ನು ಒಪ್ಪಿಕೊಂಡನು. ಸಾಧು ಭಾವದ ನಾಭಾಗ ನಿಗೆ ಬ್ರಹ್ಮತತ್ವದ ಜ್ಞಾನವನ್ನು ಉಪದೇಶಿಸಿ, ಯಜ್ಞಾವಶಿಷ್ಟ ಧನವನ್ನು ಅವನಿಗೆ ಕೊಟ್ಟನು. ಕೃಷ್ಣ ದರ್ಶನ ಶಿವಾವತಾರವು ನಾಭಾಗನಿಗೆ ಜ್ಞಾನೋದಯವನ್ನುಂಟು ಮಾಡಿತು. ಅವನು ಶಿವನಿಗೆ ಪ್ರಣಾಮ ಮಾಡಿದನು. ಕೂಡಲೆ ಕೃಷ್ಣ ದರ್ಶನನು ಅವನಿಗೆ ಆಶೀರ್ವಾದ ಮಾಡಿ ಅಂತರ್ಧಾನನಾದನು.

# ಅವಧೂತಾವತಾರ

ನಂದೀಶ್ವರ–ಸನತ್ಕುಮಾರ ಯೋಗೀಶ್ವರಾ, ಪ್ರಾಚೀನ ಕಾಲದ ಸಂಗತಿಯು. ಇಂದ್ರನು ದೇವಗುರು ಬೃಹಸ್ಪತಿಯೊಡನೆ ಶಿವನ ದರ್ಶನಕ್ಕಾಗಿ ಕೈಲಾಸಕ್ಕೆ ಹೊರಟನು. ಈ ಸಂಗತಿಯು ಭಗವಾನ್ ಶಂಕರನಿಗೆ ತಿಳಿದು ಅವಧೂತನಾಗಿ ಮಾರ್ಗದಲ್ಲಿ ನಿಂತನು. ಅವನ ಮೈಮೇಲೆ ಯಾವ ವಸ್ತ್ರಗಳೂ ಇದ್ದಿಲ್ಲ. ಅವಧೂತನು ಅತ್ಯಂತ ತೇಜಸ್ವಿಯಾಗಿದ್ದನು. ಅವನನ್ನು ಕಂಡು ಇಂದ್ರನು ಕೋಪಿಷ್ಠನಾದನು. ತಾನು ದೇವಲೋಕದ ಅಧಿಪತಿಯೆಂಬ ಗರ್ವವು ಅವನಲ್ಲಿ ಅತಿರೇಕವಾಗಿತ್ತು.

ಇಂದ್ರ–ಎಲೋ ಅವಧೂತಾ, ನಾನೂ ನನ್ನ ಗುರುವಾದ ಬೃಹಸ್ಪತಿಯೂ ಭಗವಾನ್ ಶಂಕರನ ದರ್ಶನಕ್ಕಾಗಿ ಕೈಲಾಸ ಪರ್ವತಕ್ಕೆ ಹೊರಟಿದ್ದೇವೆ. ಅವನು ಕೈಲಾಸದಲ್ಲಿರುವನಲ್ಲವೆ ? ನೀನು ದಿಗಂಬರನಾಗಿ ದಾರಿಗೆ ಅಡ್ಡಗಟ್ಟಿ ನಿಂತಿರುವದೇಕೆ ? ನೀನು ಯಾರು ?

ಅವಧಾತಾವತಾರಿಯಾದ ಶಿವನು ಏನೂ ಮಾತಾಡದೆ ಮೌನವಾಗಿದ್ದನು. ಮದಾಂಧನಾದ ಇಂದ್ರನು ಅವನನ್ನು ಹೊಡೆದನು.

ಇಂದ್ರ–ದುರ್ಮತಿಯೆ, ಕೇಳಿದ ಪ್ರಶ್ನೆಗೆ ಉತ್ತರವೀಯದೆ ನಿಂತೆಯೇಕೆ ? ನಿನ್ನ ಮೇಲೆ ವಜ್ರಪ್ರಹಾರ ಮಾಡುವೆನು. ನಿನ್ನನ್ನು ಯಾರು ರಕ್ಷಿಸುವರೋ ನೋಡುತ್ತೇನೆ.

ಇಂದ್ರನು ಹೀಗೆ ಮಾತಾಡಿ ಅವಧೂತನ ಮೇಲೆ ತನ್ನ ವಜ್ರಾಯುಧ ವನ್ನೆತ್ತಿದನು. ಶಂಕರನು ಅವನ ವಜ್ರಾಯುಧವನ್ನು ಹಿಡಿದು ನಿಲ್ಲಿಸಿದನು.

ಬೃಹಸ್ಪತಿ– ದೇವೇಂದ್ರಾ, ಈ ಅವಧೂತನು ಭಗವಾನ್ ಶಂಕರನಾಗಿ ರುವನು. ನೀನು ಅವನ ಮೇಲೆ ವಜ್ರಪ್ರಹಾರ ಮಾಡಬೇಡ. ನಿನ್ನ ಗರ್ವಭಂಗಕ್ಕಾಗಿ ಅವನು ಹೂಡಿದ ಆಟವಿದು.

ಬೃಹಸ್ಪತಿಯು ಹೀಗೆ ಇಂದ್ರನಿಗೆ ಹೇಳಿ ಅವಧೂತಾವತಾರಕ್ಕೆ ವಂದನೆ ಮಾಡಿದನು. ಶರಣಾಗತನಾದ ಇಂದ್ರನನ್ನು ರಕ್ಷಿಸಬೇಕೆಂದು ಅವನು ಮಹಾ ದೇವನಿಗೆ ಬೇಡಿಕೊಂಡನು.

ಅವಧೂತ– ದೇವ ಗುರುವೆ, ರೋಷವಶದಿಂದ ಹೊರಬಿದ್ದ ತ್ರಿನೇತ್ರದ ಜ್ವಾಲೆಯನ್ನು ಪುನಃ ಹೇಗೆ ಧಾರಣ ಮಾಡಲಿ ?

ಅವಧೂತ–ಸದಾಶಿವನೆ, ನೀನು ಭಕ್ತವತ್ಸಲನು. ನಿನ್ನ ತೇಜವನ್ನು ಬೇರೆ ಕಡೆಗೆ ಕಳುಹಿಸಿ ಬಿಡು. ಇಂದ್ರನನ್ನು ನೀನು ಕ್ಷಮಿಸಬೇಕು.

ಬೃಹಸ್ಪತಿ–ಇಂದ್ರನು ಗರ್ವಾಂಧನಾಗಿರುವನು. ನಿನ್ನ ವಿನಯವನ್ನು ಕಂಡು ನಾನು ಪ್ರಸನ್ನನಾಗಿ ಇಂದ್ರನನ್ನು ಕ್ಷಮಿಸಿಬಿಡಬೇಕಾಗಿದೆ.

ಶಿವನ ತೇಜದಿಂದ ಒಬ್ಬ ಬಾಲಕನು ಪ್ರಾದುರ್ಭವಿಸಿದನು. ಆ ಬಾಲಕನು ಸಿಂಧುಪುತ್ರನಾದ ಜಲಂಧರನು.

ಅವಧೂತಾವತಾರದ ಶಿವನು ಇಂದ್ರನನ್ನು ಕ್ಷಮಿಸಿ ಅಂತರ್ಧಾನ ನಾದನು.

## ಭಿಕ್ಷುವರ್ಯಾವತಾರ

ನಂದೀಶ್ವರ–ಸನತ್ಕುಮಾರ ಮುನಿಶ್ರೇಷ್ಠಾ, ಭಗವಾನ್ ಶಂಭುವಿನ ನಾರೀಸಂದೇಹಭಂಜಕ ಭಿಕ್ಷುವರ್ಯಾವತಾರದ ವರ್ಣನೆ ಮಾಡುವೆನು. ಹಿಂದಕ್ಕೆ ವಿದರ್ಭದೇಶದಲ್ಲಿ ಸತ್ಯರಥನೆಂಬ ರಾಜನಿದ್ದನು. ಅವನು ಧರ್ಮವಂತನೂ, ಸತ್ಯಶೀಲನೂ ಪ್ರಜಾರಂಜನತತ್ಪರರೂ ಆಗಿದ್ದನು. ಇವನು ಶಂಭುವಿನಲ್ಲಿ ಅತ್ಯಂತ ನಿಷ್ಠೆಯುಳ್ಳವನಾಗಿದ್ದು, ಶಿವಭಕ್ತರಲ್ಲಿ ಮಮತೆಯುಳ್ಳವನಾಗಿದ್ದನು. ನೆರೆಯ ರಾಜ್ಯವಾದ ಶಾಲ್ವದೇಶದ ರಾಜನು ಅತ್ಯಂತ ಬಲಾಢ್ಯನಿದ್ದನು. ಅವನು ದೊಡ್ಡ ಸೈನ್ಯದೊಡನೆ ವಿದರ್ಭ ನರೇಶನ ಮೇಲೆ ದಾಳಿ ಮಾಡಿದನು. ಘನಘೋರ ಸಂಗ್ರಾಮವು ನಡೆಯಿತು. ಯುದ್ಧದಲ್ಲಿ ವಿದರ್ಭದ ಸೈನ್ಯವು ನಾಶವಾಯಿತು. ಸತ್ಯರಥನೂ ಧರಾಶಾಯಿಯಾದನು. ವಿದರ್ಭದ ಮಹಾರಾಣಿಯು ರಾಜಧಾನಿ ಯನ್ನು ಬಿಟ್ಟು ಹೊರಬಿದ್ದಳು. ಅವಳು ಗರ್ಭವತಿಯಿದ್ದಳು. ಅವಳು ಭಗವಾನ್ ಶಂಕರನ ನಾಮಸ್ಮರಣೆ ಮಾಡುತ್ತ ಪೂರ್ವ ದಿಶೆಗೆ ಹೊರಟಳು. ಭಗವಾನ್ ಶಂಕರನ ದಯೆಯಿಂದ ಅವಳು ಸುರಕ್ಷಿತವಾಗಿ ಒಂದು ಸರೋವರದ ಬಳಿಗೆ ಬಂದಳು. ಬಹಳವಾಗಿ ದಣಿದುದರಿಂದ ಸರೋವರದ ತಟಾಕದಲ್ಲಿಯ ವೃಕ್ಷದ ಛಾಯೆಯಲ್ಲಿ ವಿಶ್ರಮಿಸಿದಳು. ಆಗ ಅವಳಿಗೆ ನವಮಾಸ ತುಂಬಿದ್ದರಿಂದ ಅಲ್ಲಿಯೆ

ಪುತ್ರನನ್ನು ಪ್ರಸವಿಸಿದಳು. ದುಃಖಾಕ್ರಾಂತಳೂ, ಪಥಶ್ರಮದಿಂದ ದಣಿದವಳೂ ಆದ ಮಹಾರಾಣಿಗೆ ನೀರಡಿಕೆಯು ಬಹಳವಾಯಿತು. ಅವಳು ನವಜಾತ ಶಿಶುವನ್ನು ಅಲ್ಲಿಯೆ ಬಿಟ್ಟು ನೀರು ಕುಡಿಯಲು ಸರೋವರಕ್ಕೆ ಹೋದಳು. ಅವಳು ನೀರು ಕುಡಿಯುತ್ತಿರುವಾಗ ಒಂದು ದೊಡ್ಡ ಮೊಸಳೆಯು ಅವಳ ಕಾಲನ್ನು ಹಿಡಿದು ನೀರಲ್ಲಿ ಎಳೆದೊಯ್ದಿತು. ಕೂಸು ಪರದೇಶಿಯಾಯಿತು. ಮಹೇಶ್ವರನು ನಾಲಭೇದವಾಗದ ಶಿಶುವನ್ನು ಜತನ ಮಾಡತೊಡಗಿದನು. ಪರಮಾತ್ಮನ ಪ್ರೇರಣೆಯಿಂದ ಒಬ್ಬ ಬ್ರಾಹ್ಮಣಿಯು ಶಿಶುವಿದ್ದ ಸ್ಥಳಕ್ಕೆ ಅಕಸ್ಮಾತ್ತಾಗಿ ಬಂದಳು. ಅವಳು ಭಿಕ್ಷಾವೃತ್ತಿಯಿಂದ ಉಪಜೀವನ ಮಾಡುತ್ತಿದ್ದಳು. ಅವಳಿಗೆ ಒಂದು ವರ್ಷದ ಮಗನಿದ್ದನು. ಅದೇ ಜನಿಸಿದ ಮಹಾರಾಣಿಯ ಕೂಸನ್ನು ಕಂಡು ಅವಳು ಮರಮರನೆ ಮರುಗಿದಳು. ಅಷ್ಟರಲ್ಲಿ ಭಗವಾನ್ ಮಹೇಶ್ವರನು ಯತಿವೇಷ ಧಾರಿಯಾಗಿ ಅಲ್ಲಿಗೆ ಬಂದನು.

ಭಿಕ್ಷುವರ್ಯಶಿವ–ನೀನು ಮನದಲ್ಲಿ ಸಂದೇಹ ಪಡಬೇಡ. ಈ ಮಗುವು ಹೀನಕುಲದ್ದಲ್ಲ. ನೀನು ಇವನನ್ನು ಮಗನೆಂದು ಭಾವಿಸಿ, ನಿನ್ನ ಮಗನೊಂದಿಗೆ ರಕ್ಷಣೆ ಮಾಡು. ನೀನು ಇವನನ್ನು ಜತನ ಮಾಡಿದರೆ ನೀನೂ ನಿನ್ನ ಪುತ್ರನೂ ಉದ್ಧಾರವಾಗುವಿರಿ.

ಬ್ರಾಹ್ಮಣಿ–ಭಿಕ್ಷುದೇವಾ, ಈ ಮಗುವು ಯಾರದು? ನೀನು ಯಾರು ? ಎಲ್ಲ ಸಂಗತಿಯನ್ನು ತಿಳಿಸಬೇಕು.

ಭಿಕ್ಷುಪ್ರವರ ಶಿವ–ಬ್ರಾಹ್ಮಣಿ, ಇವನು ವಿದರ್ಭನರೇಶ ಸತ್ಯರಥನ ಕುಮಾರನು. ರಾಜನು ರಣಭೂಮಿಯಲ್ಲಿ ಮಡಿದನು. ಅವನ ಗರ್ಭಿಣಿ ಪತ್ನಿಯು ಇಲ್ಲಿಗೆ ಬಂದು ಈ ಮಗುವನ್ನು ಪ್ರಸವಿಸಿ, ನೀರು ಕುಡಿಯಲು ಸರೋವರಕ್ಕೆ ಹೋದಾಗ ನಕ್ರನ ಬಾಯಿಗೆ ತುತ್ತಾದಳು. ಇವೆಲ್ಲ ಘಟನೆಗಳು ಪೂರ್ವಜನ್ಮದ ದುಷ್ಕರ್ಮಗಳ ಫಲವಾಗಿವೆ. ಸತ್ಯರಥನು ಪೂರ್ವಜನ್ಮದಲ್ಲಿ ಪಾಂಡ್ಯ ನರೇಶ ನಾಗಿದ್ದನು. ಶಿವನ ಧ್ಯಾನ, ಪೂಜೆಗಳ ತ್ಯಾಗ ಮಾಡಿದ್ದರಿಂದ ಅವನ ಪಾಡು ಹೀಗಾಯಿತು. ನಿನ್ನ ಪುತ್ರನು ಪೂರ್ವಜನ್ಮದಲ್ಲಿ ಬ್ರಾಹ್ಮಣನಾಗಿದ್ದನು. ಅವನು ದಾನ, ಧರ್ಮಗಳನ್ನು ಜರುಗಿಸುತ್ತಿದ್ದಿಲ್ಲ. ಕೇವಲ ಪ್ರತಿಗ್ರಹವನ್ನು ಮಾಡುತ್ತಿದ್ದನು. ಶಿವಲಿಂಗದ ಪೂಜೆಯು ಅವನಿಗೆ ಬೇಕಾಗಿದ್ದಿಲ್ಲ. ಶತ್ರುರಾಜನು ದಾಳಿಮಾಡಿ ಅವನನ್ನು ಸಂಹರಿಸಿದನು. ಅವನೇ ಎರಡನೆಯ ಜನ್ಮದಲ್ಲಿ ಸತ್ಯರಥನಾದನು.

ಬ್ರಾಹ್ಮಣಿಯು ರಾಜಪುತ್ರನನ್ನೂ ತನ್ನ ಪುತ್ರನನ್ನೂ ರಕ್ಷಿಸಿ, ಬೆಳೆಯಿಸಿ ವಿದ್ಯಾ ಸಂಪನ್ನರನ್ನಾಗಿ ಮಾಡಿದಳು. ರಾಜಕುಮಾರನೂ ಬ್ರಾಹ್ಮಣಕುಮಾರನೂ ಬೆಳೆದು ದೊಡ್ಡವರಾದರು. ಅವರು ಯಾವಾಗಲೂ ಶಿವಪೂಜೆಯಲ್ಲಿ ಮಗ್ನರಾಗಿರುತ್ತಿದ್ದರು. ಅವರು ನದಿಯ ಸ್ನಾನಕ್ಕೆ ಹೋದಾಗ ಹೊನ್ನು ತುಂಬಿದ ಕಲಶವು ದೊರೆಯಿತು. ಅಂದಿನಿಂದ ಅವರ ತಾಯಿಗೆ ಪರಮಾನಂದವಾಯಿತು.

ಒಮ್ಮೆ ರಾಜಕುಮಾರನೂ ಬ್ರಾಹ್ಮಣಕುಮಾರನೂ ಅರಣ್ಯಕ್ಕೆ ಹೋದಾಗ ಗುಣರೂಪ ಸಂಪನ್ನಳಾದ ಒಬ್ಬ ಗಂಧರ್ವ ಕನ್ಯೆಯು ಭೆಟ್ಟಿಯಾದಳು. ಅವಳ ತಂದೆಯು ತನ್ನ ಈ ಕುಮಾರಿಯನ್ನು ರಾಜಕುಮಾರನಿಗೆ ವಿವಾಹ ಮಾಡಿಕೊಟ್ಟನು. ಇಬ್ಬರೂ ಕುಮಾರರು ಭಗವಾನ್ ಶಿವನ ಆರಾಧನೆ ಮಾಡುತ್ತಿದ್ದರು. ಭಿಕ್ಷುವರ್ಯಾವತಾರಿಯಾದ ಶಂಕರನು ಅವರ ಭಕ್ತಿಗೆ ಮೆಚ್ಚಿದನು. ರಾಜಕುಮಾರನಾದ ಧರ್ಮಗುಪ್ತನು ವಿದರ್ಭದೇಶದ ರಾಜನಾದನು. ಬ್ರಾಹ್ಮಣಕುಮಾರನು ರಾಜನ ರಾಜ್ಯಕಾರ್ಯದಲ್ಲಿ ನೆರವು ನೀಡಹತ್ತಿದನು. ಇಬ್ಬರೂ ಅಣ್ಣ ತಮ್ಮಂದಿರಂತೆ ನಡೆದುಕೊಂಡರು. ಅವರು ಶಿವಾರಾಧನೆ ಮಾಡುತ್ತ ಕೊನೆಯಲ್ಲಿ ಸದ್ಗತಿಯನ್ನು ಪಡೆದರು.

## ಸುರೇಶ್ವರಾವತಾರ

ನಂದೀಶ್ವರ–ಸನತ್ಕುಮಾರ ಮುನಿಯೆ, ವ್ಯಾಘ್ರಪಾದ ಮುನಿಪುತ್ರನಾದ ಉಪಮನ್ಯುವು ಶೈಶವಾವಸ್ಥೆಯಲ್ಲಿ ತಾಯಿಯೊಡನೆ ಸೋದರಮಾವನ ಮನೆಯಲ್ಲಿ ಇರುತ್ತಿದ್ದನು. ಪೂರ್ವಜನ್ಮದಲ್ಲಿ ಸಿದ್ಧಿಯನ್ನು ಪಡೆದ ಇವನು ನೀತಿವಂತನೂ, ನಿಷ್ಠಾವಂತನೂ ಆಗಿದ್ದನು. ಬಾಲ್ಯದಲ್ಲಿ ಇವನು ಹಾಲು ಕೊಡಬೇಕೆಂದು ತಾಯಿಯನ್ನು ಕಾಡುತ್ತಿದ್ದನು. ಮಗನ ಕಾಟವು ತಪ್ಪಬೇಕೆಂದು ಅವನ ತಾಯಿಯು ಉಂಛವೃತ್ತಿಯಿಂದ ತಂದ ಕಾಳನ್ನು ಕಲ್ಲ ಮೇಲೆ ಅರೆದು ನೀರಲ್ಲಿ ಕೂಡಿಸಿ ಹಾಲೆಂದು ಕೊಟ್ಟಳು. ಅವನು ಅದನ್ನು ಕುಡಿದು, ಇದು ಹಾಲಲ್ಲವೆಂದು ರೋದಿಸಹತ್ತಿದನು. ವನವಾಸಿಗಳೂ ದರಿದ್ರರೂ ಆದ ನಮಗೆ ಹಾಲು ದೊರೆಯಲಾರದೆಂದು ಅವಳು ಮಗುವನ್ನು ಸಮಾಧಾನಪಡಿಸಿದಳು. ತಾಯಿಯು ಹೀಗೆ ಹೇಳಿದ ಕೂಡಲೆ ಬಾಲಕನಾದ ಉಪಮನ್ಯುವು ಶಿವನ ಧ್ಯಾನ ಮಾಡಿ

ದಾರಿದ್ರ್ಯವನ್ನು ಹೋಗಲಾಡಿಸಿಕೊಳ್ಳಬೇಕೆಂದು ವಿಚಾರಿಸಿ, ವನವನ್ನು ಸೇರಿ ತಪಶ್ಚರ್ಯ ಮಾಡತೊಡಗಿದನು. ಅವನು ಎಂಟು ಇಟ್ಟಿಂಗಿಗಳ ಸಣ್ಣ ಮಂದಿರ ವನ್ನು ನಿರ್ಮಿಸಿ, ಅದರಲ್ಲಿ ಶಿವನ ಪಾರ್ಥಿವ ಲಿಂಗವನ್ನಿರಿಸಿ ಪೂಜಿಸ ತೊಡಗಿದನು. ಅವನು ಭಗವತಿ ಪಾರ್ವತಿದೇವಿಯ ಧ್ಯಾನದಲ್ಲಿ ಮಗ್ನನಾದನು.

ಉಪಮನ್ಯುವಿನ ತಪಸ್ಸಿಗೆ ಶಂಭುವು ಮೆಚ್ಚಿದನು. ಅವನು ದೇವೇಂದ್ರನ ರೂಪ ಹೊಂದಿದನು. ಪಾರ್ವತಿಯು ಶಚಿಯಾದಳು. ನಂದೀಶ್ವರನು ಐರಾವತ ವಾದನು. ಶಿವಗಣಗಳು ದೇವತೆಗಳಾದರು. ಅವರೆಲ್ಲರೂ ಉಪಮನ್ಯುವಿನ ಬಳಿಗೆ ಬಂದರು. ಆಗ ದೇವೇಂದ್ರರೂಪದ ಶಿವನು ಅವನಿಗೆ ವರವನ್ನು ಕೇಳಬೇಕೆಂದು ತಿಳಿಸಿದನು. ಉಪಮನ್ಯುವು ಭಗವಾನ್ ಪಶುಪತಿಯ ಹೊರತು ಯಾರನ್ನೂ ಯಾಚಿಸುವದಿಲ್ಲೆಂದು ಅವನಿಗೆ ತಿಳಿಸಿದನು. ಇಂದ್ರರೂಪಿಯಾದ ಶಿವನು ಶಿವನಿಂದೆಯನ್ನು ಮಾಡಿದನು. ಆಗ ಉಪಮನ್ಯುವು ಇಂದ್ರನನ್ನು ವಧಿಸಿ ತಾನು ಪ್ರಾಣತ್ಯಾಗ ಮಾಡಬೇಕೆಂದು ನಿಶ್ಚಯಿಸಿ, ತನ್ನ ಧನುವಿಗೆ ಅಘೋರಾಸ್ತ್ರ ವನ್ನು ಹೂಡಿದನು. ಆಗ ನಂದಿಯು ಅವನ ಕೈಗಳನ್ನು ಹಿಡಿದನು. ಆ ಅಸ್ತ್ರದಿಂದ ಹೊರಟ ಪ್ರಳಯಾಗ್ನಿಯನ್ನು ಶಿವನು ಶಾಂತಗೊಳಿಸಿದನು. ತರುವಾಯ ಬಾಲಕ ಉಪಮನ್ಯುವಿಗೆ ಅವನ ಇಚ್ಛೆಯಂತೆ ವರಗಳನ್ನು ಕೊಟ್ಟನು. ಶಿವ-ಪಾರ್ವತಿ, ನಂದೀಶ್ವರರ ದರ್ಶನ ಹೊಂದಿ ಅವನು ಕೃತಾರ್ಥನಾದನು. ಸುರೇಶ್ವರಾವತಾರ ತಾಳಿದ ಭಗವಾನ್ ಶಿವನೂ ಪಾರ್ವತಿಯೂ ನಂದೀಶ್ವರನೂ ಅವನನ್ನು ಅಶೀರ್ವದಿಸಿದರು. ಸುರೇಶ್ವರಾವತಾರ ತಾಳಿದ ನೆನಪಿಗಾಗಿ ಉಪಮನ್ಯುವಿನ ಆಶ್ರಮದಲ್ಲಿ ಅವನು ಸುರೇಶ್ವರಲಿಂಗ ರೂಪದಿಂದ ಇರುವದಾಗಿ ಹೇಳಿದನು.

## ಕಿರಾತಾವತಾರ

ನಂದೀಶ್ವರ-ಸನತ್ಕುಮಾರ ಮುನಿಯೆ, ಶಿವನು ಹೃದಯಂಗಮವಾದ ಕಿರಾತಾವತಾರವನ್ನು ಹೊಂದಿದ ಕತೆಯನ್ನು ವಿವರಿಸುವೆನು, ಕೇಳು. ಮಹಾಬಲಿಷ್ಠ ರಾದ ಪಾಂಡವರನ್ನು ಸುಯೋಧನನು ಕಪಟದಿಂದ ದ್ಯೂತದಲ್ಲಿ ಸೋಲಿಸಿದನು. ಪಾಂಡವರು ದ್ರೌಪದಿಯೊಡನೆ ದ್ವೈತವನದಲ್ಲಿ ವಾಸಮಾಡಿದರು. ಅವರು ಸೂರ್ಯನಿಂದ ಅಕ್ಷಯಪಾತ್ರೆಯನ್ನು ಪಡೆದು ಉದರನಿರ್ವಾಹ ಮಾಡಿಕೊಂಡಿ

ದ್ದರು. ಅಲ್ಲಿಯೂ ಸುಯೋಧನನಿಂದ ಅವರಿಗೆ ಕಿರುಕುಳವಿದ್ದೇ ಇರುತ್ತಿತ್ತು. ಅವನು ಒಮ್ಮೆ ಪಾಂಡವರ ಸತ್ವಪರೀಕ್ಷೆ ಮಾಡಬೇಕೆಂಬ ಉದ್ದೇಶದಿಂದ ದುರ್ವಾಸ ಮುನಿಯನ್ನು ಹತ್ತು ಸಾವಿರ ಶಿಷ್ಯರೊಡನೆ ಮಧ್ಯರಾತ್ರಿಯಲ್ಲಿ ಊಟಕ್ಕೆ ಕಳುಹಿಸಿದನು. ಶ್ರೀಕೃಷ್ಣನ ಕೃಪೆಯಿಂದ ಅವರು ಋಷಿಶಾಪದಿಂದ ಪಾರಾದರು. ಆಗ ವೇದವ್ಯಾಸ ಮುನಿಯು ಅಲ್ಲಿಗೆ ಬಂದು, ಇಂದ್ರಕೀಲ ಪರ್ವತಕ್ಕೆ ಹೋಗಿ ತಪಸ್ಸು ಮಾಡಿ ಶಿವನನ್ನು ಒಲಿಸಿಕೊಂಡು ಬಲಾಢ್ಯರಾಗಬೇಕೆಂದು ಪಾಂಡವರಿಗೆ ತಿಳಿಸಿದನು. ಶ್ರೀಕೃಷ್ಣನು ಸಹ ಇದೇ ರೀತಿಯಾಗಿ ಸಲಹೆ ಮಾಡಿದನು. ಅರ್ಜುನನು ಇಂದ್ರಕೀಲ ಪರ್ವತಕ್ಕೆ ಹೋಗಿ ತಪಸ್ಸು ಮಾಡಲು ಸಿದ್ಧನಾಗಿ ದ್ರೌಪದಿಯ ಹಾಗೂ ಧರ್ಮಾದಿಗಳ ಅನುಮತಿಯನ್ನು ದೊರಕಿಸಿ, ಇಂದ್ರಕೀಲ ಪರ್ವತದ ಬಳಿಯ ಜಾಹ್ನವೀತಟದಲ್ಲಿ ತಪಸ್ಸು ಮಾಡತೊಡಗಿದನು. ಅವನು ಪಾರ್ಥಿವಲಿಂಗವನ್ನು ರಚಿಸಿ, ಪೂಜೆ ಹಾಗೂ ಧ್ಯಾನದಲ್ಲಿ ಮಗ್ನನಾದನು.

ಅರ್ಜುನನು ಜಾಹ್ನವೀತಟದಲ್ಲಿ ಉಗ್ರವಾದ ತಪಸ್ಸು ಮಾಡುವ ಸಂಗತಿಯು ಗುಪ್ತಚರರಿಂದ ದೇವೇಂದ್ರನಿಗೆ ತಿಳಿಯಿತು. ಕೂಡಲೆ ಅವನು ಬ್ರಾಹ್ಮಣನ ವೇಷದಿಂದ ಅಲ್ಲಿಗೆ ಬಂದನು. ಅರ್ಜುನನು ಆ ವಿಪ್ರನನ್ನು ಸ್ವಾಗತಿಸಿ ಪೂಜಿಸಿದನು. ದೇವೇಂದ್ರನು ಅರ್ಜುನನ ತಪಾಚರಣೆಯನ್ನು ಕಂಡು ಮೆಚ್ಚಿದನು. ಆಗ ಇಂದ್ರರೂಪವನ್ನು ಪ್ರಕಟಗೊಳಿಸಿ, ಅವನಿಗೆ ಶಿವಮಂತ್ರವನ್ನುಪದೇಶಿಸಿದನು. ತರುವಾಯ ಸಾವಧಾನದಿಂದ ಅರ್ಜುನನ ರಕ್ಷಣೆ ಮಾಡಬೇಕೆಂದು ಅನುಚರರಿಗೆ ಉಪದೇಶಿಸಿ, ದೇವಲೋಕಕ್ಕೆ ತೆರಳಿದನು.

ಅರ್ಜುನನು ಶಿವನನ್ನು ಕುರಿತು ಘೋರ ತಪಾಚರಣೆ ಮಾಡುತ್ತಿರುವ ಸುದ್ದಿಯು ದುರ್ಯೋಧನನಿಗೆ ತಿಳಿಯಿತು. ಆಗ ಅವನು ಮೂಕನೆಂಬ ದಾನವನನ್ನು ಕರೆಯಿಸಿ, ಯಾವದಾದರೂ ಉಪಾಯದಿಂದ ಅರ್ಜುನನನ್ನು ಸಂಹರಿಸಬೇಕೆಂದು ಹೇಳಿದನು. ಆಗ ಆ ದಾನವನು ಒಂದು ಭಯಂಕರವಾದ ವನ್ಯಸೂಕರನಾಗಿ ಇಂದ್ರಕೀಲ ಪರ್ವತಕ್ಕೆ ತೆರಳಿದನು.

ವನವರಾಹವು ಗಿರಿಶಿಖರಗಳಲ್ಲಿಯ ಬಂಡೆಗಳನ್ನು ಉರುಳಿಸುತ್ತ, ಗಿಡ ಮರಗಳನ್ನು ಕಿತ್ತು ಕೆಡಹುತ್ತ ಉಗ್ರ ಧ್ವನಿ ಮಾಡುತ್ತ ಅರ್ಜುನನ ಕಡೆಗೆ ಓಡತೊಡಗಿತು. ಶಿವಪಂಚಾಕ್ಷರ ಮಂತ್ರ ಜಪ ಮಾಡುತ್ತ, ಪಾರ್ಥಿವಲಿಂಗ ಪೂಜೆ

ಮಾಡುತ್ತಿರುವ ಅರ್ಜುನನನ್ನು, ಗುರಿ ಇಟ್ಟು ಓಡುತ್ತಲಿರುವ ಕಾಡಹಂದಿಯನ್ನು ಶಿವನು ಕಂಡನು. ಕೂಡಲೆ ಅವನು ಕಿರಾತಾವತಾರ ತಾಳಿದನು. ಪ್ರಮಥ ಗಣದಲ್ಲಿಯ ಕೆಲವು ಶೂರ ಗಣಗಳನ್ನು ಕರೆದು, ಬೇಟೆಗಾರರ ರೂಪ ಹೊಂದಿ ಇಂದ್ರಕೀಲಕ್ಕೆ ಅರ್ಜುನನ ರಕ್ಷಣೆಗಾಗಿ ತೆರಳಬೇಕೆಂದು ಹೇಳಿದನು. ಭಗವಾನ್ ಶಿವನು ಭಿಲ್ಲರಾಜನ ವೇಷ ಧರಿಸಿ ಇಂದ್ರಕೀಲಕ್ಕೆ ಸಾಗಿದನು. ವನವರಾಹವು ಅರ್ಜುನನ ಮೇಲೆ ಸಾಗಿಹೋಯಿತು. ಅರ್ಜುನನು ಬಿಲ್ಲಿಗೆ ಬಾಣ ಹೂಡಿದನು; ಕಿರಾತವೇಷಧಾರಿ ಶಿವನೂ ಅದರ ಮೇಲೆ ಗುರಿಯಿಟ್ಟನು. ಮಧ್ಯದಲ್ಲಿ ಹಂದಿಯು ಅರ್ಜುನನ ಕಡೆಗೆ ಓಡತೊಡಗಿತ್ತು. ಅರ್ಜುನನ ಹಾಗೂ ಕಿರಾತನ ಬಾಣಗಳು ಒಂದೇ ಕಾಲಕ್ಕೆ ಬಿಡಲ್ಪಟ್ಟವು. ಎರಡೂ ಬಾಣಗಳು ವರಾಹಕ್ಕೆ ತಾಗಿ, ವರಾಹವು ಬಲವಾಗಿ ಗಾಯಗೊಂಡು ಭೂಮಿಗೆ ಬಿದ್ದು ಅಸುನೀಗಿತು. ಆಗ ಶಂಕರನು ತನ್ನ ಅನುಚರರನ್ನು ಸಾಯಕವನ್ನು ತರಲು ಕಳುಹಿಸಿದನು. ಆಗ ಅರ್ಜುನನು ಬಾಣವನ್ನು ಒಯ್ಯಕೂಡದೆಂದು ತಿಳಿಸಿದನು. ಯಾಕಂದರೆ ತನ್ನ ಬಾಣದಿಂದ ಮೃತಿ ಹೊಂದಿರುವದರಿಂದ ಬಾಣವನ್ನು ಒಯ್ಯಲು ಪ್ರತಿ ಬಂಧಿಸಿದನು. ಪ್ರಮಥ ಗಣಗಳು ಶಿವನ ಬಳಿಗೆ ಬಂದು, ಅರ್ಜುನನು ಸಾಯಕವನ್ನು ಒಯ್ಯಲು ಪ್ರತಿಬಂಧಿಸಿದ ಸಂಗತಿಯನ್ನು ತಿಳಿಸಿದರು. ಈ ಸಂಗತಿಯಿಂದ ಕಿರಾತೇಶ್ವರನು ಹರ್ಷಗೊಂಡನು. ಆಗ ಅವನು ಅರ್ಜುನನ ಬಳಿಗೆ ಬಂದನು.

ಕಿರಾತ–ನೀನು ತಪಸ್ವಿ, ನಿನಗೆ ಬೇಟೆಯ ಹವ್ಯಾಸವೇಕೆ ? ನನ್ನೊಡನೆ ಯುದ್ಧ ಮಾಡಿ ಗೆಲವು ಹೊಂದಿದರೆ ಈ ಬೇಟೆ ನಿನ್ನದಾಗುವದು.

ಕಿರಾತೇಶ್ವರನು ಹೀಗೆ ಹೇಳಿದ ಬಳಿಕ ಕಿರಾತಾರ್ಜುನರಲ್ಲಿ ಘನಘೋರ ವಾದ ಸಂಗ್ರಾಮವು ನಡೆಯಿತು. ಕೊನೆಗೆ ಮಲ್ಲಯುದ್ಧವು ನಡೆದು ಶಿವನು ಭೂಮಿಗೆ ಬಿದ್ದನು. ಅರ್ಜುನನು ಗೆಲುವಿನ ಅಹಂಕಾರದಿಂದ ಮೇಲೆದ್ದನು. ಕಿರಾತನು ತನ್ನ ಶಿವರೂಪವನ್ನು ತೋರಿಸಿದನು. ಅರ್ಜುನನು ಮಹಾದೇವನ ಪಾದಕ್ಕೆರಗಿ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಆಗ ಭಗವಾನ್ ಶಂಕರನು ಪ್ರಸನ್ನನಾದನು.

ಶಂಕರ–ಪಾರ್ಥಾ, ನೀನು ನನ್ನ ಪರಮ ಭಕ್ತನಿರುವೆ. ನಿನ್ನ ಪರೀಕ್ಷೆಗಾಗಿಯೆ ನಾನು ಹೀಗೆ ಲೀಲೆ ಮಾಡಿದೆನು. ನಿನ್ನ ತಪಕ್ಕೆ ನಾನು ಮೆಚ್ಚಿರುವೆನು. ನೀನು

ಭಗವದಂಶನಾಗಿರುವೆ. ನರನು ನೀನು; ನಾರಾಯಣನು ಶ್ರೀಕೃಷ್ಣನು. ನೀನು ವರವನ್ನು ಕೇಳು, ಧನಂಜಯಾ, ನೀನು ಯಶೋಭಾಗಿಯಾಗುವೆ. ಸಂಗ್ರಾಮದಲ್ಲಿ ವಿಜಯಿಯಾಗುವೆ.

ಅರ್ಜುನ–ಶಂಭೋ, ನೀನು ಭಕ್ತವತ್ಸಲನಿರುವೆ. ಕರುಣಾಮಯನಿರುವೆ. ಸದಾಶಿವಾ, ನಿನಗೆ ಅನಂತ ಪ್ರಣಾಮಗಳು. ದೇವಾ, ನನ್ನ ಮೇಲೆ ಶತ್ರುಗಳಿಂದ ಪ್ರಾಪ್ತವಾದ ಸಂಕಟವು ನಿನ್ನ ದರ್ಶನದಿಂದ ನಿವಾರಣೆಯಾಯಿತು. ಈ ಲೋಕದಲ್ಲಿ ಪರಾಸಿದ್ಧಿಯು ಯಾವ ವಿಧದಿಂದಾಗುವದೋ ಹಾಗೆ ನೀನು ಕೃಪೆ ಮಾಡಬೇಕು.

ಶಿವ–ವತ್ಸಾ, ನಾನು ನಿನಗೆ ಪಾಶುಪತವೆಂಬ ಮಹಾನ್ ಅಸ್ತ್ರವನ್ನು ಕೊಡುವೆನು. ನೀನು ಇನ್ನು ಶತ್ರುಗಳಿಗೆ ಅಜೇಯನಾಗುವೆ. ಭಾವೀ ಸಂಗ್ರಾಮದಲ್ಲಿ ನಿಮಗೆ ಈ ಅಸ್ತ್ರವು ಸಹಾಯಕವಾಗುವದು. ಶ್ರೀಕೃಷ್ಣನು ನಿಮಗೆ ಸಹಾಯಕ ನಾಗುವನು. ನೀವೆಲ್ಲ ಪಾಂಡವರು ಧರ್ಮವಂತರಿರುವಿರಿ. ಧರ್ಮಕ್ಕೆ ವಿಜಯವು ನಿಶ್ಚಯವಾಗಿ ದೊರೆಯುವದು.

ಭಗವಾನ್ ಶಂಕರನು ಹೀಗೆ ನುಡಿದು, ಧನಂಜಯನ ತಲೆಯ ಮೇಲೆ ತನ್ನ ವರದ ಹಸ್ತವನ್ನಿಟ್ಟನು. ಭಗವತಿ ಉಮಾದೇವಿಯೂ ಅವನಿಗೆ ಶುಭಾಶೀರ್ವಾದ ಮಾಡಿದಳು. ಅರ್ಜುನನು ಲೋಕಜನನಿಗೆ ಪ್ರಣಾಮಗಳನ್ನು ಅರ್ಪಿಸಿದನು. ಶಿವನಿಗೂ ಪುನಃ ಪುನಃ ವಂದಿಸಿದನು. ಕೂಡಲೆ ಜಗದೀಶ್ವರನೂ, ಜಗದಂಬೆಯೂ ಅಂತರ್ಧಾನರಾದರು.

ಅರ್ಜುನನು ಇಂದ್ರಕೀಲ ಪರ್ವತದಿಂದ ದ್ವೈತವನಕ್ಕೆ ಬಂದು ಭಗವಂತನ ಕಿರಾತಾವತಾರದ ಕಥೆಯನ್ನು ವಿವರಿಸಿದನು. ಶಿವನು ಪಾಶುಪತಾಸ್ತ್ರವನ್ನು ಕೊಟ್ಟಿದ್ದಕ್ಕಾಗಿ ಎಲ್ಲರೂ ಸಂತುಷ್ಟರಾದರು. ಭಾವೀ ಸಂಗ್ರಾಮದಲ್ಲಿ ತಮಗೆ ವಿಜಯವು ದೊರೆಯುವದೆಂದು ಎಲ್ಲರೂ ಭಾವಿಸಿದರು. ಅರ್ಜುನನು ಶಿವನ ಸಂದರ್ಶನ ಹೊಂದಿದ್ದರಿಂದ ಶ್ರೀಕೃಷ್ಣನೂ ಸಂತುಷ್ಟನಾದನು. ಭಗವಾನ್ ಸದಾಶಿವನ ಕಿರಾತಾವತಾರದ ಕತೆಯನ್ನು ಕೇಳಿ ಅವನು ಅರ್ಜುನನ ತಪದ ಮಹಿಮೆಯನ್ನು ಕೊಂಡಾಡಿದನು.

# ದ್ವಾದಶ ಜ್ಯೋತಿರ್ಲಿಂಗಗಳು

ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಂ ।
ಉಜ್ಜಯಿನ್ಯಾಂ ಮಹಾಕಾಲಮೋಂಕಾರೇ ಪರಮೇಶ್ವರಂ ॥
ಕೇದಾರಂ ಹಿಮವತ್‌ಪೃಷ್ಠೇ ಡಾಕಿನ್ಯಾಂ ಭೀಮಶಂಕರಂ ।
ವಾರಣಸ್ಯಾಂ ತು ವಿಶ್ವೇಶಂ ತ್ರ್ಯಂಬಕಂ ಗೌತಮೀತಟೇ ॥
ವೈದ್ಯನಾಥಂ ಚಿತಾಭೂಮೌ ನಾಗೇಶಂ ದಾರುಕಾವನೇ ।
ಸೇತುಬಂಧೇ ಚ ರಾಮೇಶಂ ಘುಶ್ಮೇಶಂ ತು ಶಿವಾಲಯೇ ॥
ದ್ವಾದಶೈತಾನಿ ನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ।
ಸರ್ವಪಾಪೈರ್ವಿನಿರ್ಮುಕ್ತಃ ಸರ್ವಸಿದ್ಧಿಫಲಂ ಲಭೇತ್ ॥

(ಶಿ. ಪು. ಕೋ. ರು. ಸಂ ೧, ೨೧–೨೪)

ನಂದೀಶ್ವರ–ಸನತ್ಕುಮಾರ ಮುನಿಯೆ, ಸರ್ವವ್ಯಾಪಿಯಾದ ಭಗವಾನ್ ಶಂಕರನ ಹನ್ನೆರಡು ಜ್ಯೋತಿರ್ಲಿಂಗಗಳು ಭಾರತ ವರ್ಷದಲ್ಲಿರುವವು. ಸೌರಾಷ್ಟ್ರದಲ್ಲಿ ಸೋಮನಾಥ, ಶ್ರೀಶೈಲದಲ್ಲಿ ಮಲ್ಲಿಕಾರ್ಜುನ, ಉಜ್ಜಯನಿಯಲ್ಲಿ ಮಹಾಕಾಲ, ಓಂಕಾರದಲ್ಲಿ ಅಮರೇಶ್ವರ (ಪರಮೇಶ್ವರ), ಹಿಮಾಲಯದಲ್ಲಿ ಕೇದಾರ, ಡಾಕಿನಿಯಲ್ಲಿ ಭೀಮಶಂಕರ, ಕಾಶಿಯಲ್ಲಿ ವಿಶ್ವನಾಥ, ಗೌತಮಿ ತಟದಲ್ಲಿ ತ್ರ್ಯಂಬಕೇಶ್ವರ, ಚಿತಾಭೂಮಿಯಲ್ಲಿ ವೈದ್ಯನಾಥ, ದಾರುಕ ವನದಲ್ಲಿ ನಾಗೇಶ್ವರ, ಸೇತುಬಂಧನದಲ್ಲಿ ರಾಮೇಶ್ವರ, ಶಿವಾಲಯದಲ್ಲಿ ಘುಶ್ಮೇಶ್ವರ, ಈ ಪ್ರಕಾರವಾಗಿ ಶಂಭುವಿನ ಹನ್ನೆರಡು ಜ್ಯೋತಿರ್ಲಿಂಗಗಳಿರುವವು.

ಸೋಮನಾಥ ಲಿಂಗವನ್ನು ಚಂದ್ರಮನು ಪೂಜಿಸಿ ಸಂಪೂರ್ಣ ಪಾಪ ಗಳಿಂದ ಮುಕ್ತನಾದನು. ಅಲ್ಲಿ ಚಂದ್ರಕುಂಡವಿದ್ದು ಅಲ್ಲಿ ಸ್ನಾನ ಮಾಡಿದರೆ ಮನುಷ್ಯನು ರೋಗಮುಕ್ತನಾಗುವನು. ಮಲ್ಲಿಕಾರ್ಜುನನು ಕೈಲಾಸ ಪರ್ವತದಿಂದ ಬಂದು ಶ್ರೀಶೈಲದಲ್ಲಿ ನೆಲೆಗೊಂಡಿರುವನು. ಪುತ್ರಪ್ರಾಪ್ತಿಗಾಗಿ ಈ ದೇವನನ್ನು ಆರಾಧಿಸುವರು. ಶಂಕರನ ಮಹಾಕಾಲ ಎಂಬ ಜ್ಯೋರ್ಲಿಂಗವು ಉಜ್ಜಯನಿ ಯಲ್ಲಿದೆ. ರತ್ನಮಾಲಿನಿವಾಸಿಯಾದ ದೂಷಣನೆಂಬ ಅಸುರನು ವೈದಿಕ ಧರ್ಮ ವಿರೋಧಿಯೂ ವಿಪ್ರದ್ವೇಷಿಯೂ ಆಗಿದ್ದನು. ವೇದನೆಂಬ ವಿಪ್ರನು ಶಿವನ ಧ್ಯಾನ ಮಾಡಿದ್ದರಿಂದ ಆ ದೇವನು ದೂಷಣನನ್ನು ಸಂಹಾರ ಮಾಡಿದನು. ದೇವತೆಗಳ

ಪ್ರಾರ್ಥನೆಯ ಮೇರೆಗೆ ಶಿವನು ಜ್ಯೋತಿರ್ಲಿಂಗ ರೂಪದಿಂದ ಅಲ್ಲಿ ನೆಲಿಸಿದನು. ಆ ಲಿಂಗಕ್ಕೆ ಮಹಾಕಾಲ ಎಂಬ ಹೆಸರು ಬಂದಿತು. ಓಂಕಾರ ಜ್ಯೋತಿರ್ಲಿಂಗವನ್ನು ವಿಂಧ್ಯಗಿರಿಯಲ್ಲಿ ಪ್ರತಿಷ್ಠಾಪನೆ ಮಾಡಿರುವನು. ಲಿಂಗರೂಪಿ ಶಂಕರನು ಎರಡು ರೂಪದಿಂದ ಪ್ರಕಟನಾಗಿರುವನು. ಒಂದು ರೂಪಕ್ಕೆ ಓಂಕಾರೇಶ್ವರನೆನ್ನುವರು; ಮತ್ತೊಂದು ರೂಪಕ್ಕೆ ಪರಮೇಶ್ವರನೆನ್ನುವರು. ಕೇದಾರೇಶ್ವರನು ಕೇದಾರ ಕ್ಷೇತ್ರದಲ್ಲಿ ಜ್ಯೋತಿರ್ಲಿಂಗ ರೂಪದಿಂದ ಪ್ರಕಟನಾಗಿರುವನು. ನರ–ನಾರಾಯಣ ಋಷಿಗಳ ಪ್ರಾರ್ಥನೆಯಂತೆ ಭಗವಾನ್ ಶಂಕರನು ಹಿಮಗಿರಿಯ ಶಿಖರದ ಮೇಲೆ ಜ್ಯೋತಿರ್ಲಿಂಗ ರೂಪದಿಂದ ಕೇದಾರದಲ್ಲಿ ನೆಲೆಗೊಂಡನು. ಶಂಕರನ ಮತ್ತೊಂದು ಜ್ಯೋತಿರ್ಲಿಂಗವು ಭೀಮಶಂಕರ. ಈ ಅವತಾರದಲ್ಲಿ ಶಂಭುವು ಅನೇಕ ಲೀಲೆಗಳನ್ನು ಮಾಡಿದನು. ಕಾಮರೂಪ ದೇಶದ ಅಧಿಪತಿಯಾದ ರಾಜಾ ಸುದಕ್ಷಿಣನಿಗೆ ಭೀಮಾಸುರನೆಂಬ ದೈತ್ಯನು ಪೀಡೆ ಕೊಡತೊಡಗಿದ್ದನು. ಆಗ ರಾಜನು ಶಂಕರನನ್ನು ಅನನ್ಯಭಾವದಿಂದ ಪ್ರಾರ್ಥಿಸಿದನು. ಶಂಭುವು ಭೀಮದೈತ್ಯನನ್ನು ಸಂಹಾರಮಾಡಿ ಡಾಕಿನಿಯಲ್ಲಿ ನೆಲೆಗೊಂಡನು. ಆದುದರಿಂದ ಆ ಜ್ಯೋತಿರ್ಲಿಂಗಕ್ಕೆ ಭೀಮಶಂಕರ ಎಂಬ ಹೆಸರು ಬಂದಿತು. ವಿಶ್ವನಾಥ ನಾಮಕ ಶಂಕರನ ಅವತಾರವು ಕಾಶಿಯಲ್ಲಾಯಿತು. ವಿಷ್ಣು ಮೊದಲಾದ ಎಲ್ಲ ದೇವತೆಗಳೂ ಕೈಲಾಸಪತಿ ಶಿವನನ್ನೂ ಭೈರವನನ್ನೂ ಪೂಜಿಸುತ್ತಿರುವರು. ಕಾಶೀವಿಶ್ವನಾಥನ ಭಕ್ತರು ನಿತ್ಯವೂ ಅವನ ಜಪವನ್ನು ಮಾಡುತ್ತಿರುವರು. ಗೌತಮ ಮಹರ್ಷಿಯ ಪ್ರಾರ್ಥನೆಯ ಮೇರೆಗೆ ಭಗವಾನ್ ಶಂಕರನು ಗೌತಮಿ ತಟದಲ್ಲಿ ತ್ರ್ಯಂಬಕ ಎಂಬ ಹೆಸರಿನಿಂದ ನೆಲೆಸಿರುವನು. ಶಿವನ ಅನುಗ್ರಹದಿಂದ ಶಂಕರಪ್ರಿಯೆಯಾದ ಗಂಗೆಯು ಗೌತಮ ಮಹರ್ಷಿಯ ಪ್ರಾರ್ಥನೆಯಂತೆ ಗೌತಮಿ ಎಂಬ ಹೆಸರಿನಿಂದ ಹರಿಯುತ್ತಿರುವಳು. ಈ ಜ್ಯೋತಿರ್ಲಿಂಗದ ದರ್ಶನದಿಂದ ಮನುಷ್ಯನ ಎಲ್ಲ ಕಾಮನೆಗಳ ಸಿದ್ಧಿಯಾಗಿ ಕೊನೆಯಲ್ಲಿ ಮುಕ್ತಿಯು ದೊರೆಯುವದು. ವೈದ್ಯನಾಥ ಜ್ಯೋತಿರ್ಲಿಂಗವು ರಾವಣನಿಗಾಗಿ ಚಿತಾಭೂಮಿಯಲ್ಲಿ ಪ್ರತಿಷ್ಠಿತವಾಗಿದೆ. ಜನರು ವೈದ್ಯನಾಥೇಶ್ವರ ಮಹಾತ್ಮೆವನ್ನು ಪಠಿಸುವದರಿಂದಲೂ, ಶ್ರವಣ ಮಾಡುವದರಿಂದಲೂ ಭುಕ್ತಿ, ಮುಕ್ತಿಗೆ ಭಾಗಿಯಾಗುವರು. ದಾರುಕ ವನದಲ್ಲಿ ನಾಗೇಶ್ವರ ಜ್ಯೋತಿರ್ಲಿಂಗವು ಪ್ರತಿಷ್ಠಿತವಾಗಿದೆ. ಸುಪ್ರಿಯ ವೈಶ್ಯನ ಸ್ವಾಮಿಯಾದ ನಾಗೇಶ್ವರನು ಧರ್ಮಘಾತಿ ಯಾದ ದಾರುಕನೆಂಬ ಅಸುರನನ್ನು ವಧಿಸಿ, ಅವನನ್ನು

ರಕ್ಷಿಸಿದನು. ಲೋಕೋಪಕಾರವನ್ನು ಮಾಡುವ ಶಂಭುವು ಅಂಬಿಕಾದೇವಿ ಯಿಂದೊಡಗೂಡಿ ಜ್ಯೋತಿರ್ಲಿಂಗ ಸ್ವರೂಪದಿಂದ ಅಲ್ಲಿ ನೆಲೆಗೊಂಡನು. ನಾಗೇಶ್ವರನ ದರ್ಶನ, ಅರ್ಚನೆಗಳಿಂದ ಮಹಾಪಾತಕಗಳು ನಷ್ಟವಾಗುವವು. ರಾಮೇಶ್ವರ ಜ್ಯೋತಿರ್ಲಿಂಗವನ್ನು ಶ್ರೀರಾಮನು ಸ್ಥಾಪಿಸಿದನು. ರಾಮೇಶ್ವರನು ಶ್ರೀರಾಮನಿಗೆ ಪ್ರಸನ್ನನಾಗಿ ವಿಜಯದ ವರದಾನ ಮಾಡಿದನು. ದಕ್ಷಿಣ ಸಮುದ್ರತೀರದ ಸೇತುಬಂಧದಲ್ಲಿ ಈ ಜ್ಯೋತಿರ್ಲಿಂಗವು ನೆಲೆಸಿದೆ. ರಾಮೇಶ್ವರ ಲಿಂಗವನ್ನು ಗಂಗಾಜಲದಿಂದ ಪೂಜಿಸಿದರೆ ಮುಕ್ತಿಯು ದೊರೆಯುವದು. ಘುಶ್ಮೇಶ್ವರ ಜ್ಯೋತಿರ್ಲಿಂಗವು ದೇವ ಶೈಲದ ನಿಕಟವರ್ತಿಯಾದ ಒಂದು ಸರೋವರದಲ್ಲಿ ಪ್ರಕಟವಾಗಿದೆ. ಭಕ್ತವತ್ಸಲ ಶಂಭುವು ಘುಶ್ಮೆಯ ಪ್ರಾರ್ಥನೆಗೆ ಪ್ರಸನ್ನನಾಗಿ ಸುದೇಹ್ಯನಿಂದ ಹತನಾದ ಅವಳ ಪುತ್ರನನ್ನು ಬದುಕಿಸಿದನು.

ನಂದೀಶ್ವರ–ಸನತ್ಕುಮಾರ ಮುನಿಯೆ, ನಾನು ಹನ್ನೆರಡು ಜ್ಯೋತಿರ್ಲಿಂಗ ಗಳ ಚರಿತ್ರೆಯನ್ನು ಹೇಳಿದೆನು. ಈ ಕಥೆಯನ್ನು ಶ್ರವಣ, ಪಠಣ ಮಾಡುವದರಿಂದ ಮೋಕ್ಷ ಪ್ರಾಪ್ತಿಯಾಗುವದು.

### ಕೋಟಿ ರುದ್ರ ಸಂಹಿತಾ

## ದ್ವಾದಶ ಜ್ಯೋತಿರ್ಲಿಂಗಗಳ ಉಪಲಿಂಗಗಳು, ವಿಭಿನ್ನ ಲಿಂಗಗಳು

ಸೂತಪುರಾಣಿಕ–ಶೌನಕಾದಿ ಋಷಿಗಳೆ, ನಂದೀಶ್ವರನು ಸನತ್ಕುಮಾರ ಮುನಿಗೆ ಹೇಳಿದ ಹನ್ನೆರಡು ಜ್ಯೋತಿರ್ಲಿಂಗಗಳನ್ನು ನೀವೂ ಅರಿತಿರಿ. ಅವುಗಳ ಉಪಲಿಂಗಗಳನ್ನು ತಿಳಿಸುವೆನು. ಸೌರಾಷ್ಟ್ರ ಸೋಮನಾಥನ ಉಪಲಿಂಗವು ಅಂತಕೇಶ್ವರ ಲಿಂಗವು. ಇದು ಮಹೀನದಿಯು ಸಮುದ್ರಕ್ಕೆ ಕೂಡುವ ಸ್ಥಳದಲ್ಲಿದೆ. ಶ್ರೀಶೈಲ ಮಲ್ಲಿಕಾರ್ಜುನನ ಉಪಲಿಂಗವು ರುದ್ರೇಶ್ವರ. ಇದು ಭೃಗುಕಕ್ಷದಲ್ಲಿರು ವದು. ಉಜ್ಜಯನಿಯ ಮಹಾಕಾಲೇಶ್ವರನ ಉಪಲಿಂಗವು ದುಗ್ಧೇಶ್ವರ. ಈ ಲಿಂಗವು ನರ್ಮದಾ ತೀರದಲ್ಲಿರುವದು. ಓಂಕಾರೇಶ್ವರನ ಉಪಲಿಂಗವು ಕರ್ದಮೇಶ್ವರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅದು ಬಿಂದುಸರೋವರದ ತಟಾಕ

ದಲ್ಲಿರುವದು. ಕೇದಾರೇಶ್ವರನ ಉಪಲಿಂಗವು ಭೂತೇಶ್ವರ ಲಿಂಗವು. ಇದು ಯಮುನಾ ತಟದಲ್ಲಿದೆ. ಭೀಮಾಶಂಕರನ ಉಪಲಿಂಗವು ಭೀಮೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಿದೆ. ಇದು ಸಹ್ಯ ಪರ್ವತದಲ್ಲಿ ಸ್ಥಿತವಾಗಿರುವದು. ನಾಗೇಶ್ವರನ ಉಪಲಿಂಗದ ಹೆಸರು ಭೂತೇಶ್ವರ. ಇದು ಮಲ್ಲಿಕಾ ಸರಸ್ವತಿಯ ತಟದಲ್ಲಿರುವದು. ರಾಮೇಶ್ವರನ ಉಪಲಿಂಗವು ಗುಪ್ತೇಶ್ವರ, ಘುಶ್ಮೇಶ್ವರನ ಉಪಲಿಂಗವು ವ್ಯಾಘ್ರೇಶ್ವರ. ಜ್ಯೋತಿರ್ಲಿಂಗಗಳೂ ಉಪಲಿಂಗಗಳೂ ದರ್ಶನ ಮಾತ್ರದಿಂದ ಪಾಪ ಪರಿಹಾರ ಮಾಡುವಂತಹವುಗಳಾಗಿವೆ. ಇವುಗಳಲ್ಲದೆ ಇನ್ನೂ ಅನೇಕ ಪಾವನಕರವಾದ ಲಿಂಗಗಳಿರುವವು.

ಮುನೀಶ್ವರರೆ, ಗಂಗಾತೀರದಲ್ಲಿ ಮುಕ್ತಿದಾಯಿನಿಯಾದ ಕಾಶೀಪುರವು ಸುಪ್ರಸಿದ್ಧವಿರುವದು. ಇದು ಭಗವಾನ್ ಶಿವನ ನಿವಾಸ ಸ್ಥಳವೆಂದು ತಿಳಿಯಲ್ಪಟ್ಟಿರುವದು. ಈ ಕ್ಷೇತ್ರವು ಶಿವಲಿಂಗಮಯವಾಗಿದೆ. ಕಾಶಿಯ ಅವಿಮುಕ್ತ ಕೃತ್ತಿವಾಸೇಶ್ವರ, ತಿಲಭಾಂಡೇಶ್ವರ, ದಶಾಶ್ವಮೇಧ, ಸಂಗಮೇಶ್ವರ, ಭೂತೇಶ್ವರ, ವೈದ್ಯನಾಥ, ಜಪ್ಯೇಶ್ವರ, ಗೋಪೇಶ್ವರ, ರಂಗೇಶ್ವರ, ವಾಮೇಶ್ವರ, ನಾಗೇಶ, ಕಾಮೇಶ, ವಿಮಲೇಶ್ವರ, ಪ್ರಯಾಗದ ಬ್ರಹ್ಮೇಶ್ವರ, ಸೋಮೇಶ್ವರ, ಭಾರದ್ವಾಜೇಶ್ವರ, ಶೂಲಟಂಕೇಶ್ವರ, ಮಾಧವೇಶ, ಅಯೋಧ್ಯೆಯ ನಾಗೇಶ ಮೊದಲಾದ ಶಿವಲಿಂಗಗಳಿರುವವು. ಅತ್ರೀಶ್ವರ ಲಿಂಗವು ಅತ್ರಿಪತ್ನಿಯಾದ ಅನಸೂಯೆಯ ತಪದ ಫಲವಾಗಿ ಪ್ರಕಟವಾಯಿತು.

ಶೌನಕ ಮಹರ್ಷಿಯೆ, ಹಿಂದಕ್ಕೆ ಋಷಿಕೆ ಎಂಬ ಬ್ರಾಹ್ಮಣೆಯಿದ್ದಳು. ಇವಳು ಬಾಲವಿಧವೆಯು. ಇವಳು ನೀತಿವಂತಳೂ, ಶಿವನಲ್ಲಿ ನಿಷ್ಠೆಯುಳ್ಳವಳೂ ಆಗಿದ್ದು, ಪಾರ್ಥಿವ ಲಿಂಗಪೂಜೆ, ಶಿವನಾಮ ಜಪಗಳಲ್ಲಿ ಮಗ್ನಳಾಗಿರುತ್ತಿದ್ದಳು. ಅವಳು ತಪೋಮಗ್ನಳಾಗಿರುವದನ್ನು ಮೂಢನೆಂಬ ದೈತ್ಯನು ನೋಡಿದನು. ರೂಪವತಿಯಾದ ಋಷಿಕೆಯನ್ನು ಕಂಡು ಅವನು ಅವಳ ಮೇಲೆ ಮೋಹಿತನಾದನು. ಮಾಯಾವಿಯಾದ ಆ ದೈತ್ಯನು ಅವಳ ಬಳಿಗೆ ಹೋಗಿ ತನ್ನ ಕಾಮಾಸಕ್ತಿಯನ್ನು ವ್ಯಕ್ತಪಡಿಸಿದನು. ಅತ್ಯಂತ ತಪೋನಿಷ್ಠಳೂ, ಶಿವಧ್ಯಾನತತ್ಪರಳೂ, ಬ್ರಹ್ಮಚರ್ಯ ವ್ರತಪಾಲನೆ ಮಾಡುವವಳೂ ಆದ ಋಷಿಕೆಯು ಅವನನ್ನು ಸನ್ಮಾನಿಸಲಿಲ್ಲ. ಆದುದರಿಂದ ಮೂಢಾಸುರನು ಅವಳಿಗೆ ಅನೇಕ ಬಗೆಯ ಪೀಡೆ ಕೊಡ ತೊಡಗಿದಳು. ಆಗ ಅವಳು ತನ್ನ ಶೀಲರಕ್ಷಣೆ ಮಾಡಬೇಕೆಂದು ಶಿವನನ್ನು

ಪ್ರಾರ್ಥಿಸತೊಡಗಿದನು. ಆಗ ಭಗವಾನ್ ಶಂಕರನು ಅಲ್ಲಿಯೇ ಪ್ರಕಟನಾದನು. ಅವನು ಮೂಢಾಸುರನನ್ನು ದಗ್ಧಗೊಳಿಸಿದನು. ಋಷಿಕೆಯು ಅನನ್ಯಭಾವದಿಂದ ಶಂಭುವಿಗೆ ವಂದಿಸಿದಳು. ಶಿವನು ಅವಳಿಗೆ ವರಗಳನ್ನು ಕೇಳಲು ತಿಳಿಸಿದನು.

ಋಷಿಕೆ–ದೇವಾಧಿದೇವ ಮಹಾದೇವಾ, ಶರಣಾಗತ ವತ್ಸಲಾ, ನೀನು ದೀನಬಂಧುವಾಗಿರುವೆ. ನೀನು ಮೂಢನನ್ನು ವಧಿಸಿ ನನ್ನ ಶೀಲವನ್ನು ಕಾಪಾಡಿದೆ. ಸಮಸ್ತ ಜಗತ್ತಿನ ರಕ್ಷಣೆಯನ್ನು ಮಾಡುವದು ನಿನ್ನ ಕಾರ್ಯವು. ನಿನ್ನ ಚರಣಗಳಲ್ಲಿ ಅನನ್ಯ ಭಕ್ತಿಯು ಉಂಟಾಗುವಂತೆ ಬುದ್ಧಿಯನ್ನು ದಯಪಾಲಿಸು. ಮಹೇಶ್ವರಾ, ನೀನು ಲೋಕೋಪಕಾರಕ್ಕಾಗಿ ಈ ಸ್ಥಾನದಲ್ಲಿ ವಾಸ ಮಾಡಬೇಕು.

ಋಷಿಕೆಯ ಇಚ್ಛೆಯಂತೆ ಶಂಭುವು ಆ ಸ್ಥಳದಲ್ಲಿ ಆವಿರ್ಭವಿಸಿದನು. ಕೂಡಲೆ ವಿಷ್ಣು, ಬ್ರಹ್ಮರು ಅಲ್ಲಿಗೆ ಬಂದು ಪ್ರಣಾಮ ಮಾಡಿ ಪೂಜಿಸಿದರು. ದೇವಗಂಗೆಯೂ ಅಲ್ಲಿ ಬಂದಳು. ದೇವಗಂಗೆಯು ಋಷಿಕೆಯ ತಪಸ್ಸಿನ ಮಹಿಮೆಗಾಗಿ ಅವಳನ್ನು ಪ್ರಶಂಸಿಸಿದಳು.

ದೇವಗಂಗೆ– ಋಷಿಕೆ, ವೈಶಾಖ ಶುಕ್ಲಪಕ್ಷದ ಸಪ್ತಮಿಯ ದಿನ ಈ ನರ್ಮದೆಯಲ್ಲಿ ನಾನು ಪ್ರವೇಶ ಮಾಡುವೆನು.

ಮಹೇಶ್ವರನು ಋಷಿಕೆಯ ಪಾರ್ಥಿವಲಿಂಗದಲ್ಲಿ ವಿಲೀನನಾದನು. ಈ ಲಿಂಗಕ್ಕೆ ನಂದಿಕೇಶನೆಂಬ ಹೆಸರು ಉಂಟಾಗಿದೆ.

## ದ್ವಾದಶ ಜ್ಯೋತಿರ್ಲಿಂಗ ಮಹಾತ್ಮೆ

ದಕ್ಷಪ್ರಜಾಪತಿಯು ತನ್ನ ಕನ್ಯೆಯರಲ್ಲಿ ಇಪ್ಪತ್ತೇಳು ಕನ್ಯೆಯರನ್ನು ಚಂದ್ರಮನಿಗೆ ಕೊಟ್ಟಿದ್ದನು. ಚಂದ್ರನು ರೋಹಿಣಿಯಲ್ಲಿ ಹೆಚ್ಚು ಪ್ರೇಮವುಳ್ಳವನಾಗಿದ್ದನು. ಈ ಸಂಗತಿಯನ್ನು ಕೇಳಿದ ದಕ್ಷನು ಚಂದ್ರನನ್ನು ಭೆಟ್ಟಿಯಾಗಿ, ಎಲ್ಲರಲ್ಲಿಯೂ ಒಂದೇ ರೀತಿಯಿಂದ ಪ್ರೀತಿ ಮಾಡಬೇಕೆಂದು ಉಪದೇಶಿಸಿದನು. ಚಂದ್ರಮನು ಮಾವನ ಮಾತನ್ನು ಅಲಕ್ಷಿಸಿದನು. ಆದುದರಿಂದ ದಕ್ಷನು ಕ್ಷುಬ್ಧನಾದನು. ಅವನು ಚಂದ್ರಮನಿಗೆ ಕ್ಷಯರೋಗಿಯಾಗುವಂತೆ ಶಾಪವನ್ನು ಕೊಟ್ಟನು. ಆಗ ಅವನು ಬ್ರಹ್ಮದೇವನ ಬಳಿಗೆ ಹೋಗಿ, ಕ್ಷಯರೋಗ ನಿವಾರಣೆಗಾಗಿ ಉಪಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸಿದನು. ಪ್ರಭಾಸ

ಕ್ಷೇತ್ರಕ್ಕೆ ಹೋಗಿ ಮೃತ್ಯುಂಜಯ ಜಪವನ್ನು ಮಾಡಬೇಕೆಂದು ಬ್ರಹ್ಮದೇವನು ಅವನಿಗೆ ತಿಳಿಸಿದನು. ಚಂದ್ರಮನು ಅಲ್ಲಿಗೆ ಹೋಗಿ ಪಾರ್ಥಿವಲಿಂಗದ ಪೂಜೆ ಮಾಡುತ್ತ ತಪಸ್ಸು ಮಾಡತೊಡಗಿದನು. ಅವನು ಹತ್ತು ಕೋಟಿ ಮೃತ್ಯುಂಜಯ ಜಪವನ್ನು ಮಾಡಿದನು. ಆಗ ಮಹಾದೇವನು ಅವನಿಗೆ ಪ್ರತ್ಯಕ್ಷನಾಗಿ ಅವನ ಇಚ್ಛೆಯನ್ನು ಈಡೇರಿಸಲು ಸಿದ್ಧನಾದನು.

ಮಹೇಶ್ವರ–ಚಂದ್ರದೇವಾ, ಒಂದು ಪಕ್ಷದಲ್ಲಿ ಪ್ರತಿದಿನ ಒಂದು ಕಲೆಯು ಕ್ಷೀಣವಾಗುವದು, ಎರಡನೆಯ ಪಕ್ಷದಲ್ಲಿ ನಿನ್ನ ಒಂದೊಂದು ಕಲೆಯು ದಿನವೂ ವೃದ್ಧಿಯಾಗುತ್ತ ಹೋಗುವದು.

ಶಂಭುವು ಹೀಗೆ ಚಂದ್ರಮನಿಗೆ ಹೇಳಿ ಅಂತರ್ಧಾನನಾದನು. ಚಂದ್ರಮನು ಸ್ಥಾಪಿಸಿದ ಲಿಂಗವೇ ಪ್ರಭಾಸಕ್ಷೇತ್ರದ ಸೋಮನಾಥ ಜ್ಯೋತಿರ್ಲಿಂಗವು. ಸೋಮನಾಥೇಶ್ವರನ ಪೂಜನ, ಜಪಗಳಿಂದ ಮನುಷ್ಯನು ಸಮಸ್ತ ರೋಗರಹಿತನಾಗುವನು. ಇಲ್ಲಿಯ ಸೋಮಕುಂಡದಲ್ಲಿ ಸ್ನಾನ ಮಾಡಿದರೆ ಮನುಷ್ಯನು ಪವಿತ್ರನಾಗುವನು.

ಕಾರ್ತಿಕೇಯನು ಪೃಥ್ವಿಯ ಪರಿಕ್ರಮ ಮಾಡಿಬರುವಷ್ಟರಲ್ಲಿ ಗಣೇಶನ ವಿವಾಹವು ನೆರವೇರಿದ್ದರಿಂದ ಅವನು ಕ್ರೌಂಚ ಪರ್ವತಕ್ಕೆ ಹೋದನು. ಆಗ ಪಾರ್ವತಿ–ಪರಮೇಶ್ವರರು ಮಗನಿಗೆ ಕೈಲಾಸಕ್ಕೆ ಬರಬೇಕೆಂದು ಹೇಳಿದರು. ಆದರೆ ಅವನು ಕೈಲಾಸಕ್ಕೆ ಬರಲು ಒಪ್ಪದೆ, ಅಲ್ಲಿಂದ ಹನ್ನೆರಡು ಕ್ರೋಶ ದೂರ ಹೊರಟು ಹೋದನು. ಆಗ ಪಾರ್ವತಿ–ಪರಮೇಶ್ವರರು ಜ್ಯೋತಿರ್ಮಯ ಸ್ವರೂಪ ಧಾರಣ ಮಾಡಿ ಅಲ್ಲಿಯೇ ನೆಲೆಗೊಂಡರು. ಆ ಜ್ಯೋತಿರ್ಲಿಂಗಕ್ಕೆ ಮಲ್ಲಿಕಾರ್ಜುನವೆಂಬ ಹೆಸರು ಬಂದಿತು. 'ಮಲ್ಲಿಕಾ' ಅಂದರೆ ಪಾರ್ವತಿ, 'ಅರ್ಜುನ' ಅಂದರೆ ಪರಮೇಶ್ವರ. ಈ ಲಿಂಗದಲ್ಲಿ ಪಾರ್ವತಿ–ಪರಮೇಶ್ವರರಿಬ್ಬರ ಜ್ಯೋತಿಗಳು ಪ್ರತಿಷ್ಠಿತವಾಗಿವೆ.

ಸೂತಪುರಾಣಿಕ–ಮಹರ್ಷಿಗಳೆ, ಅವಂತಿಯ ಮಹಾಕಾಲೇಶ್ವರ ಜ್ಯೋತಿರ್ಲಿಂಗದ ಚರಿತ್ರೆಯನ್ನು ವಿವರಿಸುವೆನು. ಪ್ರಸಿದ್ಧವಾದ ಅವಂತಿಪುರಿಯಲ್ಲಿ ವೇದಪ್ರಿಯನೆಂಬ ನಿಷ್ಠಾವಂತ ಬ್ರಾಹ್ಮಣನಿದ್ದನು. ಇವನು ನಿತ್ಯವೂ ಪಾರ್ಥಿವ ಲಿಂಗ ಪೂಜೆಯನ್ನು ನೆರವೇರಿಸುತ್ತಿದ್ದನು. ವೇದಶಾಸ್ತ್ರನಿಪುಣನಾದ ಇವನಿಗೆ

ದೇವಪ್ರಿಯ, ಪ್ರಿಯಮೇಧಾ, ಸುಕೃತ, ಸುವ್ರತ ಎಂಬ ನಾಲ್ವರು ಪುತ್ರರಿದ್ದರು. ಇವರು ನಾಲ್ವರೂ ಶಿವಪೂಜಾಪರಾಯಣರಾಗಿದ್ದರು. ಇವರಿಂದ ಅವಂತಿ (ಉಜ್ಜಯನಿ) ನಗರಿಯು ಬ್ರಹ್ಮತೇಜದಿಂದ ಪರಿಪೂರ್ಣವಾಗಿತ್ತು. ಈ ಸಮಯದಲ್ಲಿ ರತ್ನಮಾಲ ಪರ್ವತದಲ್ಲಿ ದೂಷಣನೆಂಬ ಪ್ರಬಲ ರಾಕ್ಷಸನು ವಾಸಿಸುತ್ತಿದ್ದನು. ಈ ಧರ್ಮದ್ವೇಷಿಯಾದ ಅಸುರನು ಬ್ರಹ್ಮದೇವನಿಂದ ವರವನ್ನು ಪಡೆದು ಬ್ರಾಹ್ಮಣರ ಮೇಲೆ ದಾಳಿ ಮಾಡಿದನು. ವೇದಪ್ರಿಯ ಬ್ರಾಹ್ಮಣನೂ ಅವನ ನಾಲ್ವರು ಪುತ್ರರೂ ದೂಷಣಾಸುರನ ದಾಳಿಯನ್ನು ಲಕ್ಷಿಸದೆ ಶಿವಪೂಜೆಯಲ್ಲಿ ನಿರತರಾಗಿದ್ದರು. ರಾಕ್ಷಸನು ಅವರನ್ನು ಕಂಡು ಕುಪಿತನಾಗಿ, ಈ ವಿಪ್ರರನ್ನು ಸಂಹರಿಸಿಬಿಡಿರೆಂದು ತನ್ನ ಸೈನಿಕರಿಗೆ ಆಜ್ಞಾಪಿಸಿದನು. ಸೈನಿಕರು ಶಸ್ತ್ರ ಪಾಣಿಗಳಾಗಿ ಮುನ್ನುಗ್ಗಿದರು. ಕೂಡಲೆ ಭಯಂಕರವಾದ ಸಪ್ಪಳವಾಗಿ ಅಲ್ಲಿ ಒಂದು ಗರ್ತವು ನಿರ್ಮಾಣವಾಯಿತು. ಕೂಡಲೆ ಅಲ್ಲಿಂದ ವಿರಾಟ್ ಸ್ವರೂಪಿಯಾದ ಭಗವಾನ್ ಶಂಕರನು ಪ್ರಕಟನಾದನು. ಶಂಕರನ ಹುಂಕಾರದಿಂದ ದೈತ್ಯರೆಲ್ಲರೂ ಭಸ್ಮವಾದರು! ಅವನು ಆ ಬ್ರಾಹ್ಮಣರಿಗೆ ಆಶೀರ್ವಾದ ಮಾಡಿ, ಅವರ ಅಪೇಕ್ಷೆಯಂತೆ ಅಲ್ಲಿಯೆ ನೆಲೆಗೊಂಡನು. ಈ ಜ್ಯೋತಿರ್ಲಿಂಗಕ್ಕೆ ಮಹಾಕಾಲೇಶ್ವರ ಲಿಂಗವೆಂಬ ಹೆಸರು ಬಂದಿತು.

ಉಜ್ಜಯನಿಯಲ್ಲಿ ಚಂದ್ರಸೇನನೆಂಬ ಶಿವಭಕ್ತ ರಾಜನಿದ್ದನು. ಇವನು ತತ್ವಜ್ಞಾನಿಯೂ ಜಿತೇಂದ್ರಿಯನೂ ಆಗಿದ್ದನು. ಇವನಿಗೆ ಶಿವಪಾರ್ಷದ ಪ್ರಮುಖ ನಾಗಿದ್ದ. ಮಣಿಭದ್ರನು ಮಿತ್ರನಾಗಿದ್ದನು. ಮಣಿಭದ್ರನು ರಾಜನಿಗೆ ಚಿಂತಾಮಣಿ ಎಂಬ ರತ್ನವನ್ನು ಕೊಟ್ಟಿದ್ದನು. ಆ ರತ್ನವು ಸೂರ್ಯನಂತೆ ಪ್ರಕಾಶಮಾನವಾಗಿತ್ತು. ಈ ರತ್ನವನ್ನು ಕಂಡು ಇತರ ರಾಜರಿಗೆ ಅಸೂಯೆಯಾಯಿತು. ಆಗ ಅವರೆಲ್ಲರೂ ಒಟ್ಟಾಗಿ ಚಂದ್ರಸೇನನ ನಗರದ ಮೇಲೆ ದಾಳಿ ಮಾಡಿದರು. ಚಂದ್ರಸೇನನು ಮಹಾಕಾಲೇಶ್ವರನ ಆರಾಧನೆಯಲ್ಲಿ ತೊಡಗಿದ್ದನು.

ಆ ನಗರದಲ್ಲಿ ಒಬ್ಬ ಗವಳಿಗಿತ್ತಿಯಿದ್ದಳು. ಅವಳಿಗೆ ಚಿಕ್ಕವಯಸ್ಸಿನ ಪುತ್ರನಿದ್ದನು. ಅವನು ರಾಜನ ಶಿವಪೂಜಾವಿಧಿಯನ್ನು ಕಂಡು, ತಾನೂ ಅವನಂತೆ ಮಾಡಬೇಕೆಂದು ಒಂದು ಕಲ್ಲನ್ನಿಟ್ಟು ಪತ್ರ–ಪುಷ್ಪ–ಗಂಧಾದಿಗಳಿಂದ ಪೂಜಿಸ ತೊಡಗಿದನು. ಅವನ ತಾಯಿಯು ಅವನನ್ನು ಕರೆದರೂ ತಲ್ಲೀನನಾದ ಅವನು ಸಮಾಧಿ ಹೊಂದಿದವರಂತೆ ಸ್ತಬ್ಧನಾಗಿದ್ದನು. ಆಗ ಬಾಲಕನಾದ ಶ್ರೀಕರನ

ತಾಯಿಯು ಅವನು ಪೂಜಿಸಿದ ಶಿಲೆಯನ್ನು ಕಿತ್ತು ಬಿಸುಟಿದಳು. ಆ ಬಾಲಕನನ್ನು ಚೆನ್ನಾಗಿ ಹೊಡೆದಳು. ಬಾಲಕನು ರೋದಿಸುತ್ತ ಪ್ರಜ್ಞಾಹೀನನಾಗಿ ಬಿದ್ದನು. ಸ್ವಲ್ಪ ವೇಳೆಯಲ್ಲಿ ಅವನು ಚೇತರಿಸಿಕೊಂಡು ಕಣ್ದೆರೆದನು. ಆಗ ಅಲ್ಲಿ ಮಹಾಕಾಲೇಶ್ವರನ ರತ್ನ ಮಯವಾದ ಮಂದಿರವು ಕಂಗೊಳಿಸಿತು. ಶಿವಾಲಯದ ಮಧ್ಯಭಾಗದಲ್ಲಿ ದಯಾಘನ ಶಂಕರನ ರತ್ನಮಯವಾದ ಜ್ಯೋತಿರ್ಲಿಂಗವು ಪ್ರತಿಷ್ಠಿತವಾಗಿತ್ತು. ಇದನ್ನೆಲ್ಲ ನೋಡಿ ಗವಳಿಗಿತ್ತಿಯು ವಿಸ್ಮಿತಳಾದಳು. ಅವಳು ರಾಜನಿಗೆ ಈ ಅದ್ಭುತ ಸಂಗತಿಯನ್ನು ನಿವೇದಿಸಿದಳು. ಚಂದ್ರಸೇನರಾಜನು ವಿಸ್ಮಿತನಾದನು.

ನಗರಕ್ಕೆ ಮುತ್ತಿಗೆ ಹಾಕಿದ ವೈರಿರಾಜನು ಗುಪ್ತಚಾರರಿಂದ ಶಿವ ಮಂದಿರದ ಅದ್ಭುತವಾದ ಸಂಗತಿಯನ್ನು ಕೇಳಿ ಬೆರಗಾದರು. ಚಂದ್ರಸೇನ ರಾಜನು ಪರಮ ಶಿವಭಕ್ತನಿದ್ದುದರಿಂದ ಅವನಿಗೆ ಅಪಾಯ ಮಾಡಹೊರಟರೆ ಶಿವನ ಅವಕೃಪೆಗೆ ಪಾತ್ರರಾಗಿ ತಾವು ನಾಶವಾಗುವೆವೆಂದು ಭಾವಿಸಿದರು. ಅವರು ರಾಜಧಾನಿಯನ್ನು ಪ್ರವೇಶಿಸಿ ಗೋಪಬಾಲಕನಿಗೆ ಕಾಣಿಕೆ ಸಲ್ಲಿಸಿದರು. ಆಗ ಅಲ್ಲಿ ಶ್ರೀರಾಮ ಭಕ್ತನಾದ ತೇಜಸ್ವಿ ಹನುಮಾನನು ಪ್ರಕಟನಾದನು. ಅವನು ಪರಮ ಶಿವಭಕ್ತನಾದ ಗೋಪಬಾಲಕ ಶ್ರೀಕರನನ್ನು ಪ್ರೇಮದಿಂದ ಆಲಿಂಗಿಸಿದನು. 'ಈ ಗೋಪ ಬಾಲಕನ ಎಂಟನೆಯ ತಲೆಗೆ ಇವನು ಮಹಾಯಶಸ್ವಿ ನಂದನನಾಗುವನು' ಎಂದು ಪವಮಾನ ತನಯನು ಹೇಳಿದನು. ಶ್ರೀಕರನು ಆಂಜನೇಯನಿಂದ ಉಪದೇಶ ಹೊಂದಿ, ಮಹಾಕಾಲೇಶ್ವರನ ಸೇವೆ ಮಾಡಲು ಚಂದ್ರಸೇನರಾಜನೂ ಶ್ರೀಕರನೂ ಸಿದ್ಧರಾದರು. ಆಗ ಆಂಜನೇಯನು ಅಂತರ್ಧಾನನಾದನು.

ಸೂತಪುರಾಣಿಕ–ಮಹರ್ಷಿಗಳೆ, ಓಂಕಾರ ತೀರ್ಥದಲ್ಲಿ ಪರಮೇಶನೆಂಬ ಹೆಸರಿನ ಜ್ಯೋತಿರ್ಲಿಂಗವು ಪ್ರಕಟವಾದ ಸಂಗತಿಯನ್ನು ಕೇಳಿರಿ. ದೇವರ್ಷಿ ನಾರದನು ಗೋಕರ್ಣದ ಶಿವಲಿಂಗವನ್ನು ಬಹುಕಾಲದವರೆಗೆ ಪೂಜಿಸಿ, ಗಿರಿರಾಜ ವಿಂಧ್ಯ ಪರ್ವತಕ್ಕೆ ತೆರಳಿದನು. ನಾರದನ ಆಗಮನವನ್ನು ಕಂಡು ವಿಂಧ್ಯನು ಅವನೆದುರಿಗೆ ಸ್ತಬ್ಧನಾಗಿ ನಿಂತುಕೊಂಡನು. ಆಗ ನಾರದನು ನಿಟ್ಟುಸಿರು ಬಿಟ್ಟನು.

ವಿಂಧ್ಯ–ದೇವಋಷಿಯೆ, ನನ್ನಲ್ಲಿ ಯಾವುದರ ಕೊರತೆಯಿರುವದೆಂದು ನೀನು ಉಸಿರ್ಗರೆದೆ ?

ನಾರದ–ಕೊರತೆಯುಂಟೆಂದೇ ಉಸಿರ್ಗರೆದೆನು. ಮೇರುವು ನಿನಗಿಂತ ಉನ್ನತನಾಗಿರುವನು. ಮೇರುವಿನ ಶಿಖರವು ದೇವಲೋಕವನ್ನು ತಲುಪಿದೆ.

ವಿಂಧ್ಯನ ಗರ್ವಭಂಗವಾಗುವಂತೆ ಮಾತಾಡಿದ ನಾರದನು ಮುಂದೆ ಪಯಣ ಮಾಡಿದನು. ಭಗವಾನ್ ಶಂಕರನನ್ನು ಕುರಿತು ತಪಸ್ಸು ಮಾಡಿ ತನ್ನ ಪ್ರತಿಷ್ಠೆಯನ್ನು ಬೆಳೆಯಿಸಿಕೊಳ್ಳಬೇಕೆಂದು ವಿಂಧ್ಯನು ಯೋಚಿಸಿದನು. ಅವನು ಶಿವನ ಪಾರ್ಥಿವಲಿಂಗವನ್ನು ನಿತ್ಯವೂ ಪೂಜಿಸತೊಡಗಿದನು. ಅವನು ಓಂಕಾರ ಜಪವನ್ನು ಪ್ರಾರಂಭಿಸಿದನು. ಅವನ ತಪಸ್ಸಿಗೆ ಶಿವನು ಮೆಚ್ಚಿದನು. ವಿಂಧ್ಯನ ಅಭೀಷ್ಟೆಯಂತೆ 'ಓಂಕಾರೇಶ್ವರ ಹಾಗೂ ಅಮಲೇಶ್ವರ' ಈ ಎರಡು ಜ್ಯೋತಿರ್ಲಿಂಗದ ರೂಪದಿಂದ ಅವನು ಅಲ್ಲಿ ನೆಲೆಗೊಂಡನು. ಎರಡು ಪ್ರತ್ಯೇಕ ಲಿಂಗಗಳಾಗಿದ್ದರೂ, ಈ ಎರಡು ಲಿಂಗಗಳು ಒಂದೇ ಜ್ಯೋತಿರ್ಲಿಂಗವೆಂದು ಭಾವಿಸಲ್ಪಟ್ಟಿವೆ. ಈ ಶಿವಲಿಂಗವನ್ನು ಪೂಜಿಸುವವನಿಗೆ ಪುನರ್ಜನ್ಮವಿಲ್ಲ.

ಒಂದಾನೊಂದು ಕಾಲದಲ್ಲಿ ಬದರಿಕಾಶ್ರಮವಾಸಿಗಳಾದ ನರ ನಾರಾಯಣರು ಪಾರ್ಥಿವ ಲಿಂಗವನ್ನು ರಚಿಸಿ ಪೂಜಿಸತೊಡಗಿದರು. ಭಗವಾನ್ ಶಂಕರನು ಪ್ರತ್ಯಕ್ಷನಾಗಿ ವರವನ್ನು ಬೇಡಬೇಕೆಂದು ಅವರಿಗೆ ತಿಳಿಸಿದನು.

ನರ–ನಾರಾಯಣರು–ಭಗವನ್, ನೀನು ಈ ಕೇದಾರ ಕ್ಷೇತ್ರದಲ್ಲಿ ಲೋಕ ಕಲ್ಯಾಣ ಮಾಡುವ ಉದ್ದೇಶದಿಂದ ಜ್ಯೋತಿರ್ಲಿಂಗವಾಗಿ ಸ್ಥಿರಗೊಳ್ಳಬೇಕು.

ಶಂಭುವು ನರ–ನಾರಾಯಣ ಮಹರ್ಷಿಗಳ ಇಚ್ಛೆಯಂತೆ ಕೇದಾರ ಕ್ಷೇತ್ರದಲ್ಲಿ ಕೇದಾರೇಶ್ವರನೆಂಬ ಹೆಸರಿನಿಂದ ನೆಲೆಗೊಂಡನು. ಕೇದಾರೇಶ್ವರನಿಗೆ ಶಿವರೂಪದಿಂದ ಅಂಕಿತವಾದ ಕಂಕಣವನ್ನು ಅರ್ಪಿಸುವರು. ಬದರಿಕಾಶ್ರಮದಲ್ಲಿ ನರ–ನಾರಾಯಣರ ದರ್ಶನ ಹೊಂದಿ, ಕೇದಾರೇಶ್ವರ ಜ್ಯೋತಿರ್ಲಿಂಗವನ್ನು ಪೂಜಿಸಿದರೆ ಮನುಷ್ಯನ ಪಾತಕಗಳು ಕ್ಷಯವಾಗಿ ಅವನು ಮುಕ್ತನಾಗುವನು. ಕೇದಾರೇಶ್ವರನ ಯಾತ್ರೆಗೆ ಹೊರಟ ಭಕ್ತರು ಮಾರ್ಗದಲ್ಲಿ ಮೃತರಾದರೆ ಅವರು ಮುಕ್ತರಾಗುವರು. ಕೇದಾರೇಶ್ವರನ ಪೂಜೆ ಮಾಡಿ ತೀರ್ಥಪ್ರಾಶನ ಮಾಡಿದವರಿಗೆ ಪುನರ್ಜನ್ಮವಿಲ್ಲ.

ಕೇದಾರೇಶಸ್ಯ ಭಕ್ತಾ ಯೇ ಮಾರ್ಗಸ್ಥಾಸ್ತಸ್ಯ ವೈ ಮೃತಾಃ ।
ತೇಽಪಿ ಮುಕ್ತಾ ಭವಂತ್ಯೇವ ನಾತ್ರ ಕಾರ್ಯಾ ವಿಚಾರಣಾ ॥

(ಶಿ.ಪು.ಕೋ.ರು.ಸಂ. ೧೯–೨೨)

ಮಹರ್ಷಿಗಳೆ, ಪ್ರತಿಯೊಬ್ಬ ಮನುಷ್ಯನು ಭಕ್ತಿಭಾವಗಳಿಂದ ಭಗವಾನ್ ನರ–ನಾರಾಯಣನ ಹಾಗೂ ಕೇದಾರೇಶ್ವರ ಶಂಭುವಿನ ಪೂಜೆಯನ್ನು ಅವಶ್ಯ ವಾಗಿ ಮಾಡಬೇಕು.

ಶೌನಕಾದಿ ಋಷಿಗಳೆ, ಭೀಮಶಂಕರ ಜ್ಯೋತಿರ್ಲಿಂಗ ಮಹಾತ್ಮೆಯನ್ನು ಕೇಳಿರಿ. ಕಾಮರೂಪ ದೇಶದಲ್ಲಿ ಭೀಮನೆಂಬ ಪರಾಕ್ರಮಿಯಾದ ಅಸುರನಿದ್ದನು. ಈ ಬಲಾಢ್ಯ ರಾಕ್ಷಸನು ಕುಂಭಕರ್ಣನ ವೀರ್ಯದಿಂದ ಮತ್ತು ಕರ್ಕಟಿಯ ಗರ್ಭದಿಂದ ಉತ್ಪನ್ನನಾಗಿದ್ದನು. ಕರ್ಕಟಿಯು ವಿರಾಧ ದಾನವನ ಪತ್ನಿಯು. ಶ್ರೀರಾಮನು ವಿರಾಧನನ್ನು ಸಂಹರಿಸಿದನು. ಅವಳ ತಂದೆಯಾದ ಕರ್ಕಟನೂ, ತಾಯಿಯಾದ ಪುಷ್ಕಸಿಯೂ ಅಗಸ್ತ್ಯನ ಶಿಷ್ಯನಾದ ಸುತೀಕ್ಷ್ಣಮುನಿಯ ಶಾಪಾಗ್ನಿಗೆ ದಗ್ಧರಾಗಿದ್ದರು. ವಿಧವೆಯಾದ ಕರ್ಕಟಿಯು ವನದಲ್ಲಿದ್ದಾಗ ಲಂಕೇಶ್ವರ ರಾವಣನ ಅನುಜನಾದ ಕುಂಭಕರ್ಣನು ಅಲ್ಲಿಗೆ ಬಂದನು. ಅವನು ಕರ್ಕಟಿಯಲ್ಲಿ ಮೋಹವುಳ್ಳವನಾಗಿ ಅವಳ ಸಮಾಗಮ ಮಾಡಿದನು. ಕರ್ಕಟಿಯು ಗರ್ಭಿಣಿಯಾಗಿ ಭೀಮನೆಂಬ ರಾಕ್ಷಸನನ್ನು ಪಡೆದಳು. ಭೀಮನು ದೊಡ್ಡವನಾದ ಬಳಿಕ ತನ್ನ ಜನನದ ಸಂಗತಿಯನ್ನು ತಾಯಿಯಿಂದ ತಿಳಿದುಕೊಂಡನು. ಶ್ರೀಹರಿಯಿಂದಲೇ ತನ್ನ ವಂಶವು ಹಾಳಾಯಿತೆಂದು ಬಗೆದು ಅವನನ್ನು ದ್ವೇಷಿಸತೊಡಗಿದನು. ಅವನು ತಪಸ್ಸು ಮಾಡಿ, ತಾನು ಜಗತ್ತಿನಲ್ಲಿ ಅತ್ಯಂತ ಬಲಾಢ್ಯನಾಗಬೇಕೆಂದು ವರವನ್ನು ಪಡೆದನು. ತರುವಾಯ ಅವನು ಸ್ವರ್ಗದ ಮೇಲೆ ದಾಳಿ ಮಾಡಿ ಇಂದ್ರಾದಿದೇವತೆಗಳನ್ನು ಅಲ್ಲಿಂದ ಓಡಿಸಿದನು. ತರುವಾಯ ಅವನು ಕಾಮರೂಪ ದೇಶದ ಮೇಲೆ ದಂಡೆತ್ತಿ ಹೋಗಿ ರಾಜನಾದ ಸುದಕ್ಷಿಣನನ್ನು ಸೋಲಿಸಿ ಅವನನ್ನು ಸೆರೆಯಲ್ಲಿರಿಸಿದನು. ಅವನ ಹೆಂಡತಿಯಾದ ರಾಜವಲ್ಲಭೆ ದಕ್ಷಿಣೆಯು ಪಾರ್ಥಿವಲಿಂಗ ಪೂಜೆಯನ್ನು ಪ್ರಾರಂಭಿಸಿದಳು. ಸುದಕ್ಷಿಣ ರಾಜನು ಸೆರೆಮನೆಯಲ್ಲಿಯೇ ಶಂಭುವಿನ ಮಾನಸಿಕ ಪೂಜೆಯನ್ನು ಮಾಡತೊಡಗಿದನು. ಈ ದಂಪತಿಗಳ ತಪಸ್ಸಿನಿಂದ ಶಂಕರನು ಮೆಚ್ಚಿದನು. ಯಾವಾಗಲೂ ಪಂಚಾಕ್ಷರ ಮಂತ್ರವನ್ನು ಅವನು ಕಾರಾಗೃಹದಲ್ಲಿಯೆ ಜಪಿಸುತ್ತಿದ್ದನು.

ಭೀಮಾಸುರನು ದೇವತೆಗಳಿಗೆ ತೊಂದರೆ ಕೊಡತೊಡಗಿದ್ದನು. ಅವನು ತನ್ನ ಬಾಹುಬಲದ ಅಹಂಕಾರದಿಂದ ಮತ್ತನಾಗಿ ಲೋಕಕ್ಕೆ ಗಂಡಾಂತರಕಾರಿಯಾ ದನು. ಎಲ್ಲರೂ ತಮ್ಮ ಸಂಕಷ್ಟನಿವಾರಣೆಗಾಗಿ ಶಿವನ ಧ್ಯಾನ ಮಾಡತೊಡಗಿದರು.

ಕಾಮರೂಪದ ರಾಜ–ರಾಣಿಯರಾದ ಸುದಕ್ಷಿಣನೂ ದಕ್ಷಿಣಾದೇವಿಯೂ ಶಿವನನ್ನು ಕುರಿತು ತಪಾಚರಣೆ ಮಾಡತೊಡಗಿದ್ದರು. ಆಗ ಮಹಾದೇವನು ಭೀಮಾ ಸುರನನ್ನು ವಧಿಸಿ ಜಗತ್ತನ್ನು ಗಂಡಾಂತರದಿಂದ ಪಾರು ಮಾಡಲು ಅವತರಿಸಿ ಬಂದನು. ಅವನು ಭೀಮಾಸುರನನ್ನು ತ್ರಿಶೂಲದಿಂದ ಕೊಂದು ಹಾಕಿದನು. ಆಗ ಅವನು ಅಲ್ಲಿ ಭೀಮಶಂಕರನೆಂಬ ಹೆಸರಿನ ಜ್ಯೋತಿರ್ಲಿಂಗವಾಗಿ ನೆಲೆಗೊಂಡನು.

ಸೂತಪುರಾಣಿಕ–ಮುನೀಶ್ವರರೆ, ನಾನು ವಾರಣಾಸಿಯ ಹಾಗೂ ವಿಶ್ವೇಶ್ವರನ ಮಹಾತ್ಮೆಯನ್ನು ಸಂಕ್ಷೇಪವಾಗಿ ಹೇಳುವೆನು. ಒಮ್ಮೆ ಪಾರ್ವತಿ ದೇವಿಯ ಆಪೇಕ್ಷೆಯಿಂದ ಅವಿಮುಕ್ತ ಕ್ಷೇತ್ರದ ಹಾಗೂ ಅವಿಮುಕ್ತಲಿಂಗದ ಮಹಾತ್ಮೆಯನ್ನು ವಿಚಾರಿಸಿದಳು.

ಪರಮೇಶ್ವರ–ಉಮೆ, ವಾರಣಾಸಿ ಪುರಿಯು ನನ್ನ ಗುಹ್ಯತಮವಾದ ಹಾಗೂ ಮುಕ್ತಿದಾಯಕವಾದ ಕ್ಷೇತ್ರವಾಗಿದೆ. ಈ ಕ್ಷೇತ್ರದಲ್ಲಿ ಸಿದ್ಧಗಣವು ನನ್ನ ವ್ರತವನ್ನಾಶ್ರಯಿಸಿ ನನ್ನ ಲೋಕವನ್ನು ಹೊಂದುವ ಇಚ್ಛೆಯಿಂದ ಜಿತಾತ್ಮರೂ ಜಿತೇಂದ್ರಿಯರೂ ಆಗಿ ನಿತ್ಯವೂ ಮಹಾಯೋಗದ ಅಭ್ಯಾಸ ಮಾಡುವರು. ಆ ಉತ್ತಮ ಮಹಾಯೋಗದ ಹೆಸರು ಪಾಶುಪತ ಯೋಗವೆಂದಿರುವದು. ಅದು ಶ್ರುತಿಯಿಂದ ಪ್ರತಿಪಾದಿತವಾಗಿದೆ; ಹಾಗೂ ಭೋಗ, ಮೋಕ್ಷ ಪ್ರದಾನ ಮಾಡು ವಂತಹದಿರುವದು. ಮಹೇಶ್ವರಿ, ವಾರಣಾಸಿಪುರದಲ್ಲಿ ವಾಸ ಮಾಡಿಕೊಂಡಿರುವ ಇಚ್ಛೆಯು ನನ್ನದಾಗಿದೆ. ನನ್ನ ಭಕ್ತನೂ, ನನ್ನ ತತ್ವಗಳನ್ನು ಬಲ್ಲವನೂ ಆದ ಮನುಷ್ಯನೂ ಮೋಕ್ಷಭಾಗಿಯಾಗುವನು. ಈ ಕ್ಷೇತ್ರದಲ್ಲಿ ಮೃತಿಹೊಂದಿದ ಎಲ್ಲ ಪ್ರಾಣಿಗಳಿಗೂ ಮುಕ್ತವಾಗುವವು. ಈ ಮಹಾಕ್ಷೇತ್ರವು ಅವಿಮುಕ್ತವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವದು. ಸಮಸ್ತ ತೀರ್ಥಕ್ಷೇತ್ರಗಳ ಸಾರವೇ ಈ ಅವಿಮುಕ್ತ ಕ್ಷೇತ್ರವಾಗಿದೆ. ಪಾರ್ವತಿ, ಕಾಶೀಪುರಿಯಲ್ಲಿ ಶಿವಭಕ್ತರಿಂದ ಅನೇಕ ಶಿವಲಿಂಗಗಳು ಪ್ರತಿಷ್ಠೆಗೊಂಡಿವೆ. ಅವು ಮನುಷ್ಯನ ಅಭೀಷ್ಟೆಯನ್ನು ಈಡೇರಿಸುವಂತಹವೂ, ಮೋಕ್ಷದಾಯಕವೂ ಆಗಿರುವವು. ಇವು ನಾಲ್ಕು ದಿಕ್ಕಿಗೆ ಪಂಚಕ್ರೋಶಗಳವರೆಗೂ ವಿಸ್ತಾರಗೊಂಡಿವೆ. ಈ ಅವಿಮುಕ್ತ ಕ್ಷೇತ್ರದಲ್ಲಿ ಪಾತಕ ಮಾಡುವವನು ಬಹು ಕಾಲದವರೆಗೆ ಭೈರವೀಯಾತನೆ ಹೊಂದುವನು. ಜೀವವು ತಾನು ಮಾಡಿದ ಶುಭಾಶುಭ ಕರ್ಮಗಳ ಫಲವನ್ನು ಅನುಭವಿಸುವದು. ಜಗತ್ತಿನ ಪ್ರಳಯವಾದರೂ ಕಾಶೀಪುರಿಯು ನಾಶವಾಗುವದಿಲ್ಲ. ಆ ಸಮಯದಲ್ಲಿ

ಭಗವಾನ್ ಶಿವನು ಅದನ್ನು ತ್ರಿಶೂಲದ ಮೇಲೆ ಧಾರಣ ಮಾಡಿ ರಕ್ಷಿಸುವನು. ಹೊಸ ಸೃಷ್ಟಿಯಾದಾಗ ಅದನ್ನು ಆ ಮಹಾದೇವನು ಭೂತಲದಲ್ಲಿ ಪ್ರತಿಷ್ಠೆಗೊಳಿಸುವನು. ಕರ್ಮಗಳ ಆಕರ್ಷಣ ಮಾಡುವದರಿಂದ ಇದಕ್ಕೆ ಕಾಶಿಯೆಂಬ ಹೆಸರು ಪ್ರಾಪ್ತವಾಗಿರುವದು.

ಸೂತಪುರಾಣಿಕ ಮಹರ್ಷಿಗಳೆ, ಸದ್ಗುರು ವ್ಯಾಸನು ನನಗೆ ಉಪದೇಶಿಸಿದಂತೆ ನಾನು ಅದೇ ರೂಪದಿಂದ ಪಾಪನಾಶಕ ಕಥೆಯನ್ನು ಹೇಳತೊಡಗಿರುವೆನು. ಪೂರ್ವಕಾಲದ ಸಂಗತಿಯು. ಸುವಿಖ್ಯಾತ ಮಹರ್ಷಿಯಾದ ಗೌತಮನು ತನ್ನ ಧರ್ಮಪತ್ನಿಯಾದ ಅಹಲ್ಯೆಯೊಡನೆ ದಕ್ಷಿಣ ದಿಶೆಯ ಬ್ರಹ್ಮಗಿರಿಯಲ್ಲಿ ವಾಸಿಸುತ್ತಿದ್ದನು. ಅವನು ಬಹು ಕಾಲದವರೆಗೆ ಅಲ್ಲಿ ತಪಶ್ಚರ್ಯ ಮಾಡಿದನು. ಒಮ್ಮೆ ಆ ಪ್ರದೇಶದಲ್ಲಿ ಅವರ್ಷಣವಾಯಿತು. ಎಲ್ಲ ಪ್ರಾಣಿಗಳೂ ಮನುಷ್ಯರೂ ದಿಕ್ಕು ದಿಕ್ಕಿಗೆ ಹೊರಟು ಹೋದರು. ಆಗ ಗೌತಮ ಋಷಿಯು ವೃಷ್ಟಿಗಾಗಿ ವರುಣ ದೇವನನ್ನು ಪ್ರಾರ್ಥಿಸಿದನು. ವರುಣನು ಅವನಿಗೆ ಪ್ರತ್ಯಕ್ಷನಾಗಿ ದೇವತೆಗಳ ವಿಧಾನದ ವಿರುದ್ಧವಾಗಿ ಮಳೆಯನ್ನು ಸುರಿಸಲಾರೆನೆಂದೂ, ನಿನಗಾಗಿ ಅಕ್ಷಯವಾದ ಜಲವನ್ನು ಕೊಡುವೆನೆಂದೂ ವರುಣನು ಗೌತಮನಿಗೆ ಹೇಳಿದನು. ವರುಣನ ಹೇಳಿಕೆಯಂತೆ ಗೌತಮನು ಒಂದು ಗರ್ತವನ್ನು ತೆಗೆದನು. ಕೂಡಲೆ ಅಲ್ಲಿಂದ ಮಹಾಜಲವು ಹೊರಟು ಹರಿಯಲಾರಂಭಿಸಿತು.

ವರುಣ– ಮಹರ್ಷಿ ಗೌತಮ ಮುನಿಯೆ, ಇಲ್ಲಿ ಉಗಮವಾದ ಜಲವು ನಿನ್ನ ಹೆಸರಿನ ನದಿಯಾಗಿ ಸದಾ ಪ್ರವಹಿಸುವದು. ಗೌತಮಿ ನದಿಯು ಪಾವನಕರ ತೀರ್ಥವೆನಿಸುವದು. ಈ ನದಿಯಲ್ಲಿ ಸ್ನಾನ, ದಾನ ಮಾಡಿದವರು ಪುನೀತರಾಗುವರು.

ಮಹಾತ್ಮನಾದ ಗೌತಮನು ವರುಣನನ್ನು ಪ್ರಸನ್ನೀಕರಿಸಿಕೊಂಡು ಜಲ ಪ್ರವಾಹವನ್ನು ನಿರ್ಮಾಣ ಮಾಡಿದ್ದನ್ನು ಅಲ್ಲಿಯ ಕೆಲವು ಬ್ರಾಹ್ಮಣರು ಸಹಿಸಲಿಲ್ಲ. ಅವರು ಮತ್ಸರದಿಂದ ಒಂದು ಬಡಕಲು ಗೋವನ್ನು ನಿರ್ಮಾಣ ಮಾಡಿ ಗೌತಮನ ತಪೋವನಕ್ಕೆ ಕಳುಹಿಸಿದರು. ಗೌತಮನು ಅದನ್ನು ಓಡಿಸಬೇಕೆಂದು ಹುಲ್ಲಿನಿಂದ ಹೊಡೆದನು. ಅದೇ ನೆವದಿಂದ ಗೋವು ಕೆಳಗೆ ಬಿದ್ದು ಸತ್ತುಹೋಯಿತು. ಎಲ್ಲ ಋಷಿಗಳೂ ಗೌತಮನು ಗೋಹತ್ಯೆ ಮಾಡಿದನೆಂದು ಪ್ರಚಾರ ಮಾಡಿದರು. ಈ

ದುಷ್ಕೃತ್ಯಕ್ಕೆ ಪ್ರಾಯಶ್ಚಿತ್ತರೂಪವಾಗಿ ಬ್ರಹ್ಮಗಿರಿಯ ಪ್ರದಕ್ಷಿಣೆಯನ್ನು ನಿತ್ಯವೂ ಮಾಡಬೇಕೆಂದು ಹೇಳಿದರು. ಮಹಾತ್ಮನಾದ ಗೌತಮನಿಗೆ ಬ್ರಾಹ್ಮಣರ ಕಪಟವು ತಿಳಿಯಿತು. ಅವನು ಅಹಲ್ಯೆಯೊಡನೆ ದೂರ ಹೋಗಿ ವಾಸಿಸಿದನು. ಅವನು ನಿತ್ಯವೂ ಪಾರ್ಥಿವಲಿಂಗ ಪೂಜನೆ ಮಾಡಹತ್ತಿದನು. ಬ್ರಹ್ಮಗಿರಿಯ ಪರಿಕ್ರಮ ಕಾರ್ಯವೂ ನಡೆಯಿತು. ಗೌತಮ ಋಷಿಯ ತಪಕ್ಕೆ ಮೆಚ್ಚಿದ ಶಿವನು ಅವನಿಗೆ ಪ್ರತ್ಯಕ್ಷನಾದನು.

ಶಿವ–ಬ್ರಾಹ್ಮಣಾಧಮರು ನಿನ್ನ ಶ್ರೇಯಕ್ಕೆ ಸಹಿಸದೆ ದುರಾಚರಣೆ ಮಾಡಿದರು. ಅವರು ಪಾಪಿಗಳು. ಇಂತಹ ವೃತ್ತಿಯ ಬ್ರಾಹ್ಮಣರು ನಿರಂತರವಾಗಿ ದುಃಖವನ್ನನುಭವಿಸುವರು.

ಗೌತಮ–ಮಹೇಶ್ವರಾ, ಬ್ರಾಹ್ಮಣರು ನನಗೆ ಉಪಕಾರ ಮಾಡಿದರು. ಅವರು ಹಾಗೆ ಮಾಡದೆ ಹೋಗಿದ್ದರೆ ನಿನ್ನ ದರ್ಶನವಾಗುತ್ತಿದ್ದಿಲ್ಲ.

ಶಿವ–ನಿನ್ನ ತಪಸ್ಸಿಗೆ ನಾನು ಸಂತುಷ್ಟನಾಗಿರುವೆನು. ಗೌತಮ ಮುನಿಯೆ, ನೀನು ಬೇಕಾದ ವರಗಳನ್ನು ಕೇಳಿಕೋ.

ಗೌತಮ–ಮಹಾದೇವಾ, ಗೌತಮಿ ನದಿಯಲ್ಲಿ ಪಾವನೆಯಾದ ಗಂಗೆಯು ಪ್ರವಹಿಸುವಂತೆ ಕೃಪೆ ಮಾಡು. ನಾನು ಇದೇ ಸ್ಥಳದಲ್ಲಿ ನಿನ್ನ ಪಾರ್ಥಿವ ಪೂಜೆ ಮಾಡಿರುವೆನು. ನೀನು ಜ್ಯೋತಿರ್ಲಿಂಗರೂಪದಿಂದ ಇಲ್ಲಿ ನೆಲೆಗೊಳ್ಳಬೇಕು.

ಗೌತಮ ಮುನಿಯ ಪ್ರಾರ್ಥನೆಯಂತೆ ಶಂಭುವು ಗೌತಮಿ (ಗೋದಾವರಿ) ತಟಾಕದಲ್ಲಿ ತ್ರ್ಯಂಬಕೇಶ್ವರನೆಂಬ ಹೆಸರಿನಿಂದ ನೆಲೆಗೊಂಡನು. ತ್ರ್ಯಂಬಕೇಶ್ವರನು ಭಕ್ತರ ಪಾಪಕ್ಷಾಲನೆ ಮಾಡುತ್ತಿರುವನು. ಗೌತಮಿ ನದಿಯು ಮಾನವನನ್ನು ಪವಿತ್ರಗೊಳಿಸುತ್ತಿರುವದು.

ಸೂತಪುರಾಣಿಕ–ಶೌನಕಾದಿ ಮಹರ್ಷಿಗಳೆ, ಚಿತಾಭೂಮಿಯಲ್ಲಿ ನೆಲೆಗೊಂಡ ವೈದ್ಯನಾಥ ಜ್ಯೋತಿರ್ಲಿಂಗದ ಪ್ರಾಕಟ್ಯದ ಕಥೆಯನ್ನು ಹೇಳುವೆನು, ಕೇಳಿರಿ. ಲಂಕಾಧಿಪತಿಯಾದ ರಾವಣನು ಅಹಂಕಾರಿಯಾಗಿದ್ದನು. ಅವನು ಶಿವನನ್ನು ಒಲಿಸಿಕೊಳ್ಳಬೇಕೆಂದು ಕೈಲಾಸಕ್ಕೆ ಹೋಗಿ ಶಿವನನ್ನುದ್ದೇಶಿಸಿ ತಪಸ್ಸು ಮಾಡಿದನು. ಅವನು ದೊಡ್ಡ ಗರ್ತವನ್ನು ಮಾಡಿ ಅಗ್ನಿಯನ್ನು ಸ್ಥಾಪಿಸಿ ಹವನ

ಮಾಡತೊಡಗಿದನು. ಗ್ರೀಷ್ಮ ಋತುವಿನಲ್ಲಿ ಅವನು ಪಂಚಾಗ್ನಿಯ ಮಧ್ಯದಲ್ಲಿ ಕುಳಿತುಕೊಂಡು ತಪಸ್ಸು ಮಾಡುತ್ತಿದ್ದನು. ವರ್ಷಾ ಋತುವಿನಲ್ಲಿ ಕಟ್ಟೆಯಮೇಲೆ ವಾಸ್ತವ್ಯ ಮಾಡುತ್ತಿದ್ದನು. ಶೀತಕಾಲದಲ್ಲಿ ನೀರಲ್ಲಿ ನಿಲ್ಲುತ್ತಿದ್ದನು. ಇಷ್ಟಾದರೂ ಶಿವನು ಅವನಿಗೆ ದರ್ಶನ ಕೊಡಲಿಲ್ಲ. ಆಗ ದಶಕಂಧರನು ತನ್ನ ಒಂದೊಂದೇ ಶಿರಸ್ಸನ್ನು ಅಗ್ನಿಯಲ್ಲಿ ಹವನ ಮಾಡುತ್ತ ಘೋರ ತಪಶ್ಚರ್ಯ ಮಾಡತೊಡಗಿದನು. ಆಗ ಭಕ್ತವತ್ಸಲನಾದ ಭಗವಾನ್ ಶಂಕರನು ಸಂತುಷ್ಟನಾಗಿ ದರ್ಶನ ಕೊಟ್ಟು ಅವನನ್ನು ನಿರೋಗಿಯನ್ನಾಗಿ ಮಾಡಿ, ಬಲಾಢ್ಯನಾಗುವಂತೆ ವರಪ್ರದಾನ ಮಾಡಿದನು.

ರಾವಣ– ಶಂಭುವೆ, ನೀನು ನಿನ್ನ ಆತ್ಮಲಿಂಗವನ್ನು ದಯಪಾಲಿಸು, ಅದನ್ನು ನಾನು ಲಂಕೆಗೆ ಒಯ್ಯುವೆನು.

ಶಿವನು ರಾವಣನಿಗೆ ತನ್ನ ಆತ್ಮಲಿಂಗವನ್ನು ಕೊಟ್ಟು, ಭೂಮಿಯ ಮೇಲೆ ಇಡಕೂಡದೆಂದು ಹೇಳಿ ಅಂತರ್ಧಾನನಾದನು. ರಾವಣನು ಲಿಂಗವನ್ನು ತೆಗೆದುಕೊಂಡು ಲಂಕೆಗೆ ತೆರಳಿದನು. ಆಗ ಅವನಿಗೆ ದಾರಿಯಲ್ಲಿ ಮೂತ್ರ ಬಾಧೆಯಾಯಿತು. ಆಗ ಅವನು ಅಲ್ಲಿಯೇ ಇದ್ದ ಗೋಪಾಲಕನನ್ನು ಕರೆದು ಅವನ ಕೈಯಲ್ಲಿ ಲಿಂಗವನ್ನು ಕೊಟ್ಟು ಹೋದನು. ಆ ಲಿಂಗವು ಬಹಳೇ ಭಾರವಿದ್ದುದ ರಿಂದ ಅವನು ಅದನ್ನು ಭೂಮಿಗೆ ಇಟ್ಟನು. ಕೂಡಲೆ ಅದು ಅಲ್ಲಿಯೆ ಸ್ಥಿರವಾಗಿ ನೆಲೆಸಿತು. ಆ ಲಿಂಗವೇ ವೈದ್ಯನಾಥೇಶ್ವರ ಜ್ಯೋತಿರ್ಲಿಂಗವೆಂಬ ಹೆಸರಿನಿಂದ ಪ್ರಸಿದ್ಧವಾಯಿತು.

ಸೂತಪುರಾಣಿಕ– ಋಷಿಶ್ರೇಷ್ಠರೆ, ನಿಮಗೆ ನಾಗೇಶ್ವರ ಜ್ಯೋತಿರ್ಲಿಂಗದ ಆವಿರ್ಭಾವದ ಪ್ರಸಂಗವನ್ನು ತಿಳಿಸುವೆನು. ದಾರುಕೆಯೆಂಬ ರಾಕ್ಷಸಿಯು ದಾರುಕಾ ವನದಲ್ಲಿ ವಾಸಿಸಿದ್ದಳು. ಅವಳು ಪಾರ್ವತೀ ದೇವಿಯಿಂದ ವರವನ್ನು ಪಡೆದು ಬಲಾಢ್ಯಳಾಗಿದ್ದಳು. ಅವಳ ಪತಿಯು ದಾರುಕನೆಂಬುವನಿದ್ದನು. ಇವರಿಬ್ಬರೂ ತಮ್ಮ ಅನುಯಾಯಿಗಳನ್ನು ಕೂಡಿಕೊಂಡು ಸಜ್ಜನರಿಗೆ ಉಪದ್ರವ ಕೊಡುತ್ತಿದ್ದರು. ದಾರುಕಾಸುರನು ಆ ವನದಲ್ಲಿ ವಾಸಿಸಿದ್ದರಿಂದಲೇ ಆ ವನ ದಾರುಕಾ ವನವೆಂದು ಪ್ರಸಿದ್ಧವಾಗಿತ್ತು. ಅದು ಪಶ್ಚಿಮ ಸಮುದ್ರ ಬಳಿಯಲ್ಲಿತ್ತು. ದಾರುಕ–ದಾರುಕಿಯರ ಪೀಡೆಯು ಹೆಚ್ಚಾಗತೊಡಗಿತು. ಆಗ ಕೆಲವು ಋಷಿ–ಮಹರ್ಷಿಗಳು ಓರ್ವ ಋಷಿಗೆ ಶರಣಾಗತರಾಗಿ ತಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು. ಇನ್ನು ಮೇಲೆ

ದಾರುಕನು ಯಜ್ಞಗಳನ್ನಾಗಲಿ, ಋಷಿಗಳನ್ನಾಗಲಿ ನಾಶ ಮಾಡಿದರೆ ಅವನಿಗೆ ತಕ್ಷಣದಲ್ಲಿ ಮೃತ್ಯುವೊದಗುವದೆಂದು ಓರ್ವ ಋಷಿಯು ಶಾಪವನ್ನು ಕೊಟ್ಟನು. ಆಗ ದಾರುಕಿಯು ದಾರುಕ ವನವನ್ನು ಸಮುದ್ರದಲ್ಲಿ ಸಾಗಿಸಿ ಅಲ್ಲಿ ಎಲ್ಲರಾಕ್ಷಸರೊಡನೆ ವಾಸ ಮಾಡಿದಳು.

ರಾಕ್ಷಸರು ಸಮುದ್ರದಲ್ಲಿಯ ಜೀವಿಗಳಿಗೂ ಮನುಷ್ಯರಿಗೂ ತೊಂದರೆ ಕೊಡತೊಡಗಿದರು. ಪಶ್ಚಿಮ ಸಮುದ್ರದಲ್ಲಿ ಸುಯಶನೆಂಬ ವೈಶ್ಯನು ತನ್ನ ವ್ಯಾಪಾರದ ಅನೇಕ ನಾವೆಗಳನ್ನು ತೆಗೆದುಕೊಂಡು ತನ್ನ ಜನರೊಡನೆ ಹೊರಟಿದ್ದನು. ಆಗ ರಾಕ್ಷಸರು ನೌಕೆಯಲ್ಲಿ ಕುಳಿತವರೆಲ್ಲರನ್ನೂ ಬಂಧಿಸಿ ಕಾರಾಗೃಹದಲ್ಲಿ ಹಾಕಿದರು. ಸುಯಶನೂ ಅವನ ಅನುಯಾಯಿಗಳೂ ಪರಮ ಶಿವಭಕ್ತರಾಗಿದ್ದರು. ಅವರೆಲ್ಲರೂ ಪಾರ್ಥಿವ ಲಿಂಗ ಪೂಜೆಯಲ್ಲಿ ನಿರತರಾಗಿ, ಪಂಚಾಕ್ಷರ ಮಂತ್ರ ಜಪಾನುಷ್ಠಾನದಲ್ಲಿ ಮಗ್ನರಾಗಿರುತ್ತಿದ್ದರು. ಕೆಲ ದಿನಗಳಲ್ಲಿಯೆ ಅಲ್ಲಿಯ ವಿವರದಿಂದ ಭಗವಾನ್ ಶಂಕರನು ಧನುರ್ಬಾಣಗಳಿಂದ ಸಿದ್ಧನಾಗಿ ಹೊರಗೆ ಬಂದನು. ಕೂಡಲೆ ಅಲ್ಲಿ ಒಂದು ಭವ್ಯವಾದ ಶಿವಾಲಯವು ಪ್ರಕಟವಾಯಿತು. ಶಿವನು ಪಾಶುಪತಾಸ್ತ್ರದಿಂದ ಎಲ್ಲ ದೈತ್ಯರನ್ನು ಸಂಹರಿಸಿ ಸುಯಶ ವೈಶ್ಯನನ್ನೂ ಮುನಿಗಳನ್ನೂ ರಕ್ಷಿಸಿದನು. ಅಲ್ಲಿ ಪ್ರಾದುರ್ಭವಿಸಿದ ಶಿವಲಿಂಗಕ್ಕೆ ನಾಗೇಶ್ವರ ಜ್ಯೋತಿರ್ಲಿಂಗವೆಂಬ ಹೆಸರು ಪ್ರಾಪ್ತವಾಯಿತು. ಶಿವಾದೇವಿಯು ಅಲ್ಲಿ ನಾಗೇಶ್ವರಿ ಎಂಬ ಹೆಸರಿನಿಂದ ನೆಲೆಗೊಂಡಳು. ನಾಗೇಶ್ವರನ ದರ್ಶನದಿಂದ ಎಲ್ಲ ಮಾನವರು ಪುನೀತರಾಗುವರು.

ಸೂತಪುರಾಣಿಕ–ಶೌನಕ ಮಹರ್ಷಿಯೆ, ಮುನಿಗಳೆ, ರಾಮೇಶ್ವರ ಜ್ಯೋತಿರ್ಲಿಂಗವು ಪ್ರಕಟವಾದ ಪ್ರಸಂಗವನ್ನು ಭಕ್ತ್ಯಾದರಗಳಿಂದ ಕೇಳಿರಿ. ಭಗವಾನ್ ವಿಷ್ಣುವು ರಾಮಾವತಾರ ತಾಳಿದನು. ಅವನು ಪಿತ್ರಾಜ್ಞೆಯಂತೆ ವನವಾಸವನ್ನು ಕೈಕೊಂಡು ಪಂಚವಟಿಯಲ್ಲಿ ವಾಸಮಾಡಿಕೊಂಡಿರುವಾಗ ಲಂಕಾಧಿಪತಿ ರಾವಣನು ರಾಮ–ಲಕ್ಷ್ಮಣರಿಲ್ಲದ ಸಮಯದಲ್ಲಿ ಭಗವತಿ ಸೀತಾದೇವಿಯನ್ನು ಅಪಹರಿಸಿಕೊಂಡು ಲಂಕೆಗೆ ಒಯ್ದು ಅಶೋಕವನದಲ್ಲಿಟ್ಟನು. ರಾಮನು ವಾನರಾಧಿಪತಿಯಾದ ಸುಗ್ರೀವನ ಸ್ನೇಹಸಂಪಾದನೆ ಮಾಡಿ, ಹದಿನೆಂಟು ಪದ್ಮ ವಾನರ ಸೈನ್ಯದೊಡನೆ ದಕ್ಷಿಣ ಸಮುದ್ರಕ್ಕೆ ಬಂದನು. ಅಲ್ಲಿ ಅವನು ಭಗವಾನ್ ಶಂಕರನ ಪಾರ್ಥಿವಲಿಂಗವನ್ನು ನಿರ್ಮಿಸಿ ಪೂಜಿಸಿದನು. ಆಗ

ಶಿವನು ಅವನಿಗೆ ಪ್ರತ್ಯಕ್ಷನಾದನು. ಅವನು ಶಿವಧರ್ಮಪರಾಯಣನಾದ ಶ್ರೀರಾಮನಿಗೆ ವಿಜಯಶಾಲಿಯಾಗುವಂತೆ ವರಪ್ರದಾನ ಮಾಡಿದನು. ದಾಶರಥಿ ರಾಮನು ಸೇತುಬಂಧನ ಪೂರ್ವದಲ್ಲಿ ಪೂಜಿಸಿದ ಲಿಂಗವೇ ರಾಮೇಶ್ವರ ಜ್ಯೋತಿರ್ಲಿಂಗವಾಗಿದೆ. ಈ ಶಿವಲಿಂಗದ ದರ್ಶನ, ಪೂಜೆ, ಜಪಾದಿಗಳಿಂದ ಮನುಷ್ಯನ ಸಮಸ್ತ ಪಾಪಗಳು ನಾಶವಾಗುವವು.

ಸೂತಪುರಾಣಿಕ– ವಿಪ್ರೋತ್ತಮರೆ, ಈಗ ಘುಶ್ಮೇಶ್ವರ ಜ್ಯೋತಿರ್ಲಿಂಗವು ಪ್ರಾದುರ್ಭವಿಸಿದ ಸಂಗತಿಯನ್ನು ವಿವರಿಸುವೆನು. ದಕ್ಷಿಣದಿಶೆಯಲ್ಲಿ ದೇವಗಿರಿಯೆಂಬ ಪರ್ವತವುಂಟು. ಅಲ್ಲಿ ಭರದ್ವಾಜಗೋತ್ರದ ಸುಧರ್ಮನೆಂಬ ಬ್ರಾಹ್ಮಣನು ಇದ್ದನು. ಸುದೇಹೆಯೆಂಬವಳು ಅವನ ಧರ್ಮಪತ್ನಿಯು. ಈ ದಂಪತಿಗಳಿಗೆ ಸಂತಾನವಿರಲಿಲ್ಲ. ಆದುದರಿಂದ ಸುದೇಹೆಯು ತನ್ನ ಭಗಿನಿಯಾದ ಘುಶ್ಮೆಯನ್ನು ವಿವಾಹವಾಗಲು ಪತಿಯನ್ನು ಒತ್ತಾಯಿಸಿದಳು. ಪತ್ನಿಯ ಆಗ್ರಹಕ್ಕಾಗಿ ಅವನು ಘುಶ್ಮೆಯನ್ನು ವರಿಸಿದನು. ಅವಳು ಒಬ್ಬ ಪುತ್ರನನ್ನು ಪಡೆದಳು. ಆ ಪುತ್ರನು ಪ್ರಬುದ್ಧನಾದನು. ಅವನ ವಿವಾಹವೂ ಆಯಿತು. ಆದರೆ ಸುದೇಹೆಯ ಮನಸ್ಥಿತಿಯು ವಿಪರ್ಯಾಸಗೊಂಡಿತು. ಅವಳು ತನ್ನ ಭಗನಿಯನ್ನೂ, ಅವಳ ಪುತ್ರನನ್ನೂ, ಸೊಸೆಯನ್ನೂ ದ್ವೇಷಿಸಹತ್ತಿದಳು. ಘುಶ್ಮೆಯು ಶಿವಪೂಜಾ ಪರಾಯಣಳು. ನಿತ್ಯವೂ ಒಂದುನೂರಾ ಒಂದು ಪಾರ್ಥಿವಲಿಂಗದ ಪೂಜೆ ಮಾಡುತ್ತಿದ್ದಳು. ಶಿವನಾಮ ಜಪ ಮಾಡುತ್ತಿದ್ದಳು.

ಒಂದು ದಿನ ರಾತ್ರಿಯಲ್ಲಿ ಸುದೇಹೆಯು ಘುಶ್ಮೆಯ ಪುತ್ರನನ್ನು ಕಡಿದು ಚೂರು ಚೂರು ಮಾಡಿ ಅಲ್ಲಿಯೇ ಇದ್ದ ಒಂದು ಪುಷ್ಕರಣಿಯಲ್ಲಿ ಚೆಲ್ಲಿದಳು. ಈ ಸಂಗತಿಯು ಘುಶ್ಮೆಗೆ ಬೆಳಗಾದ ಬಳಿಕ ತಿಳಿಯಿತು. ಅವಳು ದುಃಖಿತಳಾಗದೆ, ಶಿವನು ಕೊಟ್ಟಿದ್ದನು, ಅವನೇ ಕರೆದೊಯ್ದನು ಎಂದು ನುಡಿದು ಪಾರ್ಥಿವಲಿಂಗ ಪೂಜೆಯಲ್ಲಿ ಮಗ್ನಳಾದಳು.

ಮಧ್ಯಾಹ್ನವಾದ ಬಳಿಕ ಘುಶ್ಮೆಯ ಶಿವಪೂಜೆಯೂ ಪಂಚಾಕ್ಷರ ಜಪವು ಮುಗಿದವು. ಆಗ ಅವಳು ಒಳಗೆ ಬಂದು ಮಗನ ಹಾಸುಗೆಯು ರಕ್ತಮಯವಾದುದನ್ನು ಕಂಡಳು. ಸೊಸೆಯ ರೋದನವೂ ಕೇಳಿತು. ಪತಿಯು ಅತ್ಯಂತ ದುಃಖಿತನಾಗಿ ಪ್ರಲಾಪಿಸುತ್ತಿದ್ದನು. ತರುವಾಯ ಅವಳು ಯಾವ ಮಾತುಗಳನ್ನಾಡದೆ

ಪುಷ್ಕರಣಿಗೆ ಹೋದಳು. ಅವಳು ಪಾರ್ಥಿವಲಿಂಗಗಳನ್ನು ಪುಷ್ಕರಣಿಯಲ್ಲಿ ಹಾಕಿದಳು. ಆ ಜಲಾಶಯದ ತಟದಲ್ಲಿ ಪುತ್ರನು ನಿಂತುಕೊಂಡಿದ್ದನ್ನು ಕಂಡಳು. ತತ್‌ಕ್ಷಣವೇ ಭಗವಾನ್ ಶಂಕರನು ಘುಶ್ಮೆಯ ಸಮ್ಮುಖದಲ್ಲಿ ದರ್ಶನಕೊಟ್ಟನು.

ಮಹೇಶ್ವರ–ಘುಶ್ಮೇ, ನಿನ್ನ ಸವತಿಯು ಮಹಾದುಷ್ಟೆಯು. ಅವಳನ್ನು ತ್ರಿಶೂಲದಿಂದ ಸಂಹರಿಸುವೆನು.

ಘಶ್ಮೆ–ಮಹಾದೇವಾ, ಅವಳು ನನ್ನ ಭಗಿನಿಯು. ನೀನು ನಮ್ಮೆಲ್ಲರಿಗೂ ದರ್ಶನ ಕೊಟ್ಟು ಪುನೀತರನ್ನಾಗಿ ಮಾಡಿರುವೆ. ಅವಳನ್ನು ನೀನು ಕ್ಷಮಿಸಬೇಕು.

ಶಂಕರನು ಸಂತುಷ್ಟನಾದನು. ಆಗ ಅವನು ವರವನ್ನು ಬೇಡುವ ಬಗ್ಗೆ ಘುಶ್ಮೆಗೆ ಹೇಳಿದನು. ಈ ಸರೋವರವು ಶಿವಾಲಯವಾಗಬೇಕೆಂದೂ, ಶಿವ ಮಂದಿರದಲ್ಲಿ ನೀನು ಘುಶ್ಮೇಶ್ವರ ಜ್ಯೋತಿರ್ಲಿಂಗವಾಗಿ ಪಾಪಿಗಳನ್ನುದ್ಧರಿಸ ಬೇಕೆಂದೂ ಬೇಡಿಕೊಂಡಳು. ಶಂಭುವು ಜ್ಯೋತಿರ್ಲಿಂಗವಾದನು. ಸರೋವರವು ಶಿವಾಲಯವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಘುಶ್ಮೇಶ್ವರ ಜ್ಯೋತಿರ್ಲಿಂಗದ ಪೂಜಾದಿಗಳನ್ನು ನೆರವೇರಿಸುತ್ತ ಭಕ್ತಜನರು ಪುನೀತರಾಗತೊಡಗಿದರು.

ದ್ವಾದಶ ಜ್ಯೋತಿರ್ಲಿಂಗ ಮಹಾತ್ಮೆ ಸಮಾಪ್ತಿ.

## ಸುದರ್ಶನ ಪ್ರಾಪ್ತಿ

ಸೂತಪುರಾಣಿಕ–ಒಂದಾನೊಂದು ಸಮಯದಲ್ಲಿ ದೈತ್ಯರು ಮಹಾ ಪ್ರಬಲರಾಗಿ ದೇವತೆಗಳನ್ನು ಪೀಡಿಸಹತ್ತಿದರು. ಧರ್ಮವು ನಾಶವಾಗತೊಡಗಿತು, ದೇವತೆಗಳು ವೈಕುಂಠಕ್ಕೆ ಹೋಗಿ ಶ್ರೀವಿಷ್ಣುವಿನ ಮೊರೆಹೊಕ್ಕರು. ಆಗ ವಿಷ್ಣುವು ಕೈಲಾಸಕ್ಕೆ ಹೋಗಿ ಭಗವಾನ್ ಮಹಾದೇವನನ್ನು ಪೂಜಿಸತೊಡಗಿದನು. ಅವನು ಪೂಜಿಸಿದ ಪಾರ್ಥಿವ ಲಿಂಗಕ್ಕೆ ಹರೀಶ್ವರನೆಂದು ಹೆಸರಾಗಿದೆ. ವಿಷ್ಣುವು ಸಹಸ್ರ ಕಮಲಗಳನ್ನು ತೆಗೆದುಕೊಂಡು ಹೋಗಿ ಹರೀಶ್ವರ ಲಿಂಗಪೂಜೆ ಮಾಡತೊಡಗಿ ದನು. ಪರಶಿವನ ನಾಮಸಂಕೀರ್ತನೆ ಮಾಡುತ್ತ ಒಂದೊಂದು ಹೆಸರಿಗೆ ಒಂದೊಂದು ಪುಷ್ಪವನ್ನು ಹರೀಶ್ವರನ ಪಾರ್ಥಿವಲಿಂಗಕ್ಕೆ ಅರ್ಪಿಸ ತೊಡಗಿದನು. ಶಿವನು ಸಹಸ್ರ ಕಮಲಗಳೊಳಗಿನ ಒಂದು ಕಮಲವನ್ನು ಬುದ್ಧಿ ಪೂರ್ವಕವಾಗಿ

ಬಚ್ಚಿಟ್ಟನು. ಒಂದು ಕಮಲವು ಕಡಿಮೆಯಾಗಲು ಶ್ರೀಹರಿಯು ಅದನ್ನು ದೊರಕಿಸಲು ಎಲ್ಲ ಕಡೆಗೂ ತಿರುಗಾಡಿ ನೋಡಿದನು. ಅವನಿಗೆ ಕಮಲವು ದೊರೆಯಲಿಲ್ಲ, ಆದುದರಿಂದ ಶ್ರೀಹರಿಯು ಆ ಕಮಲಕ್ಕೆ ಬದಲಾಗಿ ತನ್ನ ನೇತ್ರ ಕಮಲವನ್ನು ಶಿವನಿಗೆ ಅರ್ಪಿಸಿದನು. ವಿಷ್ಣುವಿನ ಈ ಶಿವಭಕ್ತಿಯನ್ನು ಕಂಡು ಅವನು ಸಂತುಷ್ಟನಾಗಿ ವಿಷ್ಣುವಿಗೆ ಸಾಕ್ಷಾತ್ಕಾರವಾದನು. ಆಗ ವಿಷ್ಣುವು ದೇವತೆಗಳಿಗೆ ಒದಗಿದ ಆಪತ್ತನ್ನು ಅರಿಕೆ ಮಾಡಿಕೊಂಡನು. ಪ್ರಬಲವಾದ ಅಸ್ತ್ರವಿಲ್ಲದೆ ದೈತ್ಯರೊಡನೆ ಕಾದಿ ಜಯ ಹೊಂದುವದು ಅಶಕ್ಯವೆಂದು ಅವನು ಮಹಾದೇವನಿಗೆ ತಿಳಿಸಿದನು. ಆಗ ಮೃಡನು ತನ್ನಲ್ಲಿದ್ದ ಸುದರ್ಶನಚಕ್ರವನ್ನು ದೈತ್ಯರ ನಾಶಕ್ಕಾಗಿ ಉಪಯೋಗಿಸಬೇಕೆಂದು ಹೇಳಿ ಆ ಚಕ್ರವನ್ನು ವಿಷ್ಣುವಿನ ಕೈಯಲ್ಲಿ ಕೊಟ್ಟನು. ಈ ಚಕ್ರವು ಅತ್ಯಂತ ಸಮರ್ಥವಿರುವದೆಂದು ಅವನು ಶ್ರೀಹರಿಗೆ ತಿಳಿಸಿದನು. ಶ್ರೀಹರಿಯು ಚಕ್ರವನ್ನು ಕೈಯಲ್ಲಿ ತೆಗೆದುಕೊಂಡು ಅವನಿಗೆ ವಂದಿಸಿದನು. ವಿಷ್ಣುವು ಪೂಜಿಸಿದ ಲಿಂಗಕ್ಕೆ ಹರೀಶ್ವರ ಲಿಂಗವೆನ್ನುವರು.

ಶ್ರೀಹರಿಯು ಪಠಿಸಿದ ಶಿವಸಹಸ್ರ ನಾಮಗಳನ್ನು ತಿಳಿಸಬೇಕೆಂದು ಶೌನಕ ಮೊದಲಾದ ಋಷಿಗಳು ವಿನಂತಿ ಮಾಡಿಕೊಂಡ ಬಳಿಕ ಸೂತಪುರಾಣಿಕನು ಶಿವಸಹಸ್ರ ನಾಮಗಳನ್ನು ಪಠಿಸತೊಡಗಿದನು.

ವಿಷ್ಣುರುವಾಚ–

**ಶಿವೋ ಹರೋ ಮೃಡೋ ರುದ್ರಃ ಪುಷ್ಕರಃ ಪುಷ್ಪಲೋಚನಃ ।**

**ಅರ್ಥಿಗಮ್ಯಃ ಸದಾಚಾರಃ ಶರ್ವಃ ಶಂಭುರ್ಮಹೇಶ್ವರಃ ॥**

ಭಗವಾನ್ ವಿಷ್ಣುವು ಶಿವನನ್ನು ಅನಂತರೀತಿಯಿಂದ ಸ್ತುತಿಸಹತ್ತಿದನು. ಅವನು ಶಿವಸಹಸ್ರ ನಾಮಾವಳಿಗಳನ್ನು ಉಚ್ಚರಿಸುತ್ತ ಪಾರ್ಥಿವಲಿಂಗ ಪೂಜೆಯನ್ನು ಮಾಡತೊಡಗಿದನು.

ಭಗವಾನ್ ಶಿವನು ಶ್ರೀಹರಿಯ ಸ್ತೋತ್ರಕ್ಕೆ ಮೆಚ್ಚಿ ಅವನಿಗೆ ಆಶೀರ್ವದಿಸಿ ಅಂತರ್ಧಾನನಾದನು.

ಶಿವಸಹಸ್ರನಾಮಾವಳಿಯನ್ನು ಪಠಿಸುತ್ತ, ಸಹಸ್ರಕಮಲಗಳನ್ನು ಶಂಭುವಿಗೆ ಅರ್ಪಿಸಿದರೆ ಇಷ್ಟಾರ್ಥ ಸಿದ್ಧಿಯಾಗುವದು.

# ಶಿವರಾತ್ರಿ ವ್ರತದ ಉದ್ಯಾಪನ ವಿಧಿ

ಶೌನಕಾದಿ ಋಷಿಗಳು-ಸೂತಪುರಾಣಿಕನೆ, ಶಿವರಾತ್ರಿ ವ್ರತದ ಉದ್ಯಾಪನವಿಧಿಯನ್ನು ತಿಳಿಸಬೇಕು. ಭಗವಾನ್ ಶಂಕರನು ಯಾವ ವ್ರತದ ಅನುಷ್ಠಾನ ಮಾಡುವದರಿಂದ ಪ್ರಸನ್ನನಾಗುವನೆಂಬುದನ್ನು ವಿವರಿಸು.

ಸೂತಪುರಾಣಿಕ- ಋಷಿಗಳೆ, ಶಿವರಾತ್ರಿಯ ಶುಭವ್ರತವನ್ನು ಹದಿನಾಲ್ಕು ವರ್ಷಗಳವರೆಗೆ ಮಾಡಬೇಕು. ತ್ರಯೋದಶಿಯ ದಿವಸ ಒಂದೇ ವೇಳೆ ಊಟಮಾಡಿ ಚತುರ್ದಶಿಯ ದಿವಸ ಉಪೋಷಣ ಮಾಡಬೇಕು. ಅಂದು ವಿಧಿ ಪೂರ್ವಕವಾಗಿ ಶಿವನನ್ನು ಪೂಜಿಸಬೇಕು. ತರುವಾಯ ಗೌರೀ ತಿಲಕವೆಂಬ ದಿವ್ಯ ಮಂಡಲವನ್ನು ರಚಿಸಬೇಕು. ಅದರ ಮಧ್ಯಭಾಗದಲ್ಲಿ ಲಿಂಗತೋ ಭದ್ರ ಮಂಡಲವನ್ನು ನಿರ್ಮಾಣ ಮಾಡಬೇಕು. ಅಲ್ಲಿ ಪ್ರಜಾಪತ್ಯವೆಂಬ ಹೆಸರಿನ ಕಲಶವನ್ನು ಸ್ಥಾಪಿಸಬೇಕು. ಕಲಶವು ವಸ್ತ್ರ, ಫಲ, ದಕ್ಷಿಣೆಗಳಿಂದ ಯುಕ್ತವಾಗಿರ ಬೇಕು. ಮಂಡಲದ ಪಾರ್ಶ್ವಭಾಗದಲ್ಲಿ ಇವೆಲ್ಲವುಗಳನ್ನೂ ಸ್ಥಾಪಿಸಬೇಕು. ಮಂಟಪದ ಮಧ್ಯಭಾಗದಲ್ಲಿ ಬಂಗಾರದ ಇಲ್ಲವೆ ತಾಮ್ರದ ಕಲಶವನ್ನು ಸ್ಥಾಪಿಸಬೇಕು. ಆ ಕಲಶದ ಮೇಲೆ ಪಾರ್ವತಿ ಸಹಿತನಾಗಿರುವ ಶಂಕರನ ಬಂಗಾರದ ಪ್ರತಿಮೆಯನ್ನಿಡಬೇಕು. ರಾತ್ರಿಯ ಕಾಲದಲ್ಲಿ ಅದನ್ನು ಪೂಜಿಸಬೇಕು. ರಾತ್ರಿಯ ಪ್ರತ್ಯೇಕ ಪ್ರಹರದಲ್ಲಿ ಬೇರೆ ಬೇರೆಯಾಗಿ ಪೂಜೆ ಮಾಡಬೇಕು. ಮಹಾದೇವನ ವ್ರತಿಯಾದ ಪುರುಷನು ಜಾಗರಣ ಮಾಡಿ ಗೀತ, ನೃತ್ಯಾದಿಗಳಲ್ಲಿ ರಾತ್ರಿಯನ್ನು ಕಳೆಯಬೇಕು. ಈ ಪ್ರಕಾರ ವಿಧಿಪೂರ್ವಕ ಪೂಜೆಮಾಡಿದ ಬಳಿಕ ಸವಿಧಿಯಾಗಿ ಹೋಮ ಮಾಡಿ ಬ್ರಾಹ್ಮಣಭೋಜನ ಮಾಡಿಸಬೇಕು. ತರುವಾಯ ವಸ್ತ್ರಾಲಂಕಾರಗಳಿಂದ ಬ್ರಾಹ್ಮಣದಂಪತಿಗಳನ್ನು ಸತ್ಕರಿಸಬೇಕು, ದಾನ ಧರ್ಮ ಮಾಡಬೇಕು. ಸವತ್ಸ ಗೋದಾನ ಮಾಡಬೇಕು. ತರುವಾಯ ಕಲಶಸಹಿತವಾಗಿ ಆ ಮೂರ್ತಿಯನ್ನು ವೃಷಭದ ಬೆನ್ನ ಮೇಲಿರಿಸಿ ಆಚಾರ್ಯನಿಗೆ ಅರ್ಪಿಸಬೇಕು. ತರುವಾಯ ಕೈಜೋಡಿಸಿ ಭಗವಾನ್ ಶಂಕರನನ್ನು ಪ್ರಾರ್ಥಿಸಬೇಕು.

ದೇವ ದೇವ ಮಹಾದೇವ ಶರಣಾಗತವತ್ಸಲ ।
ವ್ರತೇನಾನೇನ ದೇವೇಶ ಕೃಪಾಂ ಕುರು ಮಯೋಪರಿ ॥

ಮಯಾ ಭಕ್ತ್ಯನುಸಾರೇಣ ವ್ರತಮೇತತ್ ಕೃತಂ ಶಿವ ।
ನ್ಯೂನಂ ಸಂಪೂರ್ಣತಾಂ ಯಾತು ಪ್ರಸಾದಾತ್ತವ ಶಂಕರ ॥
ಅಜ್ಞಾನಾದ್ಯದಿ ವಾಜ್ಞಾನಾಜ್ಜಪಪೂಜಾದಿಕಂ ಮಯಾ ।
ಕೃತಂ ತದಸ್ತು ಕೃಪಯಾ ಸಫಲಂ ತವ ಶಂಕರ ॥

ದೇವಾಧಿದೇವ ಮಹಾದೇವನೆ, ಶರಣಾಗತ ವತ್ಸಲನೇ, ದೇವೇಶ್ವರನೇ ನಾನು ಮಾಡಿದ ವ್ರತದಿಂದ ಸಂತುಷ್ಟನಾಗು. ನನ್ನಲ್ಲಿ ಕೃಪೆಯುಳ್ಳವನಾಗಬೇಕು. ನಾನು ಭಕ್ತಿಭಾವದಿಂದ ಈ ವ್ರತವನ್ನು ಪಾಲಿಸಿರುವೆನು. ಇದರಲ್ಲಿ ಏನಾದರೂ ನ್ಯೂನತೆಯಿದ್ದರೆ ನಿನ್ನ ಪ್ರಸಾದದಿಂದ ಪೂರ್ಣವಾಗಲಿ. ನನ್ನ ಪೂಜೆಯು ನಿನ್ನ ಕೃಪೆಯಿಂದ ಸಫಲವಾಗಲಿ, ಹೀಗೆ ಪ್ರಾರ್ಥಿಸಿ ಪುಷ್ಪಾಂಜಲಿಯನ್ನರ್ಪಿಸಬೇಕು.

## ಭಿಲ್ಲನ ಮೇಲೆ ಭಗವಾನ್ ಶಂಕರನ ಕೃಪೆ

ಶೌನಕಾದಿ ಋಷಿಗಳು–ಶಿವರಾತ್ರಿಯ ವ್ರತದ ಬಗ್ಗೆ ಇನ್ನೂ ಹೆಚ್ಚಿನ ಮಹತ್ವದ ಸಂಗತಿಗಳಿದ್ದರೆ ತಿಳಿಸಬೇಕು.

ಸೂತಪುರಾಣಿಕ– ವಿಪ್ರೋತ್ತಮರೆ, ಪ್ರಾಚೀನ ಕಾಲದ ಒಂದು ಚರಿತ್ರೆಯನ್ನು ನಿಮಗೆ ತಿಳಿಸುವೆನು, ಕೇಳಿರಿ. ಪೂಜೆಯ ಉದ್ದೇಶವಿಲ್ಲದೆ ಘಟಿಸಿದ ಪೂಜಾ ಘಟನೆಯಿಂದ ಶಿವನ ಅನುಗ್ರಹವಾದ ವಿಚಿತ್ರ ಕತೆಯಿದು. ಒಂದು ನಿಬಿಡವಾದ ವನದಲ್ಲಿ ನಿಷಾದನೊಬ್ಬನು ತನ್ನ ಸ್ತ್ರೀ–ಪುತ್ರರೊಡನೆ ವಾಸವಾಗಿದ್ದನು. ಅವನ ಹೆಸರು ಗುರುದ್ರುಹ. ಅವನು ಚೌರ್ಯ ಮೊದಲಾದ ಅನೇಕ ಕ್ರೂರ ಕರ್ಮಗಳನ್ನು ಮಾಡುತ್ತಿದ್ದನು. ಬೇಟೆಯು ಅವನ ಉಪಜೀವನದ ಮುಖ್ಯ ಸಾಧನವಾಗಿತ್ತು. ಅವನು ಒಂದು ದಿನ ಬೇಟೆಗೆ ಹೋದನು. ಸಾಯಂಕಾಲದ ವರೆಗೂ ಒಂದು ಬೇಟೆಯೂ ದೊರೆಯಲಿಲ್ಲ. ಅವನು ಬೇಟೆಗಾಗಿ ಒಂದು ಬಿಲ್ವ ವೃಕ್ಷದ ಮೇಲೆ ಅವಿತು ಕುಳಿತನು. ಅಂದು ಶಿವರಾತ್ರಿಯಿತ್ತು. ಅವನು ಕುಳಿತ ಸ್ಥಳದ ಕೆಳಗೆ ಒಂದು ಶಿವಲಿಂಗವಿತ್ತು. ಅವನು ಬೇಟೆಯ ಮೃಗಗಳನ್ನು ಬಾಗಿ ಬಾಗಿ ನೋಡುತ್ತಿರುವಾಗ ಅವನ ಹೆಗಲ ಮೇಲಿನ ಹೂಜೆಯಿಂದ ನೀರು ಕೆಳಗಿನ ಶಿವಲಿಂಗದ ಮೇಲೆ ಬೀಳುತ್ತಲಿದ್ದವು. ಮರೆಯಾಗಿರುವ ಬಿಲ್ವ ದಳಗಳನ್ನು ಅವನು

ಬಾಣದಿಂದ ಕತ್ತರಿಸಿ ಕೆಳಗೆ ಚೆಲ್ಲುತ್ತಿದ್ದನು. ಆ ದಳಗಳು ಶಿವಲಿಂಗದ ಮೇಲೆಯೇ ಬೀಳಹತ್ತಿದವು. ಈ ಘಟನೆಯಿಂದ ಗುರುದ್ರುಹನಿಗೆ ಶಿವರಾತ್ರಿಯ ಶಿವಪೂಜೆಯ ಫಲವು ಲಭ್ಯವಾಯಿತು. ಅಷ್ಟರಲ್ಲಿ ಒಂದು ಚಿಗರೆಯು ಬಿಲ್ವವೃಕ್ಷದ ನಿಕಟವರ್ತಿಯಾಗಿದ್ದ ಸರೋವರಕ್ಕೆ ನೀರು ಕುಡಿಯಲು ಬಿಲ್ವ ವೃಕ್ಷದ ಬಳಿಯಲ್ಲಿಯೇ ಹೊರಟಿತ್ತು. ಕೂಡಲೆ ಭಿಲ್ಲನು ಚಿಗರೆಯನ್ನು ಹೊಡೆಯಲು ಧನುಸ್ಸಿಗೆ ಶರವನ್ನು ಹೂಡಿದನು. ಆವನ ಈ ಸಾಹಸವನ್ನು ಆ ಚಿಗರೆಯು ನೋಡಿ ನಿಷಾದನನ್ನುದ್ದೇಶಿಸಿ ಮಾತಾಡಿತು.

ಹರಿಣ–ಕಿರಾತಾ, ನನ್ನ ದೇಹದ ಮಾಂಸದಿಂದ ನೀನು ಸುಖ ಹೊಂದುವೆ. ನಿನ್ನ ಕ್ಷುಧೆಯೂ ಶಾಂತವಾಗುವದು. ಈ ಅನರ್ಥಕಾರಿಯಾದ ಶರೀರವು ಒಬ್ಬನ ಹಿತಕ್ಕಾಗಿ ವಿನಿಯೋಗವಾಗುವದು ಪುಣ್ಯ ಕಾರ್ಯವಾಗಿದೆ. ಉಪಕಾರ ಮಾಡುವದರಿಂದ ಲಭಿಸಿದ ಪುಣ್ಯದ ವರ್ಣನೆಯನ್ನು ಶತಸಂವತ್ಸರ ಕಳೆದರೂ ಮಾಡಲೂ ಶಕ್ಯವಾಗುವದಿಲ್ಲ.

ಉಪಕಾರಕರಸ್ತ್ರೇವಯತ್ಪುಣ್ಯಂ ಜಾಯತೇ ತ್ವಿಹ ।
ತತ್ಪುಣ್ಯಂ ಶಕ್ಯತೇ ನೈವ ವಕ್ತುಂ ವರ್ಷಶತೈರಪಿ ॥

(ಶಿ. ಪು. ಕೊ. ರು. ಸಂ. ೪೦–೨೬)

ವ್ಯಾಧಾ, ನನ್ನ ಮಕ್ಕಳು ನನ್ನ ಆಶ್ರಮದಲ್ಲಿರುವರು. ಅವುಗಳನ್ನು ನನ್ನ ಸಹೋದರಿಯ ಇಲ್ಲವೆ ನನ್ನ ಸ್ವಾಮಿಯ ವಶಕ್ಕೆ ಕೊಟ್ಟು, ನಾನು ಮರಳಿ ನಿನ್ನ ಬಳಿಗೆ ಬರುವೆನು. ನಾನು ನಿನಗೆ ಸತ್ಯವನ್ನು ಹೇಳುವೆನು. ನಾನು ಇಲ್ಲಿಗೆ ಬಾರದಿದ್ದರೆ ವೇದಗಳನ್ನು ಮಾರುವ ಬ್ರಾಹ್ಮಣನಿಗೆ, ತ್ರಿಕಾಲ ಸಂಧ್ಯೆ ಮಾಡದ ಬ್ರಹ್ಮಚಾರಿಗೆ, ಸ್ವೇಚ್ಛಾವೃತ್ತಿಯ ಸ್ತ್ರೀಗೆ, ಮಾಡಿದ ಉಪಕಾರವನ್ನು ನೆನೆಯದವನಿಗೆ, ಭಗವಾನ್ ಶಂಕರನಿಗೆ ವಿಮುಖನಾದವನಿಗೆ, ಬೇರೆಯವರಿಗೆ ದ್ರೋಹ ಮಾಡುವವನಿಗೆ, ಧರ್ಮವನ್ನು ಉಲ್ಲಂಘಿಸುವವರಿಗೆ, ವಿಶ್ವಾಸಘಾತ ಮಾಡುವವನಿಗೆ ಒದಗಬಹುದಾದ ಪಾತಕವು ನನಗೆ ಪ್ರಾಪ್ತವಾಗಲಿ.

ಗುರುದ್ರುಹ ವ್ಯಾಧನು ಆ ಚಿಗರೆಯ ಮಾತಿನ ಮೇಲೆ ವಿಶ್ವಾಸವಿಟ್ಟು, ಅದಕ್ಕೆ ಹೋಗಲು ಅನುಮತಿ ಕೊಟ್ಟನು. ಚಿಗರೆಯು ನೀರು ಕುಡಿದು ಅಲ್ಲಿಂದ ಹೊರಟು ಹೋಯಿತು. ಒಂದನೆಯ ಪ್ರಹರವು ಕಳೆದ ಬಳಿಕ ಎರಡನೆಯ

ಪ್ರಹರವು ಪ್ರಾರಂಭವಾಯಿತು. ಆಗ ಶಿವಲಿಂಗದ ಮೇಲೆ ಜಲವೂ ಬಿಲ್ವಪತ್ರಿಗಳೂ ಆಕಸ್ಮಿಕವಾಗಿ ಮೊದಲಿನಂತೆ ಬಿದ್ದವು. ಅಷ್ಟರಲ್ಲಿ ಮತ್ತೊಂದು ಚಿಗರೆಯು ಅಲ್ಲಿಗೆ ಬಂದಿತು. ಆಗ ವ್ಯಾಧನು ಅದರ ಮೇಲೆ ಶರಸಂಧಾನ ಮಾಡಲು ಸಿದ್ಧನಾದನು. ಆ ಚಿಗರೆಯಾದರೂ ಮೊದಲನೆಯ ಚಿಗರೆಯಂತೆ ಹೇಳಿತು. ಆಗ ವ್ಯಾಧನು ಅದಕ್ಕೆ ಹೋಗಿ ಬರಲು ಅನುಮತಿ ಕೊಟ್ಟನು. ಹರಿಣವು ಸರೋವರದಲ್ಲಿ ನೀರು ಕುಡಿದು ಹೊರಟು ಹೋಯಿತು.

ಮೂರನೆಯ ಪ್ರಹರವು ಆರಂಭವಾಯಿತು. ಚಿಗರೆಯನ್ನು ನೋಡಲು ಅವನು ಅತ್ತಿತ್ತ ಚಲನವಲನ ಮಾಡುತ್ತಿರುವಾಗ ಅವನ ಹೂಜೆಯೊಳಗಿನ ನೀರು ಶಿವಲಿಂಗದ ಮೇಲೆ ಬಿದ್ದವು. ಬಿಲ್ವವೃಕ್ಷದ ಟೊಂಗೆಗಳನ್ನು ಅವನು ಮತ್ತಿಷ್ಟು ಕಡಿದು ಬೈಲು ಮಾಡಿದನು. ಆಗ ಆ ಬಿಲ್ವಪತ್ರಗಳು ಶಿವಲಿಂಗದ ಮೇಲೆ ಬಿದ್ದವು. ಅಷ್ಟರಲ್ಲಿ ಮತ್ತೊಂದು ದಷ್ಟಪುಷ್ಟವಾದ ಚಿಗರೆಯು ಅಲ್ಲಿಗೆ ಬಂದಿತು. ವ್ಯಾಧನು ಅದರ ಮೇಲೆ ಬಾಣ ಹೂಡಿದನು. ಆ ಚಿಗರೆಯೂ ಮೊದಲಿನ ಎರಡು ಚಿಗರೆಗಳಂತೆಯೆ ಪ್ರತಿಜ್ಞೆ ಮಾಡಿ ವ್ಯಾಧನಿಂದ ಬಿಡುಗಡೆ ಹೊಂದಿತು. ಅದೂ ನೀರು ಕುಡಿದು ತನ್ನ ನಿವಾಸ ಸ್ಥಳಕ್ಕೆ ಹೊರಟು ಹೋಯಿತು.

ನಾಲ್ಕನೆಯ ಪ್ರಹರವು ಪ್ರಾರಂಭವಾಯಿತು. ವಚನ ಕೊಟ್ಟು ಹೋದ ಚಿಗರೆಗಳೂ ಯಾವವೂ ಮರಳಿಬಾರದ್ದರಿಂದ ಗುರುದ್ರುಹ ವ್ಯಾಧನು ಬಹಳೇ ಯೋಚಿಸತೊಡಗಿದನು. ಅವನು ಬಿಲ್ವಪತ್ರದ ಮರದಲ್ಲಿ ಕುಳಿತು ಸುತ್ತುಮುತ್ತು ಬಾಗಿ ಬಾಗಿ ನೋಡತೊಡಗಿದನು. ಆಗ ಅವನ ಹೂಜೆಯೊಳಗಿನ ಜಲವು ಶಿವಲಿಂಗದ ಮೇಲೆ ಬೀಳತೊಡಗಿತು. ಬಿಲ್ವದಳಗಳೂ ಬಿದ್ದವು. ಶಿವರಾತ್ರಿಯ ಪರ್ವದಿನದಲ್ಲಿ ಸಂಪೂರ್ಣವಾಗಿ ಅವನಿಗೆ ಇದ್ದಕ್ಕಿದ್ದಂತೆ ಉಪೋಷಣವೂ ನಾಲ್ಕು ಯಾಮಗಳ ಶಿವಪೂಜೆಯೂ ಘಟಿಸಿದವು. ತಾನು ಶಿವರಾತ್ರಿಯ ಉಪೋಷಣ, ಶಿವಪೂಜೆಗಳನ್ನು ಜರುಗಿಸುತ್ತಿರುವೆನೆಂಬ ಕಲ್ಪನೆಯೇ ಆ ನಿಷಾದನಿಗಿರಲಿಲ್ಲ.

ವ್ಯಾಧನಿಗೆ ವಚನಕೊಟ್ಟು ಹೋದ ಚಿಗರೆಗಳು ತಮ್ಮ ಸ್ವಾಮಿಗೂ ಮಕ್ಕಳು ಮರಿಗಳಿಗೂ ಘಟಿಸಿದ ಸಂಗತಿಯನ್ನು ತಿಳಿಸಿ, ತಾವು ವಚನ ಕೊಟ್ಟಂತೆ ವ್ಯಾಧನ ಬಳಿಗೆ ಹೋಗುತ್ತೇವೆಂದು ತಿಳಿಸಿದವು. ಈ ಸಂಗತಿಯನ್ನು ಕೇಳಿ ಚಿಗರೆಗಳ ಬಳಗವು ಚಿಂತಾಕ್ರಾಂತವಾಯಿತು. ಆಗ ಅವುಗಳೆಲ್ಲವೂ ತಾವೂ ಅಲ್ಲಿಗೆ ಬರುವೆವೆಂದು ತಿಳಿಸಿದವು. ಕೊನೆಗೆ ಎಲ್ಲವೂ ಕೂಡಿಕೊಂಡು ವ್ಯಾಧನ ಬಳಿಗೆ ಬಂದವು. ತಮ್ಮನ್ನು

ವಧಿಸಿ ಸಂತೃಪ್ತಿ ಹೊಂದಬೇಕೆಂದು ಅವು ಹೇಳಿದವು. ಆ ಪ್ರಾಣಿಗಳ ಪ್ರಾಮಾಣಿಕತೆ ಯಿಂದ ವ್ಯಾಧನು ಸಂತುಷ್ಟನಾಗಿ, ಅವುಗಳಿಗೆ ತಮ್ಮ ವಾಸಸ್ಥಾನಕ್ಕೆ ಹೋಗಲು ಅನುಮತಿ ಕೊಟ್ಟನು.

ಭಗವಾನ್ ಶಂಕರನು ವ್ಯಾಧನ ಈ ವೃತ್ತಿಯನ್ನು ಕಂಡು ಪ್ರಸನ್ನನಾದನು.

ಶಿವ–ಗುರುದ್ರುಹಾ, ನೀನು ಅರಿಯದೆ ಮಾಡಿದ ಶಿವರಾತ್ರಿಯ ವ್ರತದ ಬಗ್ಗೆ ನಾನು ಪ್ರಸನ್ನನಾಗಿದ್ದೇನೆ. ಅಲ್ಲದೆ ನೀನು ಈ ಹರಿಣಗಳ ಮೇಲೆ ತೋರಿದ ದಯೆಯಿಂದಲೂ ಸಂತುಷ್ಟನಾದೆನು. ನೀನು ಶೃಂಗವೇರಪುರದ ರಾಜನಾಗುವೆ. ಭಗವಾನ್ ಶ್ರೀರಾಮನು ನಿನ್ನ ಮನೆಗೆ ಬಂದು ನಿನ್ನಿಂದ ಆತಿಥ್ಯವನ್ನು ಸ್ವೀಕರಿಸುವನು.

ಶಿವನು ಗುರುದ್ರುಹನಿಗೆ ಹೀಗೆ ಹೇಳುವಷ್ಟರಲ್ಲಿ ಎಲ್ಲ ಹರಿಣಗಳು ತಮ್ಮ ಮೃಗದೇಹವನ್ನು ತ್ಯಜಿಸಿ, ವಿಮಾನಾರೋಹಣ ಮಾಡಿ ಕೈಲಾಸಕ್ಕೆ ತೆರಳಿದವು. ಶಿವನು ಅರ್ಬುದ ಪರ್ವತದ ಮೇಲೆ ವ್ಯಾಧೇಶ್ವರನೆಂಬ ಹೆಸರಿನಿಂದ ಶಿವಲಿಂಗ ವಾಗಿ ನೆಲೆಸಿ ಭಕ್ತಜನರನ್ನು ಉದ್ಧಾರ ಮಾಡುತ್ತಲಿರುವನು.

## ಮುಕ್ತಿ - ಭಕ್ತಿಗಳ ಸ್ವರೂಪ

ಶೌನಕಾದಿ ಋಷಿಗಳು–ಸೂತಪುರಾಣಿಕನೆ, ನೀನು ಮೇಲಿಂದ ಮೇಲೆ ಮುಕ್ತಿಯ ಹೆಸರು ಹೇಳುವೆ. ಮುಕ್ತಿಯು ದೊರೆತ ಬಳಿಕ ಏನಾಗುವದು ? ಮುಕ್ತಿಯಾದ ಬಳಿದ ಜೀವದ ವ್ಯವಸ್ಥೆ ಏನಾಗುವದು ?

ಸೂತಪುರಾಣಿಕ–ಮಹರ್ಷಿಗಳೆ, ಸಂಸಾರಕ್ಲೇಶವನ್ನು ನಾಶಮಾಡುವ ಹಾಗೂ ಪರಮಾನಂದ ಪ್ರದಾನ ಮಾಡುವ ಮುಕ್ತಿಯ ಸ್ವರೂಪವನ್ನು ತಿಳಿಸುವೆನು. ಮುಕ್ತಿಯು ನಾಲ್ಕು ಪ್ರಕಾರದ್ದಿರುವದು. ಸಾರೂಪ್ಯ, ಸಾಲೋಕ್ಯ, ಸಾನ್ನಿಧ್ಯ, ಸಾಯುಜ್ಯ ಇವು ನಾಲ್ಕು ಪ್ರಕಾರದ ಮುಕ್ತಿಗಳು. ಶಿವರಾತ್ರಿ ವ್ರತದಿಂದ ಈ ನಾಲ್ಕು ಪ್ರಕಾರದ ಮುಕ್ತಿಗಳು ಸುಲಭವಾಗುವವು. ಜ್ಞಾನರೂಪನೂ, ಅವಿನಾಶಿಯೂ, ಸಾಕ್ಷಿಯೂ, ಜ್ಞಾನಗಮ್ಯನೂ, ದ್ವೈತ ರಹಿತನೂ ಆದ ಸಾಕ್ಷಾತ್ ಶಿವನು ಕೈವಲ್ಯ ಮೋಕ್ಷದ ಹಾಗೂ ಧರ್ಮ, ಅರ್ಥ, ಕಾಮಗಳ ದಾತಾರನಾಗಿರುವನು. ಕೈವಲ್ಯ

ನಾಮಕವಾದ ಐದನೆಯ ಮುಕ್ತಿಯು ಮನುಷ್ಯನಿಗೆ ದುರ್ಲಭವಾಗಿರುವದು. ಯಾವನಿಂದ ಈ ಸಮಸ್ತ ಜಗತ್ತು ನಿರ್ಮಾಣವಾಗಿರುವದೋ, ಯಾವನಿಂದ ರಕ್ಷಿಸಲ್ಪಡುವದೋ, ಯಾವನಲ್ಲಿ ಲಯವಾಗುವದೋ ಅವನೇ ಶಿವನು. ಯಾವನಿಂದ ಸಂಪೂರ್ಣ ಜಗತ್ತು ವ್ಯಾಪ್ತವಾಗಿರುವದೋ ಅವನು ಶಿವನು. ಸಕಲ ನಿಷ್ಕಲವೆಂದು ವೇದದಲ್ಲಿ ಶಿವಸ್ವರೂಪವು ವರ್ಣಿತವಾಗಿದೆ. ಶಿವತತ್ವವು ಸತ್ಯ, ಜ್ಞಾನ, ಅನಂತ, ಸಚ್ಚಿದಾನಂದ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿದೆ. ಅದು ನಿರ್ಗುಣವೂ, ಉಪಾಧಿರಹಿತವೂ, ಅವಿನಾಶಿಯೂ, ಶುದ್ಧವೂ, ನಿರಂಜನವೂ ಆಗಿದೆ. ಅದಕ್ಕೆ ಯಾವ ಬಣ್ಣವೂ ಇಲ್ಲ; ಆಕಾರವೂ ಇಲ್ಲ. ಆಕಾಶವು ಸರ್ವ ವ್ಯಾಪಿಯಿರುವಂತೆ ಶಿವತತ್ವವಾದರೂ ಸರ್ವವ್ಯಾಪಿಯಾಗಿರುವದು. ಇದು ಮಾಯಾರಹಿತವೂ ದ್ವಂದ್ವಾತೀತವೂ ಮಾತ್ಸರ್ಯಶೂನ್ಯವೂ ಆದ ಪರಮಾತ್ಮ ವಾಗಿರುವದು. ಸೂಕ್ಷ್ಮಬುದ್ಧಿಯಿಂದ ಶಿವನ ಭಜನ, ಧ್ಯಾನ ಮಾಡುವದರಿಂದ ಸತ್ಪುರುಷರಿಗೆ ಶಿವಪದದ ಪ್ರಾಪ್ತಿಯಾಗುವದು.

ಸಂಸಾರದಲ್ಲಿ ಜ್ಞಾನದ ಪ್ರಾಪ್ತಿಯಾಗುವದು ಕಠಿಣವು. ಆದರೆ ಭಗವಂತನ ಭಜನೆಯು ಅತ್ಯಂತ ಸುಕರವಾಗಿದೆ. ಆದುದರಿಂದ ಸಂತಶಿರೋಮಣಿ ಗಳು ಮುಕ್ತಿಗಾಗಿ ಶಿವಭಜನೆಯನ್ನು ಮಾಡುತ್ತಿರುವದು. ಜ್ಞಾನ ಸ್ವರೂಪನೂ, ಮೋಕ್ಷದಾತನೂ ಆದ ಪರಮಾತ್ಮ ಶಿವನು ಭಜನೆಯ ಅಧೀನನಾಗಿರುವನು. ಬಹಳ ಜನ ಭಕ್ತರು ಭಕ್ತಿಯಿಂದ ಸಿದ್ಧಿಲಾಭ ಹೊಂದಿ ಪ್ರಸನ್ನತಾರೂಪದಿಂದ ಪರಮ ಮೋಕ್ಷವನ್ನು ಹೊಂದಿರುವರು. ಭಗವಾನ್ ಶಂಭುವು ಭಕ್ತಿ, ಜ್ಞಾನಗಳ ಜನನಿಯಿದ್ದಂತೆ. ಅದು ಸದಾ ಭೋಗ, ಮೋಕ್ಷಗಳನ್ನು ಕೊಡುವಂತಹ ದಾಗಿರುವದು. ಅದು ಸಾಧು ಮಹಾಪುರುಷರ ಕೃಪಾಪ್ರಸಾದದಿಂದ ಸುಲಭ ವಾಗುವದು. ಉತ್ತಮ ಪ್ರೇಮದ ಅಂಕುರವೇ ಅದರ ಲಕ್ಷಣವು. ಆ ಭಕ್ತಿಯಾದರೂ ಸಗುಣ ನಿರ್ಗುಣವೆಂದು ಎರಡು ಪ್ರಕಾರದ ಭೇದದಿಂದಿರುವದು. ಇವುಗಳಲ್ಲಿ ವೈಧಿಗಿಂತ ಸ್ವಾಭಾವಿಕೆಯು ಶ್ರೇಷ್ಠವೆಂದು ತಿಳಿಯಲ್ಪಟ್ಟಿದೆ. ನೈಷ್ಠಿಕಿ, ಅನೈಷ್ಠಿಕಿ ಎಂಬ ಎರಡು ಭೇದಗಳು ಭಕ್ತಿಯಲ್ಲಿರುವವು. ನೈಷ್ಠಿಕ ಭಕ್ತಿಯು ಆರು ಪ್ರಕಾರದ್ದಾಗಿರುವದು. ಅನೈಷ್ಠಿಕಿಯು ಒಂದೇ ಪ್ರಕಾರದ್ದಿರುವದು. ಭಗವಂತನ ಕೃಪೆಯ ಹೊರತು ಭಕ್ತಿಯ ಸಂಪಾದನೆಯಾಗುವದು ಕಠಿಣವು. ಅವನ ಕೃಪೆಯಾದರೆ ಸುಗಮವಾಗಿ ಅವರ ಸಾಧನೆಯಾಗುವದು. ಶಂಭುವು ಭಕ್ತಿ

ಜ್ಞಾನಗಳು ಭಿನ್ನವಲ್ಲವೆಂದು ಹೇಳಿರುವನು. ಅವೆರಡೂ ಒಂದೇ ಆಗಿರುವವೆಂದು ಭಗವಂತನ ಉಪದೇಶವಿದೆ. ಭಕ್ತಿವಿರೋಧಿಗೆ ಜ್ಞಾನಪ್ರಾಪ್ತಿಯಾಗುವದಿಲ್ಲ. ಭಗವಾನ್ ಶಿವನಲ್ಲಿ ಭಕ್ತಿಯುಳ್ಳವರು ಸುಲಭವಾಗಿ ಜ್ಞಾನಪ್ರಾಪ್ತಿ ಮಾಡಿ ಕೊಳ್ಳುವರು.

## ಶಿವ, ವಿಷ್ಣು , ರುದ್ರ, ಬ್ರಹ್ಮಸ್ವರೂಪ ವಿವೇಚನೆ

ಶೌನಕಾದಿ ಋಷಿಗಳು–ವ್ಯಾಸಶಿಷ್ಯನೆ, ಶಿವನು ಯಾರು? ವಿಷ್ಣುವು ಯಾರು? ರುದ್ರನು ಯಾರು ? ಇವರಲ್ಲಿ ಹೆಚ್ಚು ನಿರ್ಗುಣನು ಯಾರು ? ಈ ವಿಷಯವನ್ನು ವಿವರಿಸಬೇಕು.

ಸೂತಪುರಾಣಿಕ– ಋಷಿಗಳೆ, ನಿರ್ಗುಣ ಪರಮಾತ್ಮನಿಂದ ಸರ್ವಪ್ರಥಮ ಸಗುಣ ರೂಪವು ಪ್ರಕಟವಾಯಿತು. ಆ ಸಗುಣ ರೂಪಕ್ಕೆ 'ಶಿವ' ಎಂದೆನ್ನುವರು. ಶಿವನಿಂದ ಪುರುಷ ಸಹಿತ ಪ್ರಕೃತಿಯು ಉತ್ಪನ್ನವಾಯಿತು. ಅವೆರಡೂ ಮೂಲಸ್ಥಿತ ಜಲದಲ್ಲಿ ತಪವನ್ನು ಮಾಡಿದವು. ಆ ಸ್ಥಳವು ಪಂಚಕ್ರೋಶಿಕಾಶಿಯೆಂಬ ಹೆಸರಿನಿಂದ ವಿಖ್ಯಾತವಿರುವದು. ಅದು ಭಗವಾನ್ ಶಿವನಿಗೆ ಅತ್ಯಂತ ಪ್ರಿಯವಾಗಿದೆ. ಈ ಜಲವು ಸಮಗ್ರ ವಿಶ್ವವನ್ನು ವ್ಯಾಪಿಸಿತ್ತು. ಜಲವನ್ನು ಆಶ್ರಯಿಸಿದ ಶ್ರೀಹರಿಯು ಯೋಗಮಾಯೆಯಿಂದ ಯುಕ್ತನಾಗಿ ಶಯನ ಮಾಡಿದನು. ನಾರ–ಜಲ, ಅಯನ–ನಿವಾಸಸ್ಥಾನ, ಆದುದರಿಂದ ಅವನು ನಾರಾಯಣ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಪ್ರಕೃತಿಗೆ ನಾರಾಯಣಿ ಎಂಬ ಹೆಸರು ಪ್ರಾಪ್ತವಾಯಿತು. ನಾರಾಯಣನ ನಾಭಿಕಮಲದಿಂದ ಬ್ರಹ್ಮದೇವನು ಉತ್ಪನ್ನನಾದನು. ಬ್ರಹ್ಮನು ತಪಶ್ಚರ್ಯಮಾಡಿ ವಿಷ್ಣುವನ್ನು ಸಾಕ್ಷಾತ್ಕಾರ ಮಾಡಿಕೊಂಡನು. ಬ್ರಹ್ಮ ಹಾಗೂ ವಿಷ್ಣುವಿನ ವಿವಾದವನ್ನು ಶಾಂತಮಾಡುವದಕ್ಕಾಗಿ ಶಿವನು ಪ್ರಕಟ ಮಾಡಿದ ರೂಪವು ಮಹಾದೇವನು. ಬ್ರಹ್ಮನ ಲಲಾಟದಿಂದ ಪ್ರಕಟನಾಗಿ ರುದ್ರದೇವನೆನಿಸಿ ಕೊಂಡನು. ಈ ಪ್ರಕಾರವಾಗಿ ರೂಪರಹಿತ ಪರಮಾತ್ಮನು ಸರ್ವರ ಚಿಂತನೆಗಾಗಿ ಸಾಕಾರರೂಪದಿಂದ ಪ್ರಕಟನಾದನು. ಅವನಾದರೂ ಭಕ್ತ ವತ್ಸಲ ಶಿವನೇ ಆಗಿರುವನು. ತ್ರಿಗುಣಾತೀತನಾದ ಶಿವನಿಗೂ ಗುಣಧಾಮನಾದ ರುದ್ರನಿಗೂ ಏನೂ ಭೇದವಿರುವದಿಲ್ಲ. ಸುವರ್ಣಕ್ಕೂ ಸುವರ್ಣದ ಆಭೂಷಣಗಳಿಗೂ

ಅಭೇದವಿರುವಂತೆ ಶಿವ-ರುದ್ರರಲ್ಲಿ ಅಭೇದವಿರುವದು. ಇಬ್ಬರ ರೂಪ ಕರ್ಮಗಳಲ್ಲಿ ಅಭೇದವಿದೆ. ಇಬ್ಬರೂ ಸಮಾನ ರೂಪದಿಂದ ಭಕ್ತರಿಗೆ ಉತ್ತಮ ಗತಿ ಪ್ರದಾನ ಮಾಡುವವರು ಆಗಿದ್ದಾರೆ. ಇಬ್ಬರೂ ಸಮಾನರೂಪದಿಂದ ಸೇವನೀಯರು ಆಗಿರುವರು ಹಾಗೂ ನಾನಾ ಪ್ರಕಾರದ ಲೀಲಾವಿಹಾರ ಮಾಡುವವರಾಗಿದ್ದಾರೆ. ಭಯಾನಕ ಪರಾಕ್ರಮಿಯಾದ ರುದ್ರದೇವನು ಸರ್ವಥಾ ಶಿವರೂಪನಾಗಿರುವನು. ಅವನು ಭಕ್ತರ ಅಭೀಷ್ಟ ಸಿದ್ಧಿ ಮಾಡುವದಕ್ಕಾಗಿ ವಿಷ್ಣು ಬ್ರಹ್ಮರಿಗೆ ಸಹಾಯಕನಾಗಿರುವನು.

ಮಹರ್ಷಿಗಳೆ, ಅಜ್ಞಾನವು ಅನೇಕ ಪ್ರಕಾರದ್ದಿರುವದು. ಆದರೆ ವಿಜ್ಞಾನವು ಒಂದೇ ಸ್ವರೂಪದ್ದಾಗಿದೆ. ಬ್ರಹ್ಮನಿಂದ ತೃಣದವರೆಗೆ ದೃಷ್ಟಿ ಗೋಚರವಾಗುವ ದೆಲ್ಲವೂ ಶಿವಸ್ವರೂಪವಾಗಿದೆ. ಅವುಗಳಲ್ಲಿಯ ನಾನಾತ್ವದ ಕಲ್ಪನೆಯು ಮಿಥ್ಯಾಧಿ ಭೂತವಾಗಿದೆ. ಸೃಷ್ಟಿಯ ಪೂರ್ವದಲ್ಲಿ ಶಿವನ ಸತ್ತೆಯು ಹೇಳಲ್ಪಟ್ಟಿದೆ. ಸೃಷ್ಟಿಯ ಮಧ್ಯದಲ್ಲಿಯೂ ಶಿವನು ವಿರಾಜಮಾನನಾಗಿರುವನು. ಸೃಷ್ಟಿಯ ಅಂತ್ಯ ದಲ್ಲಾದರೂ ಶಿವನು ಸ್ಥಿತನಾಗಿರುವನು. ಯಾವಾಗ ಅವನು ಶೂನ್ಯತೆಯಲ್ಲಿ ಪರಿಣತನಾಗುವನೋ ಆವಾಗ ಅವನ ಸತ್ತೆಯು ಸ್ಥಿರವಾಗಿರುವದು. ಆದುದರಿಂದ ಶಿವನು ಚತುರ್ಗುಣನೆಂದು ಹೇಳಿಸಿಕೊಳ್ಳಲ್ಪಡುವನು. ಆ ಶಿವನು ಶಕ್ತಿಮಾನನಾಗಿರುವದರಿಂದ ಸಗುಣನೆಂದು ತಿಳಿಯುವದು ಯೋಗ್ಯವಾಗಿದೆ. ಈ ಪ್ರಕಾರವಾಗಿ ಅವನು ಸಗುಣ ನಿರ್ಗುಣ ಭೇದದಿಂದ ಎರಡು ಪ್ರಕಾರದ ವನಾಗಿರುವನು. ಶಿವನು ಭಗವಾನ್ ವಿಷ್ಣುವಿಗೆ ಸಂಪೂರ್ಣ ಸನಾತನವೇದ, ಅನೇಕ ವರ್ಣ, ಅನೇಕ ಮಾತ್ರೆಗಳು, ಧ್ಯಾನ, ಪೂಜನಗಳನ್ನು ಕೊಟ್ಟಿರುವದರಿಂದ ಅವನು ಸಂಪೂರ್ಣ ವಿದ್ಯೆಗಳ ಈಶ್ವರನಾಗಿರುವನೆಂದು ಸನಾತನ ಶ್ರುತಿಯು ಸಾರಿರುವದು. ಆದುದರಿಂದ ಶಂಭುವು ವೇದಗಳ ಪ್ರಾಕಟ್ಯಕರ್ತನೆಂದೂ, ವೇದಪತಿಯೆಂದೂ, ಹೇಳಿಸಿಕೊಳ್ಳುವನು. ಅವನು ಸರ್ವರ ಮೇಲೆ ಅನುಗ್ರಹ ಮಾಡುವ ಸಾಕ್ಷಾತ್ ಶಂಕರನಾಗಿರುವನು. ಅವನು ಕರ್ತಾರನೂ, ಭರ್ತಾರನೂ, ಹರ್ತಾರನೂ, ಸಾಕ್ಷಿಯೂ, ನಿರ್ಗುಣನೂ ಆಗಿರುವನು. ಅವನು ಮಹಾಕಾಲನಾಗಿರುವನು. ಮಹಾಕಾಲಿಯು ಅವನ ಆಶ್ರಿತಳಾಗಿರುವಳು, ರುದ್ರನು ಮತ್ತು ಕಾಲಿಯು ಒಂದೇ ಆಗಿರುವರು. ಅವರಿಬ್ಬರೂ ಸತ್ಯಲೀಲೆಗಳನ್ನು ಮಾಡುವವರಾಗಿದ್ದು, ತಮ್ಮ ಇಚ್ಛೆಯಿಂದ ಏನೆಲ್ಲವನ್ನೂ ಮಾಡಿರುವರು. ಶಿವನಿಗೆ ಯಾರೂ ಉತ್ಪಾದಕರಿಲ್ಲ;

ಸಂರಕ್ಷಕರಿಲ್ಲ; ಸಲಹಾರಕರಿಲ್ಲ. ಅವನು ಸ್ವಯಂ ಸರ್ವಹೇತುವಾಗಿರುವನು. ಅವನು ಒಬ್ಬನಾಗಿದ್ದರೂ ಅನೇಕತ್ವವನ್ನು ಪ್ರಾಪ್ತಮಾಡಿಕೊಳ್ಳುವನು. ಅನೇಕತ್ವ ದಿಂದ ಏಕತೆಯನ್ನು ಹೊಂದುವನು. ಒಂದೇ ಬೀಜವು ಹೊರ ಬಿದ್ದು ವೃಕ್ಷವಾಗಿ, ಫಲಾದಿಗಳನ್ನು ಪ್ರಾಪ್ತಮಾಡಿಕೊಂಡು ಮತ್ತೆ ಬೀಜರೂಪವಾಗುವದು. ಇದೇ ಪ್ರಕಾರವಾಗಿ ಶಿವರೂಪಿಯಾದ ಮಹೇಶ್ವರನು ಸ್ವಯಂ ಏಕತ್ವದಿಂದ ಅನೇಕ ತತ್ವದಲ್ಲಿ ಪರಿಣತನಾಗುವನು. ಈ ಪ್ರಕಾರ ಶಿವಜ್ಞಾನವು ತತ್ವತಃ ಹೇಳಲ್ಪಟ್ಟಿರು ವದು. ಜ್ಞಾನವಾನ ಪುರುಷನಿಗೆ ಇದರ ತಿಳಿವಳಿಕೆಯಾಗುವದಲ್ಲದೆ ಅಜ್ಞಾನಿಗಲ್ಲ.

ಶೌನಕಾದಿ ಮುನಿಗಳು–ಸೂತಪುರಾಣಿಕನೆ, ಶಿವಭಾವವನ್ನು ಪ್ರಾಪ್ತ ಮಾಡಿಕೊಳ್ಳುವಂತಹ ಲಕ್ಷಣರಹಿತ ಜ್ಞಾನದ ವರ್ಣನೆ ಮಾಡಬೇಕು. ಈ ಜಗತ್ತು ಶಿವಸ್ವರೂಪವು ಹೇಗೆ ? ಶಿವನು ಸಂಪೂರ್ಣ ಜಗತ್ತು ಹೇಗೆಂಬುದನ್ನು ತಿಳಿಸಬೇಕು.

ಋಷಿಗಳ ಪ್ರಶ್ನೆಯನ್ನು ಕೇಳಿ ಪೌರಾಣಿಕ ಶಿರೋಮಣಿ ಸೂತನು ಶಿವನ ಚರಣಾರವಿಂದವನ್ನು ಚಿಂತನೆ ಮಾಡುತ್ತ ಶಿವತತ್ವಜ್ಞಾನದ ವರ್ಣನೆ ಮಾಡ ತೊಡಗಿದನು.

## ಶಿವತತ್ವಜ್ಞಾನ

ಸೂತಪುರಾಣಿಕ–ಋಷಿಗಳೆ, ಶಿವತತ್ವಜ್ಞಾನವನ್ನು ನಾನು ಹೇಗೆ ನನ್ನ ಗುರುಗಳಿಂದ ಕೇಳಿರುವೆನೋ ಅದರಂತೆ ನಿಮಗೆ ಹೇಳುವೆನು. ಶಿವತತ್ವಜ್ಞಾನವು ಅತ್ಯಂತ ಗುಹ್ಯವೂ, ಪರಮ ಮೋಕ್ಷ ಸ್ವರೂಪವೂ ಆಗಿದೆ. ಬ್ರಹ್ಮ, ನಾರದ, ಸನಕಾದಿ ಮುನಿಗಳೂ, ವ್ಯಾಸ, ಕಪಿಲ ಮೊದಲಾದವರೂ ನಿಶ್ಚಯ ಮಾಡಿದ ಜ್ಞಾನದ ಸ್ವರೂಪವೇ ಯಥಾರ್ಥಜ್ಞಾನವೆಂದು ತಿಳಿಯಬೇಕು. ಸಂಪೂರ್ಣ ಜಗತ್ತು ಶಿವಮಯವಾಗಿದೆಯೆಂಬ ಜ್ಞಾನವು ಸದಾ ಅನುಶೀಲನ ಮಾಡುವಂತಹದಾಗಿದೆ. ಶಿವನು ಸರ್ವಮಯನೆಂಬುದನ್ನೂ ಸರ್ವಜ್ಞ ವಿದ್ವಾನರು ನಿಶ್ಚಿತರೂಪದಿಂದ ತಿಳಿಯಬೇಕು ಬ್ರಹ್ಮನಿಂದ ತೃಣದವರೆಗೆ ದೃಶ್ಯ ಜಗತ್ತೆಲ್ಲವೂ ಶಿವಮಯವೆಂದು ತಿಳಿಯಬೇಕು. ಮಹಾದೇವನನ್ನು ಶಿವನೆಂದು ಹೇಳುವರು. ಅವನ ಇಚ್ಛೆಯಿಂದ ಜಗತ್ತಿನ ರಚನೆಯಾಗುವದು. ಅವನು ಸರ್ವಜ್ಞನಾಗಿರುವನು; ಅವನನ್ನು ಯಾರೂ

ತಿಳಿಯುವದಿಲ್ಲ. ಅವನು ಈ ಬ್ರಹ್ಮಾಂಡವನ್ನು ರಚಿಸಿ, ಸ್ವಯಂ ಅದರೊಳಗೆ ಪ್ರವಿಷ್ಟನಾಗಿದ್ದರೂ ದೂರವಾಗಿಯೇ ಇರುವನು. ಯಾಕೆಂದರೆ ಅವನು ನಿರ್ಲಿಪ್ತನೂ, ಸಚ್ಚಿದಾನಂದ ಸ್ವರೂಪನೂ ಆಗಿರುವನು. ನೀರಿನಲ್ಲಿ ಸೂರ್ಯ ಚಂದ್ರರ ಪ್ರತಿಬಿಂಬವು ಮೂಡಿದ್ದರೂ, ಅವರ ಪ್ರವೇಶವು ಜಲದಲ್ಲಿ ಆಗಿರುವದಿಲ್ಲ. ಅದರಂತೆ ಶಿವನ ವಿಷಯವನ್ನು ತಿಳಿಯಬೇಕು. ವಸ್ತುತಃ ಅವನು ಎಲ್ಲವೂ ಆಗಿರುವನು. ಮತಭೇದವು ಅಜ್ಞಾನದಿಂದಾಗುವದು. ಯಾಕೆಂದರೆ ಜಗತ್ತಿನಲ್ಲಿ ಶಿವನಿಂದ ಭಿನ್ನವಾದ ಯಾವ ದ್ವೈತ ವಸ್ತುವಿನ ಸತ್ತೆಯೂ ಇರುವದಿಲ್ಲ. ಸಂಪೂರ್ಣದರ್ಶನಗಳಲ್ಲಿ ಮತಭೇದವಿರುವದಾದರೂ, ವೇದಾಂತಿಗಳು ನಿತ್ಯ ಅದ್ವೈತತತ್ವವನ್ನು ವರ್ಣನೆ ಮಾಡುವರು. ಜೀವವು ಪರಮಾತ್ಮಶಿವನ ಅಂಶವಾಗಿದೆ. ಆದರೆ ಅದು ಅವಿದ್ಯೆಯಿಂದ ಮೋಹಿತವಾಗಿರುವದರಿಂದ ಅವಶವಾಗಿ ಹೋಗಿದೆ; ಮತ್ತು ತನ್ನನ್ನು ಭಿನ್ನವೆಂದು ಭಾವಿಸಿಕೊಂಡಿದೆ. ಅವಿದ್ಯೆಯಿಂದ ಮುಕ್ತವಾದಾಗ ಜೀವವು ಶಿವನೇ ಆಗುವದು. ಶಿವನು ಎಲ್ಲವನ್ನೂ ವ್ಯಾಪಿಸಿರುವನು. ಸಂಪೂರ್ಣವಾಗಿ ಎಲ್ಲ ಪ್ರಾಣಿಗಳಲ್ಲಿಯೂ ಸ್ಥಿತನಾಗಿರುವನು. ಅವನು ಜಡ ಹಾಗೂ ಚೇತನಗಳ ಈಶ್ವರನಾಗಿ ಎಲ್ಲದರ ಕಲ್ಯಾಣ ಮಾಡುತ್ತಿರುವನು. ವ್ಯಾಪಕ ಅಗ್ನಿತತ್ವವು ಪ್ರತಿಯೊಂದು ಕಾಷ್ಟದಲ್ಲಿ ವಾಸವಾಗಿರುವದು. ಮಂಥನದಿಂದ ಅದು ಪ್ರಕಟವಾಗುವದು. ಅದರಂತೆ ವಿದ್ವಾಂಸನು ಸಾಧನಗಳ ಅನುಷ್ಠಾನ ಮಾಡಿದರೆ ಶಿವನ ದರ್ಶನವು ಅವಶ್ಯವಾಗಿ ಆಗುವದು. ಸರ್ವತ್ರವೂ ಶಿವನು ಇರುವನು. ಬೇರೆ ಏನೂ ಇಲ್ಲ. ಆ ಶಿವನೇ ಭ್ರಮೆಯಿಂದ ಬೇರೆ ಬೇರೆ ರೂಪಗಳಿಂದ ಸದಾ ಭಾಸಿತನಾಗುವನು.

ಸಮುದ್ರ, ಮೃತ್ತಿಕೆ, ಸುವರ್ಣ ಮೊದಲಾದವುಗಳು ಉಪಾಧಿ ಭೇದದಿಂದ ನಾನಾತ್ವವನ್ನು ಹೊಂದುವಂತೆ, ಭಗವಾನ್ ಶಂಕರನು ಉಪಾಧಿಗಳಿಂದ ಅನೇಕ ರೂಪಗಳಲ್ಲಿ ಭಾಸವಾಗುವನು. ಭ್ರಮೆಯಿಂದ ತುಂಬಿದ ಬುದ್ಧಿಗೆ ಈ ಭೇದವು ಪ್ರತೀತವಾಗುವದು. ಆ ಭ್ರಮೆಯು ದೂರವಾಯಿತೆಂದರೆ ಭೇದದ ನಿರಸನ ವಾಗುವದು. ಬೀಜದಿಂದ ಅಂಕುರವಾಗಿ ನಾನಾತ್ವವನ್ನು ಹೊಂದುವದು. ಕೊನೆಗೆ ಬೀಜರೂಪದಲ್ಲಿಯೇ ಸ್ಥಿತವಾಗುವದು. ಎಲ್ಲವೂ ಶಿವನಿರುವನು; ಶಿವನು ಎಲ್ಲವೂ ಇರುವನು. ಶಿವನಿಗೂ ಜಗತ್ತಿಗೂ ಭೇದವಿಲ್ಲ. ಸೂರ್ಯನು ಜಲಾದಿ ಉಪಾಧಿ ಗಳಿಂದ ಅನೇಕತ್ವ ಹೊಂದುವಂತೆ, ಶಿವನೂ ಉಪಾಧಿಗಳಿಂದ ಅನೇಕತ್ವ

ಹೊಂದುವನು. ಆಕಾಶವು ಸರ್ವತ್ರ ವ್ಯಾಪಿಸಿದ್ದರೂ ಸ್ಪರ್ಶಾದಿ ಬಂಧನಗಳಿಗೆ ಒಳಪಡುವದಿಲ್ಲ. ಆದರಂತೆ ಶಿವನು ಬಂಧನಕ್ಕೊಳಗಾಗುವದಿಲ್ಲ. ಅಹಂಕಾರ ದಿಂದ ಮುಕ್ತವಾದರೆ ಜೀವವು ಶಿವನಾಗುವದು. ಅಹಂಕಾರ ಮುಕ್ತವಾದ ನಿರ್ಮಲ ಬುದ್ಧಿಯ ಜೀವವು ಶಂಕರನ ಪ್ರಸಾದದಿಂದ ಶಿವರೂಪವಾಗುವದು. ಆಗ ಎಲ್ಲೆಡೆಗೂ ಶಂಭುವಿನ ಸಾಕ್ಷಾತ್ಕಾರವಾಗುವದು. ಆಗ ಅವನು ಜೀವನ್ಮುಕ್ತನೆನಿಸಿ ಕೊಳ್ಳುವನು. ಶರೀರವು ಪ್ರಾರಬ್ಧದ ಆಧೀನವಿರುವದು. ದೇಹಾಭಿಮಾನ ರಹಿತನಿಗೆ ಜ್ಞಾನಿಯೆಂದೆನ್ನುವರು. ಸುಖ–ದುಃಖಾದಿ ದ್ವಂದ್ವಗಳಲ್ಲಿ ಸಮಭಾವ ವುಳ್ಳವನು ಜ್ಞಾನಿಯೆಂದೆನಿಸಿಕೊಳ್ಳುವನು. ಶುಭಾಶುಭಗಳು ಅವನಿಗೆ ಒಂದೇ ಬಗೆಯಾಗಿ ತೋರುವವು.

ಶುಭಂ ಲಬ್ಧ್ವಾ ನ ಹೃಷ್ಯೇತ ಕುಪ್ಯೇಲ್ಲಬ್ಧ್ವಾ ಶುಭಂ ನ ಹಿ ।
ದ್ವಂದ್ವೇಷು ಸಮತಾ ಯಸ್ಯ ಜ್ಞಾನವಾನುಚ್ಯತೇ ಹಿ ಸಃ ॥

(ಶಿ. ಪು. ಕೋ. ರು. ಸಂ. ೪೩–೩೧)

ಶರೀರದಿಂದ ತಾನು ಬೇರೆಯೆಂಬ ಬೋಧವಾಗಬೇಕಾದರೆ ಆತ್ಮ ಚಿಂತನೆಯೂ ಹಾಗೂ ತತ್ವಗಳ ವಿವೇಕವಿಚಾರಗಳೂ ಅವಶ್ಯವಾಗಿವೆ. ಮುಮುಕ್ಷುವು ಶರೀರದ ಅಭಿಮಾನವನ್ನೂ ಅಹಂಕಾರವನ್ನೂ ತ್ಯಾಗ ಮಾಡಬೇಕು. ಅಂತಹ ಮನುಷ್ಯನು ಮುಕ್ತನಾಗಿ ಸದಾಶಿವನಲ್ಲಿ ವಿಲೀನನಾಗುವನು. ಅಧ್ಯಾತ್ಮ ಚಿಂತನೆಯೂ ಶಿವಭಕ್ತಿಯೂ ಜ್ಞಾನದ ಮೂಲ ಕಾರಣಗಳಾಗಿವೆ. ಭಕ್ತಿಯಿಂದ ಸಾಧನವಿಷಯಕ ಪ್ರೇಮದ ಉಪಲಬ್ಧಿಯಾಗುವದು. ಪ್ರೇಮದಿಂದ ಶ್ರವಣ ವಾಗುವದು. ಶ್ರವಣದಿಂದ ಸತ್ಸಂಗವಾಗುವದು. ಸತ್ಸಂಗದಿಂದ ಜ್ಞಾನಿ ಗುರುವಿನ ಉಪಲಬ್ಧಿಯಾಗುವದು. ಗುರುಕೃಪೆಯಿಂದ ಜ್ಞಾನವು ಪ್ರಾಪ್ತವಾದ ಬಳಿಕ ಆ ಪುರುಷನು ನಿಶ್ಚಯವಾಗಿ ಮುಕ್ತನಾಗುವನು. ಆದುದರಿಂದ ಮನುಷ್ಯನು ಸದಾ ಶಂಭುವಿನ ಭಜನೆ ಮಾಡಿ ಸಾಧನ ವಿಷಯಕ ಪ್ರೇಮದ ಉಪಲಬ್ಧಿ ಮಾಡಿಕೊಳ್ಳ ಬೇಕು.

ಶೌನಕಾದಿ ಋಷಿಗಳು–ವ್ಯಾಸಶಿಷ್ಯನೆ, ಶಿವತತ್ವ ಸಂಬಂಧವಾದ ಉತ್ತಮ ಜ್ಞಾನದ ಶ್ರವಣ ಮಾಡಿಸಿದೆ. ನಮ್ಮ ಭ್ರಾಂತಿಯು ನಿರಸನ ಹೊಂದಿತು.

ಸೂತಪುರಾಣಿಕ-ಮಹರ್ಷಿಗಳೆ, ವ್ಯಾಸಮಹರ್ಷಿಯು ಇತಿಹಾಸ, ಪುರಾಣ, ವೇದ, ಶಾಸ್ತ್ರ ಮೊದಲಾದವುಗಳ ಬಗ್ಗೆ ವಿಚಾರ ಮಾಡಿ ಅವುಗಳ ಸಾರವನ್ನು ನನಗೆ ಉಪದೇಶ ಮಾಡಿದನು. ಅದನ್ನು ಶ್ರವಣ ಮಾಡುವದರಿಂದ ಎಲ್ಲ ಪಾಪಗಳು ಭಸ್ಮವಾಗಿ ಹೋಗುವವು. ಅವನಿಗೆ ಉತ್ತಮ ಗತಿಯು ಪ್ರಾಪ್ತ ವಾಗುವದು. ಶಿವ ವಿಜ್ಞಾನವು ಭಗವಾನ್ ಶಂಕರನಿಗೆ ಪ್ರಿಯವಾದದ್ದಾಗಿದೆ. ಅದು ಭೋಗ, ಮೋಕ್ಷಗಳನ್ನು ದೊರಕಿಸಿಕೊಡುವಂಥದೂ ಶಿವಭಕ್ತಿಯನ್ನೂ ವರ್ಧಿಸು ವಂತಹದೂ ಆಗಿರುವದು. ಇದು ಪರಮ ಪುಣ್ಯಮಯ ಸಂಹಿತೆಯಾಗಿರುವದು.

ಕೋಟಿ ರುದ್ರ ಸಂಹಿತಾ ಸಂಪೂರ್ಣ

# ಉಮಾ ಸಂಹಿತಾ

ಯೋ ಧತ್ತೇ ಭುವನಾನಿ ಸಪ್ತ ಗುಣವಾನ್ ಸೃಷ್ಟ್ವಾ ರಜಃ ಸಂಶ್ರಯಃ।
ಸಂಹರ್ತಾ ತಮಸಾನ್ವಿತೋ ಗುಣವತೀಂ ಮಾಯಾಮತೀತ್ಯ ಸ್ಥಿತಃ ॥
ಸತ್ಯಾನಂದಮನಂತಬೋಧಮಮಲಂ ಬ್ರಹ್ಮಾದಿಸಂಜ್ಞಾಸ್ಪದಂ ।
ನಿತ್ಯಂ ಸತ್ವಸಮನ್ವಯಾದಧಿಗತಂ ಪೂರ್ಣಂ ಶಿವಂ ಧೀಮಹಿ ॥

ರಜೋಗುಣದ ಆಶ್ರಯಹೊಂದಿ ಸಂಸಾರದ ಸೃಷ್ಟಿ ಮಾಡಿದರೆ, ಸತ್ವ ಗುಣದಿಂದ ಸಂಪನ್ನವಾಗಿ ಸಪ್ತ ಲೋಕಗಳ ಧಾರಣ ಪೋಷಣ ಮಾಡುವನು. ತಮೋಗುಣಯುಕ್ತವಾದರೆ ಸರ್ವಸ್ವವೂ ಲಯವಾಗುವದು; ಹಾಗೂ ತ್ರಿಗುಣ ಮಾಯೆಯನ್ನು ಕಟ್ಟಿ ತನ್ನ ಶುದ್ಧ ಸ್ವರೂಪದಲ್ಲಿ ಸ್ಥಿತವಾದರೆ, ಸತ್ಯಾನಂದ ಸ್ವರೂಪವೂ ಅನಂತ ಬೋಧಮಯವೂ ಆದ ಪೂರ್ಣಬ್ರಹ್ಮ ಶಿವನನ್ನು ನಾವು ಧ್ಯಾನ ಮಾಡುವೆವು. ಆ ಪರಬ್ರಹ್ಮನು ಸೃಷ್ಟಿ ಕಾಲದಲ್ಲಿ ಬ್ರಹ್ಮದೇವನೂ ಪಾಲನೆ ಮಾಡುವಾಗ ವಿಷ್ಣುವೂ ಸಂಹಾರಕಾಲದಲ್ಲಿ ರುದ್ರನೂ ಆಗಿ ಸದಾ ಸಾತ್ವಿಕ ಭಾವದಿಂದ ನಮಗೆ ಪ್ರಾಪ್ತನಾಗುವನು.

ಶೌನಕಾದಿ ಋಷಿಗಳು-ಸೂತಪುರಾಣಿಕನೆ, ಕೋಟಿ ರುದ್ರಸಂಹಿತೆ ಯನ್ನು ನಮಗೆ ಉಪದೇಶ ಮಾಡಿದೆ. ಇನ್ನು ಉಮಾಸಂಹಿತೆಯನ್ನು ವಿವರಸಬೇಕು.

ಸೂತಪುರಾಣಿಕ–ಶೌನಕಾದಿ ಮುನಿಗಳೆ, ಪೂರ್ವ ಕಾಲದಲ್ಲಿ ಸನತ್ಕು ಮಾರನಿಗೆ ವ್ಯಾಸ ಮಹರ್ಷಿಯು ಉಮಾಸಂಹಿತೆಯನ್ನು ಹೇಳಿದನು. ನಾನು ನಿಮಗೆ ಅದನ್ನು ತಿಳಿಸುವೆನು. ಶ್ರೀಕೃಷ್ಣನು ಪುತ್ರಪ್ರಾಪ್ತಿಗಾಗಿ ಹಿಮಾಲಯದಲ್ಲಿ ತಪಶ್ಚರ್ಯ ಮಾಡಿದನು. ಆಗ ಭವನು ಅವನಿಗೆ ವರದಾನ ಮಾಡಿದನು.

ಶಿವ–ಯಾದವೇಂದ್ರಾ, ನಿನ್ನ ಮನೋರಥವು ಸಿದ್ಧಿಸುವದು. ನಿನಗೆ ಸಾಂಬನೆಂಬ ಮಹಾ ಬಲಾಢ್ಯನಾದ ಪುತ್ರನು ಉತ್ಪನ್ನನಾಗುವನು. ಒಂದು ಸಮಯದಲ್ಲಿ ಮುನಿಗಳು ಸಂವರ್ತಕ ಸೂರ್ಯನಿಗೆ ಮನುಷ್ಯಯೋನಿಯಲ್ಲಿ ಜನಿಸುವಂತೆ ಶಾಪ ಕೊಟ್ಟರು. ಆ ಸಂವರ್ತಕ ಸೂರ್ಯನೇ ನಿನ್ನ ಪುತ್ರನಾಗುವನು. ನೀನು ಯಾವ ಯಾವುದನ್ನು ಅಪೇಕ್ಷಿಸುವೆಯೋ ಅವೆಲ್ಲವೂ ನಿನಗೆ ದೊರೆಯುವವು.

ಪಾರ್ವತಿ–ವಸುದೇವನಂದನ ಶ್ರೀಕೃಷ್ಣಾ, ನಾನು ನಿನ್ನ ತಪಸ್ಸಿಗೆ ಸಂತುಷ್ಟಳಾಗಿರುವೆನು. ಭೂತಳದಲ್ಲಿ ದುರ್ಲಭವಾಗಿರುವ ಬೇಕಾದ ವರಗಳನ್ನು ಕೇಳು.

ಶ್ರೀಕೃಷ್ಣ–ದೇವಿ, ನೀನು ನನ್ನ ಸತ್ಯತಪಕ್ಕಾಗಿ ಸಂತುಷ್ಟಳಾಗಿದ್ದರೆ ಬ್ರಾಹ್ಮಣರ ಬಗ್ಗೆ ದ್ವೇಷವು ಉತ್ಪನ್ನವಾಗದಂತೆ ವರವನ್ನು ಕೊಡು. ನನ್ನ ಮಾತಾ ಪಿತೃಗಳು ನನ್ನ ಬಗ್ಗೆ ಸಂತುಷ್ಟರಾಗಿರಬೇಕು. ಎಲ್ಲ ಪ್ರಾಣಿಗಳ ಬಗ್ಗೆಯೂ ನನ್ನಲ್ಲಿ ದಯಾಭಾವವು ನೆಲೆಗೊಳ್ಳುವಂತೆ ಆಶೀರ್ವದಿಸಬೇಕು. ಭಗವಾನ್ ಶಿವನ ಹಾಗೂ ನಿನ್ನ ಕುಮಾರ ಗಣೇಶ–ಕಾರ್ತಿಕೇಯರ ದರ್ಶನದ ಫಲವಾಗಿ ನನ್ನ ಸಂತತಿಯು ಶ್ರೇಷ್ಠತರದ್ದಾಗಬೇಕು. ಇಂದ್ರಾದಿ ದೇವತೆಗಳು ಸಂತೃಪ್ತರಾಗುವಂತೆ ನನ್ನಿಂದ ಯಜ್ಞ–ಯಾಗಗಳು ನಡೆಯುವಂತೆ ಅನುಗ್ರಹ ಮಾಡಬೇಕು. ಸಾಧು ಸನ್ಯಾಸಿ ಗಳಿಗೂ ಅತಿಥಿಗಳಿಗೂ ನನ್ನ ಮನೆಯಲ್ಲಿ ಪವಿತ್ರವಾದ ಅನ್ನವು ಯಾವಾಗಲೂ ದೊರೆಯುವಂತಾಗಬೇಕು. ಬಂಧು–ಬಾಂಧವರೊಡನೆ ನಾನು ನಿತ್ಯವೂ ಪ್ರೇಮ ದಿಂದ ಇರುವಂತಾಗಬೇಕು. ಅವರು ಯಾವಾಗಲೂ ನನ್ನೊಡನೆ ಸಂತುಷ್ಟಿಯಿಂದ ನಡೆದುಕೊಳ್ಳಬೇಕು. ಇಷ್ಟೇ ನನ್ನ ಅಪೇಕ್ಷೆ.

ಶ್ರೀಕೃಷ್ಣನಿಗೆ ಶಿವನೂ ಪಾರ್ವತಿದೇವಿಯೂ ವರಪ್ರದಾನ ಮಾಡಿ ಅಂತರ್ಧಾನರಾದರು.

# ಮಹಾ ಪಾತಕಗಳು, ನರಕಗಳು

ಸೂತಪುರಾಣಿಕ–ಸನತ್ಕುಮಾರನು ವ್ಯಾಸಮಹರ್ಷಿಗಳಿಗೆ ತಿಳಿಸಿದ ಪಾತಕಗಳ ಬಗ್ಗೆ ತಿಳಿಸುವೆನು, ಕೇಳಬೇಕು. ಪರಸ್ತ್ರೀಯನ್ನು ಪ್ರಾಪ್ತಮಾಡಿಕೊಳ್ಳುವ ಸಂಕಲ್ಪ, ಪರಧನವನ್ನು ಅಪಹರಣ ಮಾಡುವ ಇಚ್ಛೆ, ಮನಸ್ಸಿನಿಂದ ಅನಿಷ್ಟ ಚಿಂತನ ಮಾಡುವದು, ನಿಷಿದ್ಧ ಕರ್ಮಗಳಲ್ಲಿ ಪ್ರವೃತ್ತನಾಗುವದು ಇವು ನಾಲ್ಕು ಪ್ರಕಾರದ ಮಾನಸಿಕ ಪಾಪಕರ್ಮಗಳು. ಅಸಂಗತ ಪ್ರಲಾಪ, ಅಸತ್ಯ ಭಾಷಣ, ಅಪ್ರಿಯವಾಗಿ ಮಾತಾಡುವದು, ಹಿಂದೆ ಚಾಡಿ ಹೇಳುವದು ಇವು ನಾಲ್ಕು ಬಗೆಯ ವಾಚಿಕ ಪಾಪ ಕರ್ಮಗಳು. ಅಭಕ್ಷ್ಯ ಭಕ್ಷಣ, ಹಿಂಸೆ, ವ್ಯರ್ಥಕಾರ್ಯಗಳಲ್ಲಿ ಪ್ರವೃತ್ತಿ, ಪರಧನವನ್ನು ಮುಳುಗಿಸುವದು ಇವು ನಾಲ್ಕು ಶಾರೀರಿಕ ಪಾಪಕರ್ಮಗಳು. ಸಂಸಾರ ಸಾಗರದಿಂದ ಪಾರು ಮಾಡುವ ಮಹಾದೇವನನ್ನು ದ್ವೇಷಿಸುವವರು ನರಕ ಭಾಜನರಾಗುವರು. ಶಿವಜ್ಞಾನವನ್ನು ಉಪದೇಶಿಸುವ ಗುರುಗಳನ್ನೂ, ಮಾತಾ ಪಿತೃಗಳನ್ನೂ ನಿಂದೆ ಮಾಡುವವನು ನರಕದಲ್ಲಿ ಬೀಳುವನು. ಬ್ರಹ್ಮ ಹತ್ಯಾಕಾರಿಯೂ, ಮದಿರಾಪಾನ ಮಾಡುವವನೂ, ಸುವರ್ಣ ಚೋರನೂ, ಗುರು ಪತ್ನಿಯ ಗಮನ ಮಾಡುವವನೂ, ಇವರೊಡನೆ ಸಂಪರ್ಕವಿರಿಸಿಕೊಂಡವನೂ ಮಹಾಪಾತಕಿಗಳೆನಿಸಿಕೊಳ್ಳುವರು.

ಕ್ರೋಧ, ಭಯ, ದ್ವೇಷಗಳಿಂದಾಗಿ ಬ್ರಾಹ್ಮಣವಧೆಯ ಬಗ್ಗೆ, ಮರ್ಮಭೇದಿ ದೋಷಗಳ ವರ್ಣನೆ ಮಾಡುವವನು ಬ್ರಹ್ಮಘಾತಕಿಯೆನಿಸುವನು. ಬ್ರಾಹ್ಮಣರಿಗೆ ದಾನ ಮಾಡಿದ ವಸ್ತುಗಳನ್ನು ಅಪಹರಿಸುವವನು ಬ್ರಹ್ಮಹತ್ಯಾಕಾರಿ ಯಾಗುವನು. ನಿರ್ದೋಷಿಯ ಮೇಲೆ ದೋಷಾರೋಪಣ ಮಾಡುವವನು ಬ್ರಹ್ಮಹತ್ಯೆಯ ಪಾಪಕ್ಕೆ ಭಾಗಿಯಾಗುವನು. ದ್ವಿಜನನ್ನು ಅವಮಾನಗೊಳಿಸಿ ಅವನ ತೇಜೋವಧೆ ಮಾಡುವವನು ಬ್ರಹ್ಮಹತ್ಯಾ ದೋಷಕ್ಕೆ ಪಾತ್ರನಾಗುವನು. ದೇವತೆಗಳ ಹಾಗೂ ಬ್ರಾಹ್ಮಣರ ಮತ್ತು ಗೋವುಗಳ ಉಪಯೋಗಕ್ಕಾಗಿ ಕೊಟ್ಟ ಭೂಮಿಯನ್ನು ಅಪಹರಿಸುವವನು ಬ್ರಹ್ಮಹತ್ಯಾದೋಷವನ್ನು ಹೊಂದುವನು. ಅಭಕ್ಷ್ಯ ಭಕ್ಷಣ ಮಾಡುವವನು ಬ್ರಹ್ಮಹತ್ಯೆಯ ದೋಷಕ್ಕೆ ಪಾತ್ರನಾಗುವನು. ವನಗಳಿಗೆ, ಊರುಗಳಿಗೆ ಬೆಂಕಿ ಹಚ್ಚುವವನು ಬ್ರಹ್ಮಹತ್ಯೆಗೆ ಸಮಾನ ದೋಷಕ್ಕೆ ಪಾತ್ರನಾಗುವನು.

ಬ್ರಾಹ್ಮಣನ ದ್ರವ್ಯವನ್ನು ಅಪಹರಿಸುವವನೂ, ಪೈತೃಕ ಸಂಪತ್ತಿನಲ್ಲಿ ವಂಚನೆ ಮಾಡುವವನೂ, ಪಾಖಂಡತೆಯನ್ನು ಪ್ರಚಾರ ಮಾಡುವವನೂ, ಕೃತಘ್ನನೂ, ಅತ್ಯಂತ ವಿಷಯಾಸಕ್ತನೂ, ಸತ್ಪುರುಷರಿಗೆ ಅಪಾಯ ಮಾಡುವವನೂ, ಶ್ರೇಷ್ಠಕುಲದ ಕನ್ಯೆಯನ್ನು ಕಲಂಕಿತಗೊಳಿಸುವವನೂ, ತರುಣ–ತರುಣಿಯರನ್ನು ವಿಕ್ರಯಿಸುವವನೂ, ಸ್ತ್ರೀಧನದಿಂದ ಉಪಜೀವನ ಮಾಡುವವನೂ, ಸ್ತ್ರೀಯರಿಗೆ ಅತ್ಯಂತ ವಶೀಭೂತನಾಗಿ ಅವರನ್ನು ಸೇವಿಸುವವನೂ, ಬ್ರಹ್ಮಚರ್ಯಾದಿ ವ್ರತಗಳನ್ನು ತ್ಯಾಗ ಮಾಡುವವನೂ ಉಪಪಾತಕಿಗಳೆನಿಸುವರು.

ಯಾವನು ಬ್ರಾಹ್ಮಣರಿಗೆ ದುಃಖ ಕೊಡುವನೋ, ಅವನನ್ನು ವಧಿಸಲು ಶಸ್ತ್ರವನ್ನೆತ್ತುವನೋ, ದ್ವಿಜನಾದವನು ಶೂದ್ರರನ್ನು ಸೇವಿಸುವನೋ, ಸ್ತ್ರೀ ಪುತ್ರರನ್ನೂ ವೃದ್ಧರನ್ನೂ ಉಪವಾಸವಿರಿಸಿ ತಾನು ಭೋಜನ ಮಾಡುವನೋ, ಸನ್ಯಾಸ ಗ್ರಹಣ ಮಾಡಿ ಮರಳಿ ಸಂಸಾರಿಯಾಗುವನೋ, ಶಿವಲಿಂಗವನ್ನು ಯಾವನು ಭೇದಿಸುವನೋ ಅವನು ನರಕಗಾಮಿಯಾಗುವನು. ಔಚಿತ್ಯದ ಸೀಮೆಯನ್ನು ಉಲ್ಲಂಘಿಸಿ ಮನಸ್ವಿಯಾಗಿ ಕರವನ್ನೆತ್ತುವ, ಮಿತಿಮೀರಿ ದಂಡವಿಧಿಸುವ ರಾಜನು ನರಕಭಾಗಿಯಾಗುವನು. ಸಾಧುಗಳನ್ನು ಚೋರರೆಂದೂ, ಚೋರರನ್ನು ಸಾಧುಗಳೆಂದೂ ತಿಳಿಯುವವನು ಪಾತಕಿಯಾಗುವನು. ನಿರಪರಾಧಿಗೆ ಪ್ರಾಣ ದಂಡನೆ ವಿಧಿಸುವ ರಾಜನು ನರಕಗಾಮಿಯಾಗುವನು. ಪಾತಕಗಳು ಪ್ರಾಯಶ್ಚಿತ್ತ ಹೊಂದದಿದ್ದರೆ ಜನ್ಮ ಜನ್ಮಾಂತರಗಳಲ್ಲಿಯೂ ಅದು ನಾಶವಾಗುವದಿಲ್ಲ. ಪಾತಕಿಗೆ ಯಮದಂಡನೆಯು ವಿಧಿಸಲ್ಪಡುವದು. ಪಾಪಿಯು ನರಕಯಾತನೆಯನ್ನು ಅನುಭವಿಸದೆ ಬಿಡುಗಡೆಯಾಗುವದಿಲ್ಲ. ನರಕಗಳು ಇಪ್ಪತ್ತೆಂಟು ಇದ್ದು ಪ್ರತಿಯೊಂದಕ್ಕೂ ಐದು ಐದು ನರಕಗಳು ಹೇಳಲ್ಪಟ್ಟಿವೆ. ಒಟ್ಟು ಒಂದು ನೂರಾ ನಾಲ್ವತ್ತು ಕೂಡಿ ನರಕ ಮಹಾಮಂಡಲವೆನಿಸುವವು. ಪಾಪಿಜೀವಿಗಳು ಈ ಭಯಂಕರವಾದ ಪೀಡಾದಾಯಕ ನರಕದಲ್ಲಿ ಭೀಷಣ ಯಾತನೆಗಳನ್ನು ಅನುಭವಿಸ ಬೇಕಾಗುವದು. ವಿಭಿನ್ನ ಪಾತಕಗಳಿಗಾಗಿ ವಿಭಿನ್ನ ನರಕಗಳನ್ನನುಭವಿಸಬೇಕಾಗು ವದು.

# ಪುಣ್ಯಕರ್ಮಗಳ ಫಲ

ಪುಣ್ಯಕರ್ಮಗಳನ್ನು ಮಾಡುವವನು ಸುಖಪೂರ್ವಕವಾಗಿ ಯಮಲೋಕ ಯಾತ್ರೆ ಮಾಡುವನು. ಅವನು ಸ್ವರ್ಗದಲ್ಲಿ ಅನೇಕ ಸುಖೋಪಭೋಗಗಳನ್ನು ಅನುಭವಿಸುವನು. ಅನ್ನದಾನ, ಜಲದಾನ, ಜಲಾಶಯ ನಿರ್ಮಾಣ ಮೊದಲಾದವುಗಳಿಂದ ಪುಣ್ಯವು ಲಭಿಸುವುದು. ಅನ್ನದಾನಕ್ಕಿಂತ ಹೆಚ್ಚಿನ ದಾನವಿಲ್ಲ. ಅನ್ನದಾನವು ತತ್ಕಾಲ ತೃಪ್ತಿದಾಯಕವೂ, ತತ್ಕಾಲ ಪುಣ್ಯಪ್ರದವೂ ಆಗಿರುವುದು. ಅನ್ನದಿಂದ ಪ್ರಾಣಿಗಳ ಪ್ರಾಣರಕ್ಷಣೆಯಾಗುವುದು, ಅನ್ನವಿಲ್ಲದೆ ಹೋದರೆ ಪ್ರಾಣನಾಶವಾಗುವುದು. ಆದುದರಿಂದ ಅನ್ನದಾನವು ಬಹಳವಾಗಿ ಪ್ರಶಂಸಿಸಲ್ಪಟ್ಟಿದೆ.

ಸರ್ವೇಷಾಮೇವ ದಾನಾನಾಮನ್ನದಾನಂ ಪರಂ ಸ್ಮೃತಂ ।
ಸ ಚ ಪ್ರೀತಿಕರಂ ಹೃದ್ಯಂ ಬಲಬುದ್ಧಿವಿವರ್ಧನಂ ॥
ನಾನ್ನದಾನಸಮಂ ದಾನಂ ವಿದ್ಯತೇ ಮುನಿಸತ್ತಮ ।
ಅನ್ನಾದ್ಭವಂತಿ ಭೂತಾನಿ ತದಭಾವೇ ಮ್ರಿಯಂತಿ ಚ ॥
ಅತ ಏವ ಮಹತ್ಪುಣ್ಯಮನ್ನದಾನೇ ಪ್ರಕೀರ್ತಿತಂ ।
ತಥಾ ಕ್ಷುಧಾಗ್ನಿ ನಾತಪ್ತಾ ಮ್ರಿಯಂತೇ ಸರ್ವದೇಹಿನಃ ॥
ಅನ್ನಮೇವ ಪ್ರಶಂಸಂತಿ ಸರ್ವಮನ್ನೇ ಪ್ರತಿಷ್ಠಿತಂ ।
ಅನ್ನೇನ ಸದೃಶಂ ದಾನಂ ನ ಭೂಯೋ ನ ಭವಿಷ್ಯತಿ ॥
ಅನ್ನೇನ ಧಾರ್ಯತೇ ಸರ್ವಯಂ ವಿಶ್ವಂ ಜಗದಿದಂ ಮುನೇ ।
ಅನ್ನಮೂರ್ಜಸ್ಕರಂ ಲೋಕೇ ಪ್ರಾಣಾ ಹ್ಯನ್ನೇ ಪ್ರತಿಷ್ಠಿತಾಃ ॥

(ಶಿ. ಪು. ಉ. ಸಂ. ೧೧, ೧೭-೧೮-೨೪-೨೯-೩೦)

ಬ್ರಹ್ಮನ ಮಾನಸಪುತ್ರನಾದ ಸನತ್ಕುಮಾರನು ವ್ಯಾಸಮುನಿಗೆ ಈ ಪ್ರಕಾರವಾಗಿ ಅನ್ನದಾನದ ಮಹಿಮೆಯನ್ನು ವಿವರಿಸಿದನು. ಅನ್ನದಲ್ಲಿ ಪ್ರಾಣವು ಪ್ರತಿಷ್ಠಿತವಾಗಿದೆ. ಅನ್ನವನ್ನು ಎಂದೂ ನಿಂದಿಸಬಾರದು. ಅನ್ನವು ಸಾಕ್ಷಾತ್ ಬ್ರಹ್ಮ ವಿಷ್ಣು ಹಾಗೂ ಶಿವನಿದ್ದಂತೆ. ಅನ್ನವನ್ನು ಕೊಡುವಾಗ ಗೋತ್ರ, ಶಾಖೆ, ಸ್ವಾಧ್ಯಾಯ, ದೇಶ, ಜಾತಿಗಳನ್ನು ವಿಚಾರಿಸಬಾರದು.

ಅನ್ನದಾನದಂತೆ ಜಲದಾನವೂ ಶ್ರೇಷ್ಠವಾಗಿರುವದು. ಜಲವೂ ಅನ್ನದಂತೆ ಜೀವನವಾಗಿರುವದು. ಪಾನೀಯದಾನದಲ್ಲಿ ಉರುತರವಾದ ಫಲವಿರುವದು. ಆದುದರಿಂದ ಧರ್ಮವಂತರು ವಾಪಿ, ಕೂಪ, ತಟಾಕಗಳನ್ನು ನಿರ್ಮಾಣ ಮಾಡುವರು. ಜಲಾಶಯಗಳಲ್ಲಿ ಗೋ-ಬ್ರಾಹ್ಮಣರೂ, ಸಾಧು ಪುರುಷರೂ, ಸಮಸ್ತ ಪ್ರಾಣಿಗಳೂ ಜಲಪಾನ ಮಾಡಿ ತೃಪ್ತರಾಗುವದರಿಂದ ಆ ಪುಣ್ಯಪುರುಷನ ವಂಶವು ಉದ್ಧಾರವಾಗುವದು.

ಸತ್ಯವೂ ಪರಬ್ರಹ್ಮವಾಗಿದೆ; ಸತ್ಯವು ಪರಮ ತಪವು; ಸತ್ಯವು ಶ್ರೇಷ್ಠ ಯಜ್ಞವು; ಸತ್ಯವು ಉತ್ಕೃಷ್ಟ ಶಾಸ್ತ್ರಜ್ಞಾನವು; ನಿದ್ರಿಸುವ ಪುರುಷನಲ್ಲಿ ಸತ್ಯವು ಎಚ್ಚರವಾಗಿರುವದು; ಸತ್ಯವು ಪರಮಪದವು. ಸತ್ಯದಿಂದ ಪೃಥ್ವಿಯು ಸ್ಥಿರವಾಗಿರುವದು, ಸತ್ಯದಲ್ಲಿ ಎಲ್ಲವೂ ಪ್ರತಿಷ್ಠಿತವಾಗಿರುವದು. ತಪ, ಯಜ್ಞ, ಪುಣ್ಯ ದೇವತೆಗಳು, ಋಷಿಗಳು, ಪಿತೃಪೂಜನ, ಜಲ, ವಿದ್ಯೆ ಇವೆಲ್ಲವುಗಳಿಗೂ ಸತ್ಯವೇ ಆಧಾರವಾಗಿದೆ. ಸತ್ಯವು ಯಜ್ಞ, ತಪ, ದಾನ, ಮಂತ್ರ, ಸರಸ್ವತಿದೇವಿ, ಬ್ರಹ್ಮಚರ್ಯೆ, ಎಲ್ಲವೂ ಆಗಿದೆ. ಓಂಕಾರವು ಸತ್ಯರೂಪವಾಗಿದೆ. ಸತ್ಯದಿಂದ ವಾಯುವು ಸಂಚಾರ ಮಾಡುವದು, ಸತ್ಯದಿಂದ ಸೂರ್ಯನು ಪ್ರಕಾಶಿಸುವನು. ಸತ್ಯದಿಂದ ಅಗ್ನಿಯು ದಹಿಸುವದು. ಸತ್ಯದಿಂದ ಸ್ವರ್ಗವು ನೆಲೆಗೊಂಡಿರುವದು. ಲೋಕದಲ್ಲಿ ಸಂಪೂರ್ಣ ವೇದಗಳ ಪಾಲನೆಯೂ, ತೀರ್ಥಸ್ನಾನವೂ ಸತ್ಯದಿಂದಲೇ ಸುಲಭವಾಗುವವು. ಹಲವು ಅಶ್ವಮೇಧಗಳಿಗಿಂತಲೂ ಸತ್ಯವು ಘನತರವಾದದ್ದಿರುವದು. ಸತ್ಯದಿಂದಲೇ ದೇವತೆಗಳೂ ಪಿತೃಗಳೂ ಪ್ರಸನ್ನರಾಗುವರು. ಸತ್ಯವು ಪರಮ ಧರ್ಮವಾಗಿದೆ; ಪರಮ ಪದವಾಗಿದೆ. ಸತ್ಯಕ್ಕೇ ಪರಬ್ರಹ್ಮ ಪರಮಾತ್ಮನೆನ್ನುವರು. ಸತ್ಯಧರ್ಮದಲ್ಲಿ ಅನುರಕ್ತರಾದ ಸಿದ್ಧ ಪುರುಷರು ಸತ್ಯದಿಂದ ಸ್ವರ್ಗದಲ್ಲಿ ನೆಲೆಗೊಂಡಿರುವರು.

ಮುನಿಗಳೆ, ಈ ಸಂಸಾರದಲ್ಲಿ ತಪೋಬಲವು ಅದ್ಭುತವಾದದ್ದಿರುವುದು. ತಪದ ಹೊರತು ಯಾವ ಸುಖವೂ ಸುಲಭವಾಗುವುದಿಲ್ಲ. ತಪದಿಂದಲೇ ಎಲ್ಲ ಸುಖಗಳೂ ಸಾಧ್ಯವಾಗುವವು. ತಪಸ್ಸಿನಿಂದಲೇ ಎಲ್ಲ ಸುಖಗಳೂ ದೊರೆಯುವವೆಂಬುದನ್ನು ಎಲ್ಲ ವೇದವಿದರೂ ತಿಳಿದಿರುವರು. ಜ್ಞಾನ, ವಿಜ್ಞಾನ, ಆರೋಗ್ಯ ಸೌಂದರ್ಯ, ಸೌಭಾಗ್ಯ, ಶಾಶ್ವತಸುಖ ಮೊದಲಾದವುಗಳು ತಪಸ್ಸಿನಿಂದಲೇ ಪ್ರಾಪ್ತವಾಗುವವು. ತಪಸ್ಸಿನಿಂದ ಬ್ರಹ್ಮನು ಪರಿಶ್ರಮವಿಲ್ಲದೆ ವಿಶ್ವವನ್ನು

ಸೃಷ್ಟಿಸುವನು. ತಪದಿಂದಲೇ ವಿಷ್ಣುವು ಅದನ್ನು ಪರಿಪಾಲಿಸುವನು. ತಪಸ್ಸಿನಿಂದಲೇ ರುದ್ರನು ಅದನ್ನು ಸಂಹರಿಸುವನು. ತಪದ ಪ್ರಭಾವದಿಂದ ಶೇಷನು ಭೂಮಂಡಲ ವನ್ನು ಧಾರಣ ಮಾಡಿರುವನು.

ಮುನಿಗಳೆ, ವನದಲ್ಲಿ ವನ್ಯಫಲ-ಮೂಲಗಳನ್ನು ಭಕ್ಷಿಸಿ ತಪಾಚರಣೆ ಮಾಡುವವನ ಹಾಗೂ ವೇದಗಳ ಸ್ವಾಧ್ಯಾಯ ಮಾಡುವವನ ಫಲಗಳು ಸಮಾನವಾಗಿರುವವು. ಸೂರ್ಯ-ಚಂದ್ರರಿಲ್ಲದೆ ಹೋದರೆ ಅಂಧಕಾರವು ನಾಶವಾಗದಿರುವಂತೆ ಪುರಾಣಗಳ ಶ್ರವಣವಿಲ್ಲದಿದ್ದರೆ ಅಜ್ಞಾನಾಂಧಕಾರವು ನಷ್ಟವಾಗುವುದಿಲ್ಲ. ಅಜ್ಞಾನಾಂಧಕಾರದಲ್ಲಿ ಸಂತಪ್ತರಾಗುತ್ತಿರುವ ಜನರಿಗೆ ಶಾಸ್ತ್ರ ಜ್ಞಾನವನ್ನು ತಿಳಿಸುವ ಪುರಾಣ ವಕ್ತಾರನು ಪೂಜನೀಯನಾಗಿರುವನು.

ಶಿವಕಥೆಯನ್ನು ಕೇಳುವ ಮನುಷ್ಯನು ಸಂಸಾರಸಾಗರವನ್ನು ಸುರಕ್ಷಿತವಾಗಿ ದಾಟುವನು. ಅವನು ಎಂದೂ ದುರ್ಗತಿಯನ್ನು ಹೊಂದುವುದಿಲ್ಲ. ದಾನ ಧರ್ಮಗಳನ್ನು ಮಾಡುವ ಹಾಗೂ ಯಜ್ಞಕಾರ್ಯಗಳನ್ನು ಮಾಡುವ ಮನುಷ್ಯನು ಯಾವ ಫಲಗಳನ್ನು ಹೊಂದುವನೋ ಅಂತಹ ಫಲಗಳನ್ನು ಅವನು ಶಿವ ಕಥಾಶ್ರವಣದಿಂದ ಹೊಂದುವನು. ಶಿವಪುರಾಣ ಶ್ರವಣವೂ, ಶಿವನಾಮ ಸಂಕೀರ್ತನವೂ ಕಲ್ಪವೃಕ್ಷದಂತೆ ರಮಣೀಯ ಫಲಗಳನ್ನು ಕೊಡುವವು.

ಪ್ರತಿದಿನವೂ ಸತ್ಪಾತ್ರದಾನ ಮಾಡಬೇಕು. ದಾನದಿಂದ ದಾತಾರನು ಉದ್ಧಾರ ಹೊಂದುವನು. ಸುವರ್ಣದಾನ, ಗೋದಾನ, ಭೂದಾನಗಳು ಪವಿತ್ರ ದಾನಗಳಾಗಿವೆ. ವಿದ್ಯಾದಾನವು ಇವೆಲ್ಲವುಗಳಿಗಿಂತ ಉತ್ತಮದಾನವಾಗಿದೆ. ಗೋದಾನ, ಭೂದಾನ ವಸ್ತ್ರದಾನ, ಅನ್ನದಾನ, ಜಲದಾನ ಧನದಾನ ಮೊದಲಾದವುಗಳು ಯಾಚಕರನ್ನು ತೃಪ್ತಿಪಡಿಸುವುದರಿಂದ ದಾತಾರನು ಉದ್ಧಾರ ಹೊಂದುವನು. ತುಲಾದಾನದ ಫಲವು ಅಮೋಘವಾಗಿದೆ. ಈ ದಾನದಿಂದ ಮನುಷ್ಯನ ಪಾಪಗಳು ನಾಶವಾಗುವವು.

## ಮೃತ್ಯುಕಾಲನು, ಮೃತ್ಯುಂಜಯನು

ಸೂತಪುರಾಣಿಕ-ವ್ಯಾಸಮುನಿಯು ವಿಚಾರಿಸಿದ್ದರಿಂದ ಸನತ್ಕುಮಾರನು ಕಾಲದ ವಿಷಯದಲ್ಲಿ ಪಾರ್ವತಿಯು ಶಿವನಿಗೆ ವಿಚಾರಿಸಿದ ಸಂಗತಿಯನ್ನು ಹೇಳ ತೊಡಗಿದನು.

ಪಾರ್ವತಿ–ಭಗವನ್, ನಿನ್ನ ಕೃಪೆಯಿಂದ ಅನೇಕ ವ್ರತಾದಿಗಳನ್ನು ಅರಿತೆನು. ವಿಧಿಪೂರ್ವಕವಾಗಿ ನಿನ್ನ ಪೂಜಾದಿಗಳನ್ನು ಹೇಗೆ ನೆರವೇರಿಸ ಬೇಕೆಂಬುದನ್ನು ತಿಳಿದುಕೊಂಡೆನು. ಕಾಲಚಕ್ರದ ಸಂಬಂಧದಲ್ಲಿ ಮೃತ್ಯುವಿನ ಚಿಹ್ನವೇನು? ಆಯುಷ್ಯದ ಪ್ರಮಾಣವೇನು ? ಈ ಸಂಗತಿಗಳನ್ನು ತಿಳಿಸಬೇಕು.

ಮಹಾದೇವ–ಅಕಸ್ಮಾತ್ ಶರೀರವು ಎಲ್ಲ ಕಡೆಯಲ್ಲಿಯೂ ಬಿಳಿ ಇಲ್ಲವೆ ಹಳದಿ ಬಣ್ಣದ್ದಾದರೆ ಆ ಮನುಷ್ಯನು ಆರು ತಿಂಗಳಲ್ಲಿ ಮರಣ ಹೊಂದುವನೆಂದು ತಿಳಿಯಬೇಕು. ಮುಖ, ಕಿವಿಗಳು, ನೇತ್ರಗಳು, ನಾಲಿಗೆಯು ಸ್ತಂಭನವಾದರೆ ಆರು ತಿಂಗಳಲ್ಲಿ ಮೃತ್ಯುವು ಸಂಭವಿಸುವದೆಂದು ಭಾವಿಸಬೇಕು. ಭಯಂಕರವಾದ ಸಪ್ಪಳವು ಕೇಳದೆ ಹೋದರೆ ಆ ಮನುಷ್ಯನಿಗೆ ಆರು ತಿಂಗಳಲ್ಲಿ ಮೃತ್ಯುವು ಸಂಭವಿಸುವದು. ಸೂರ್ಯ ಚಂದ್ರ ಅಗ್ನಿ ಇವರ ಸಾನ್ನಿಧ್ಯದಲ್ಲಿ ಪ್ರಕಟವಾಗುವ ಪ್ರಕಾಶವು ಕಾಣದೆ ಹೋದರೆ ಆರು ತಿಂಗಳಲ್ಲಿ ಮೃತ್ಯುವು ಒದಗುವದು. ಪ್ರಕಾಶವಿದ್ದಾಗಲೂ ಅಂಧಾಕಾರಮಯವಾಗಿ ದೃಷ್ಟಿ ಗೋಚರವಾದರೆ ಆರು ತಿಂಗಳಲ್ಲಿ ಮೃತ್ಯುವು ಸಂಭವಿಸುವದು. ಮನುಷ್ಯನ ಎಡಗೈಯು ಒಂದು ವಾರದವರೆಗೆ ಹಾರತೊಡಗಿದರೆ ಒಂದು ಮಾಸದಲ್ಲಿ ಮರಣವು ಪ್ರಾಪ್ತ ವಾಗುವದು. ಎಲ್ಲ ಅಂಗಗಳಲ್ಲಿ ಒರಟೆಯುಂಟಾದರೆ, ತಾಲುವು ಒಣಗಿದರೆ ಒಂದು ಮಾಸದಲ್ಲಿ ಮೃತ್ಯುವುಂಟಾಗುವದು. ತ್ರಿದೋಷವು ಆಧಿಕ್ಯ ಹೊಂದಿದರೆ ಹದಿನೈದು ದಿನಗಳಲ್ಲಿ ಮರಣವೊದಗುವದು. ಬಾಯಿಯೂ ಗಂಟಲವೂ ಒಣಗತೊಡಗಿದರೆ ಆರು ತಿಂಗಳಲ್ಲಿ ಆಯುಷ್ಯವು ಸಮಾಪ್ತಿಯಾಗುವದು. ನೀರು, ಎಣ್ಣೆ, ತುಪ್ಪ, ಕನ್ನಡಿಗಳಲ್ಲಿ ಪ್ರತಿಬಿಂಬವು ಕಾಣದೆ ಹೋದರೆ, ಇಲ್ಲವೆ ವಿಕೃತವಾಗಿ ಕಂಡರೆ ಅವನು ಆರು ತಿಂಗಳಲ್ಲಿ ಮರಣ ಹೊಂದುವನು. ಶಿರಸ್ಸಿನಿಂದ ರಹಿತವಾದ ದೇಹದ ನೆರಳು ಕಂಡರೆ, ತನ್ನ ನೆರಳೇ ಕಾಣದಂತಾದರೆ ಒಂದು ತಿಂಗಳಿಗಿಂತ ಹೆಚ್ಚಿನ ಆಯುಷ್ಯವು ಇರುವದಿಲ್ಲ.

ಪಾರ್ವತಿ, ಸೂರ್ಯಮಂಡಲವು ಇಲ್ಲವೆ ಚಂದ್ರಮಂಡಲವು ರಕ್ತ ವರ್ಣದ್ದಾಗಿ ತೋರಿದರೆ, ಪ್ರಭಾಹೀನವಾದರೆ ಹದಿನೈದು ದಿನಗಳಲ್ಲಿ ಮೃತ್ಯುವು ಒದಗುವದು. ಅರುಂಧತಿ, ಮಹಾಯಾನ, ಚಂದ್ರಮ, ನಕ್ಷತ್ರಗಳು ಕಾಣ ದಂತಾದರೆ ಒಂದು ತಿಂಗಳು ಮಾತ್ರ ಜೀವಂತವಾಗಿ ಉಳಿಯುವನು. ಗ್ರಹಗಳ ದರ್ಶನವಾದರೂ ದಿಕ್ಕುಗಳ ಜ್ಞಾನವಾಗದಿದ್ದರೆ, ಮನದಲ್ಲಿ ಮೌಢ್ಯವು

ಉತ್ಪನ್ನವಾಗಿದ್ದರೆ ಆರು ತಿಂಗಳಲ್ಲಿ ಮರಣವು ಸಂಭವಿಸುವದು. ಉತಥ್ಯ ತಾರೆಯ ಹಾಗೂ ಧ್ರುವನಕ್ಷತ್ರದ ಮತ್ತು ಸೂರ್ಯಮಂಡಲದ ದರ್ಶನವಾಗದಿದ್ದರೆ ಹಾಗೂ ರಾತ್ರಿಯಲ್ಲಿ ಇಂದ್ರಧನುಷ್ಯವೂ, ಮಧ್ಯಾಹ್ನದಲ್ಲಿ ಉಲ್ಕಾಪಾತವೂ ಗೋಚರವಾದರೆ, ಹದ್ದು-ಕಾಗೆಗಳು ಸುತ್ತುಗಟ್ಟಿದರೆ ಆ ಮನುಷ್ಯನು ಆರು ತಿಂಗಳಿಗಿಂತ ಹೆಚ್ಚು ಕಾಲ ಬದುಕುವದಿಲ್ಲ. ಸಪ್ತರ್ಷಿಮಂಡಲವು ರಾತ್ರಿಯಲ್ಲಿ ಗೋಚರವಾಗದಿದ್ದರೆ, ಛಾಯಾಪಥ-ಸ್ವರ್ಗಮಾರ್ಗವು ಅಗೋಚರವಾದರೆ ಅವನ ಆಯುಷ್ಯವು ಆರು ತಿಂಗಳು ಮಾತ್ರ ಉಳಿದಿರುವದು. ಸೂರ್ಯ ಚಂದ್ರರು ರಾಹುಗ್ರಸ್ತವಾದಂತೆ ತೋರಿದರೆ, ದಿಕ್ಕುಗಳು ತಿರುಗುತ್ತಿರುವಂತೆ ಭಾಸವಾದರೆ ಆ ಮನುಷ್ಯನು ಆರು ತಿಂಗಳು ಮಾತ್ರ ಜೀವಿಸುವನು. ನೀಲೀ ಬಣ್ಣದ ನೊಣಗಳು ಮುತ್ತಿದರೆ ಒಂದು ತಿಂಗಳಲ್ಲಿ ಮೃತ್ಯುವು ಸಂಭವಿಸುವದು. ಹದ್ದು, ಕಾಗೆ, ಪಾರಿವಾಳಗಳು ತಲೆಯ ಮೇಲೆ ಕುಳಿತರೆ ಒಂದು ತಿಂಗಳಲ್ಲಿ ಮೃತ್ಯುವು ಒದಗುವದು.

ಪಾರ್ವತಿ-ಕಾಲವು ಆಕಾಶವನ್ನಾದರೂ ನಾಶ ಮಾಡುವದು. ಮಹೇಶ್ವರಾ, ಕಾಲವು ಹೇಗೆ ನಾಶವಾಗುವದು ? ನೀನು ಯೋಗಿ ಶಿರೋಮಣಿ ಯಿರುವೆ; ಸ್ವತಂತ್ರ ಪ್ರಭುವಿರುವೆ; ಲೋಕೋಪಕಾರಕ್ಕಾಗಿ ಸಗುಣ ರೂಪನಾಗಿ ರುವೆ. ಯಾವುದರಿಂದ ಕಾಲವು ನಷ್ಟವಾಗುವದೆಂಬುದನ್ನು ತಿಳಿಸಬೇಕು.

ಶಿವ-ದೇವಿ, ದೈತ್ಯರು, ಯಕ್ಷರು, ರಾಕ್ಷಸರು, ನಾಗರು, ಮನುಷ್ಯರು ಮೊದಲಾದವರಿಂದ ಕಾಲವು ನಾಶವಾಗುವದಿಲ್ಲ. ಆದರೆ ಧ್ಯಾನಪರಾಯಣ ಯೋಗಿಯು ಮಾತ್ರ ಕಾಲವನ್ನು ನಾಶ ಮಾಡುವನು. ವರಾರೋಹೇ, ಪಂಚಭೂತ ಗಳಿಂದುಂಟಾದ ದೇಹವು ಯಾವಾಗಲೂ ಆ ಭೂತಗಳಿಂದ ಯುಕ್ತವಾಗಿರುವದು. ಆದುದರಿಂದ ಮಣ್ಣಿನ ಕಾಯವು ಮಣ್ಣುಗೂಡುವದು ನಿಶ್ಚಿತವು. ಆತ್ಮದಿಂದ ಆಕಾಶ, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲ, ಜಲದಿಂದ ಪೃಥ್ವಿ ಆವಿರ್ಭವಿಸುವವು. ಪೃಥ್ವಿ ಮೊದಲಾದ ಭೂತಗಳು ಕ್ರಮಶಃ ತಮ್ಮ ಕಾರಣಗಳಲ್ಲಿ ಲೀನವಾಗುವವು. ಆಕಾಶದ ಗುಣವು ಶಬ್ದವು, ವಾಯುವಿನ ಗುಣವು ಸ್ಪರ್ಶವು, ಅಗ್ನಿಯ ಗುಣವು ರೂಪ, ಜಲದ ಗುಣವು ರಸವು, ಪೃಥ್ವಿಯ ಗುಣವು ಗಂಧವು. ಭೂತಗಳು ತಮ್ಮ ಗುಣವನ್ನು ತ್ಯಾಗ ಮಾಡಿದಾಗಲೆ ನಷ್ಟವಾಗುವವು; ಗುಣಗ್ರಹಣ ಮಾಡಿದಾಗಲೆ ಆವಿರ್ಭವಿಸುವವು. ದೇವೇಶ್ವರಿ,

ಈ ಬಗೆಯಾಗಿ ಪಂಚಭೂತಗಳ ಯಥಾರ್ಥ ಸ್ವರೂಪವನ್ನು ನೀನು ತಿಳಿಯಬೇಕು. ಕಾಲವನ್ನು ಜಯಿಸುವ ಇಚ್ಛೆಯುಳ್ಳ ಯೋಗಿಗಳು ಪ್ರತಿದಿನ ಪ್ರಯತ್ನ ಪೂರ್ವಕವಾಗಿ ಪ್ರತಿದಿನವೂ ತಮ್ಮ ತಮ್ಮ ಕಾಲದಲ್ಲಿ ಆದರ ಅಂಶಭೂತ ಗುಣಗಳನ್ನು ಚಿಂತನೆ ಮಾಡಬೇಕು.

ಯೋಗವೇತ್ತ ಪುರುಷನು ಸುಖಾಸನದಲ್ಲಿ ಕುಳಿತು ವಿಶುದ್ಧ ಶ್ವಾಸ ದ್ವಾರವಾಗಿ ಯೋಗಾಭ್ಯಾಸ ಮಾಡಬೇಕು. ರಾತ್ರಿಯಲ್ಲಿ ದೀಪವನ್ನು ಆರಿಸಿ, ತನ್ನ ತರ್ಜನಿ, ಅಂಗುಲಿಗಳನ್ನು ಕಿವಿಗಳಲ್ಲಿಟ್ಟುಕೊಂಡು ಎರಡು ಗಳಿಗೆ ಕುಳಿತುಕೊಳ್ಳ ಬೇಕು. ಆ ಸಮಯದಲ್ಲಿ ಅಗ್ನಿಪ್ರೇರಿತ ಶಬ್ದವು ಕೇಳಬರುವದು. ಇದರಿಂದ ಸಂಧ್ಯಾಕಾಲದಲ್ಲಿ ಭಕ್ಷಿಸಿದ ಅನ್ನವು ಕ್ಷಣದಲ್ಲಿ ಪಚನವಾಗುವದು. ಸಾಧಕನು ಪ್ರತಿದಿನವೂ ಹೀಗೆ ಮಾಡುತ್ತ ಹೋದರೆ ಶಬ್ದಬ್ರಹ್ಮನ ಸಾಕ್ಷಾತ್ಕಾರ ಮಾಡಿಕೊಳ್ಳು ವನು. ಅವನು ಮೃತ್ಯುವನ್ನೂ ಕಾಲವನ್ನೂ ಜಯಿಸಿ ಸ್ವಚ್ಛಂದವಾಗಿ ಜೀವಿಸುವನು. ಮತ್ತು ಸಮದರ್ಶಿಯಾಗಿ ಸಂಪೂರ್ಣ ಸಿದ್ಧಿಗಳನ್ನು ಪ್ರಾಪ್ತಮಾಡಿಕೊಳ್ಳುವನು. ಶಬ್ದವನ್ನು ಕೇಳಿದ ಯೋಗಿಯು ಸಂಸಾರಬಂಧನದಿಂದ ಮುಕ್ತನಾಗುವನು. ಯೋಗದ್ವಾರವಾಗಿ ಪ್ರತಿದಿನ ಕೇಳುತ್ತಿರುವ ಶಬ್ದವು ಸೂಕ್ಷ್ಮವಾಗುತ್ತ ಹೋಗು ವದು. ಹೀಗೆ ಮಾಡುತ್ತ ಹೋಗುವದರಿಂದ ಯೋಗಿಯು ಬಂಧನದಿಂದ ಮುಕ್ತನಾಗುವನು.

ಅಂಬೆ, ಸಾಧಕನು ಜರಾ–ಮೃತ್ಯುಗಳನ್ನು ಜಯಿಸುವ ಇಚ್ಛೆಯಿಂದ ಸದಾ ಧಾರಣೆಯಲ್ಲಿ ಸ್ಥಿತನಾಗಬೇಕು. ಯಾಕಂದರೆ ಯೋಗಪರಾಯಣ ಯೋಗಿಯು ಚೆನ್ನಾಗಿ ಧ್ಯಾನ, ಧಾರಣ ತತ್ಪರನಾಗಬೇಕು. ಯೋಗಿಯು ಪ್ರಾಣಾಯಾಮದ ಅಭ್ಯಾಸ ಮಾಡಬೇಕು. ಪ್ರಾಣಾಯಾಮದ ವೇಳೆಯಲ್ಲಿ ಆರಾಧ್ಯ ದೇವನು ಮುಂದೆ ನಿಲ್ಲುವನು. ಮೊದಲು ವ್ಯಾಹೃತಿ ಕೊನೆಯಲ್ಲಿ ಶಿರೋಮಂತ್ರ ಸಹಿತವಾದ ಮೂರು ಗಾಯತ್ರಿ ಜಪವನ್ನು ಮೂರು ಬಾರಿ ಮಾಡಬೇಕು. ಪ್ರಾಣವಾಯುವಿನ ಸ್ತಂಭನ ಮಾಡಬೇಕು. ಪ್ರಾಣಾಯಾಮಪೂರ್ವಕ ಧ್ಯಾನಪರಾಯಣ ಯೋಗಿಯು ಮುಕ್ತನಾಗಿ ಹೋಗುವನು. ಯಾವ ದ್ವಿಜನು ಪ್ರಾತಃಕಾಲದಲ್ಲಿ ಒಂದು ಪ್ರಾಣಾಯಾಮ ಮಾಡುವನೋ ಅವನ ಪಾತಕಗಳು ನಾಶ ಹೊಂದುವವು. ಸದಾ ಪ್ರಾಣಾಯಾಮ ಮಾಡುವವನು ಮೃತ್ಯುವನ್ನು ಜಯಿಸಿ ವಾಯುವಿನಂತೆ ಗತಿಶೀಲ

ನಾಗಿ ಆಕಾಶದಲ್ಲಿ ವಿಚರಣ ಮಾಡುವನು. ಅವನು ಸಿದ್ಧರ ಸ್ವರೂಪವನ್ನೂ ಕಾಂತಿ, ಮೇಧಾ, ಪರಾಕ್ರಮಗಳನ್ನೂ ಪ್ರಾಪ್ತಮಾಡಿಕೊಳ್ಳುವನು.

ದೇವೇಶ್ವರಿ, ನಿನಗೆ ವಾಯುವಿನ ಸಿದ್ಧಿಯನ್ನು ತಿಳಿಸಿದೆನು. ಇನ್ನು ನಿನಗೆ ತೇಜದ ಸಿದ್ಧಿಯನ್ನು ಹೇಳುವೆನು. ಶಾಂತವೂ ಏಕಾಂತವೂ ಆದ ಸ್ಥಳದಲ್ಲಿ ಆಸನದಲ್ಲಿ ಕುಳಿತುಕೊಳ್ಳಬೇಕು. ಆಗ ಚಿಂತನ ಮಾಡಿದರೆ, ವಾಮ, ದಕ್ಷಿಣನೇತ್ರಗಳ ಕಾಂತಿಯಿಂದ ಪ್ರಕಾಶಿತ ಮಧ್ಯವರ್ತಿ ಸ್ಥಾನವಾದ ಭ್ರೂಮಧ್ಯ ಭಾಗದಲ್ಲಿ ಅವ್ಯಕ್ತ ರೂಪದಿಂದ ಪ್ರಕಾಶಿತವಾಗುವ ಅಗ್ನಿತೇಜವು ದೃಗ್ಗೋಚರವಾಗುವದು. ಯೋಗಿಯು ತನ್ನ ಅಂಗುಲಿಗಳಿಂದ ಎರಡೂ ಕಣ್ಣುಗಳನ್ನು ಒತ್ತಿಕೊಂಡರೆ ಅರ್ಧ ಮುಹೂರ್ತದಲ್ಲಿ ಧಾನಸ್ಥನಾದ ಯೋಗಿಗೆ ಈಶ್ವರೀಯ ಜ್ಯೋತಿಯು ಕಾಣುವದು. ಆ ಜ್ಯೋತಿಯು ಬಿಳಿ, ಕೆಂಪು, ಹಳದಿ, ಕಪ್ಪು ಹಾಗೂ ಇಂದ್ರ ಧನುಸ್ಸಿನ ಸಮಾನ ಬಣ್ಣಗಳುಳ್ಳದ್ದಾಗುವದು. ಭ್ರುಕುಟಿ ಮಧ್ಯದಲ್ಲಿ ಲಲಾಟವರ್ತಿ ಬಾಲ ಸೂರ್ಯ ಸಮಾನನಾದ ಅಗ್ನಿಯನ್ನು ಸಾಕ್ಷಾತ್ಕರಿಸಿಕೊಂಡರೆ ಆ ಯೋಗಿಯು ಇಚ್ಛಾನುಸಾರವಾಗಿ ರೂಪ ಹೊಂದಲು ಸಮರ್ಥನಾಗುವನು. ಆ ಯೋಗೀಶ್ವರನು ಕಾರಣ ತತ್ವಗಳನ್ನು ಶಾಂತಗೊಳಿಸಿ ಅದರಲ್ಲಿ ಆವಿಷ್ಟನಾಗುವನು. ಹಾಗೂ ಎರಡನೆಯವರ ಶರೀರದಲ್ಲಿ ಪ್ರವೇಶಮಾಡಿ ಅಣಿಮಾದಿ ಗುಣಗಳನ್ನು ಪ್ರಾಪ್ತ ಮಾಡಿಕೊಳ್ಳುವನು. ಮನಸ್ಸಿನಿಂದ ಎಲ್ಲವನ್ನೂ ಕಂಡುಕೊಳ್ಳುವನು; ದೂರದ ಮಾತುಗಳನ್ನು ಕೇಳುವನು; ಆಕಾಶದಲ್ಲಿ ವಿಚರಣ ಮಾಡುವನು. ಅವನು ಮೃತ್ಯುವನ್ನು ಜಯಿಸುವನು. ಮೋಕ್ಷ ಹೊಂದುವನು.

ವೇದಾಹಮೇತಂ ಪುರುಷಂ ಮಹಾಂತಮಾದಿತ್ಯವರ್ಣಂ

ತಮಸಃ ಪುರಸ್ತಾತ್ ।

ತಮೇವ ವಿದಿತ್ವಾತಿ ಮೃತ್ಯುಮೇತಿ ನಾನ್ಯಃ ಪಂಥಾ

ವಿದ್ಯತೇ ಅಯನಾಯ ॥

(ಶಿ.ಪು.ಉ.ಸಂ. ೨೭–೨೫)

ಆ ಯೋಗಿಯು ಸೂರ್ಯಸಮಾನನಿರುವನು. ದೇವಿ, ನಾನು ತೇಜ

ಸ್ತತ್ವವನ್ನು ವಿವರಿಸಿರುವೆನು. ಈ ತತ್ವಜ್ಞಾನ ಮಾಡಿಕೊಂಡರೆ ಅವನು ಕಾಲನ ಮೇಲೆ ವಿಜಯ ಹೊಂದಿ ಅಮರತ್ವವನ್ನು ಹೊಂದುವನು.

ದೇವೇಶ್ವರಿ ಪಾರ್ವತಿ, ಧ್ಯಾನ ಮಾಡುವ ಯೋಗಿಯ ಮತ್ತೊಂದು ಗತಿಯೆಂದರೆ, ಚಿತ್ತವನ್ನು ಸ್ವಾಧೀನದಲ್ಲಿರಿಸಿಕೊಳ್ಳುವದಾಗಿದೆ. ಚಿತ್ತವನ್ನು ಅಧೀನದಲ್ಲಿರಿಸಿಕೊಂಡು ಯಥಾಯೋಗ್ಯ ಸ್ಥಾನದಲ್ಲಿ ಆಸನದಲ್ಲಿ ಕುಳಿತುಕೊಂಡು ದೇಹವನ್ನೆತ್ತರಿಸಿ, ಅಂಜಲಿಯನ್ನೊಡ್ಡಿ ವಾಯುಪಾನ ಮಾಡಬೇಕು. ಆಗ ತಾಲುವಿನಿಂದ ನೀರ ಹನಿಗಳು ಬೀಳತೊಡಗುವವು. ಅವುಗಳನ್ನು ವಾಯುವಿನ ದ್ವಾರವಾಗಿ ಎಳೆದುಕೊಳ್ಳಬೇಕು. ಅವು ಅಮೃತ ಸಮಾನವಿರುವದರಿಂದ ಹಸಿವೆ, ನೀರಡಿಕೆಯಾಗುವದಿಲ್ಲ. ಹೀಗೆ ಮಾಡಿದರೆ ಆ ಯೋಗಿಯು ಬೃಹಸ್ಪತಿ ತುಲ್ಯನಾಗುವನು; ಮೃತ್ಯುವನ್ನು ಜಯಿಸುವನು. ಅವನಲ್ಲಿ ಆಕಾಶಸಂಚಾರದ ಸಾಮರ್ಥ್ಯವುಂಟಾಗುವದು.

## ಭಗವತಿ ಉಮಾದೇವಿ

ಸೂತಪುರಾಣಿಕ–ಶೌನಕಾದಿ ಮುನಿಗಳೆ, ನೀವು ಭಗವತಿ ಉಮಾ ದೇವಿಯ ಚರಿತ್ರವನ್ನು ಕೇಳಲಪೇಕ್ಷಿಸಿರುವಿರಿ. ಈ ಚರಿತ್ರೆಯನ್ನು ಮೇಧಾ ಮುನಿಯು ಸಮಾಧಿ, ಸುರಥರಿಗೆ ಪ್ರಾಚೀನ ಕಾಲದಲ್ಲಿ ಹೇಳಿದನು. ಅದನ್ನು ನಿಮಗೆ ಹೇಳುವೆನು.

ಸ್ವಾರೋಚಿಷ ಮನ್ವಂತರದಲ್ಲಿ ವಿರಥನೆಂಬ ರಾಜನಿದ್ದನು. ಅವನಿಗೆ ಸುರಥನೆಂಬ ಪುತ್ರನಿದ್ದನು. ಇವನು ಮಹಾ ಪರಾಕ್ರಮಿಯೂ, ಉಮಾದೇವಿಯ ಭಕ್ತನೂ ಆಗಿದ್ದನು. ಪ್ರಜೆಗಳನ್ನು ಮಕ್ಕಳಂತೆ ಪರಿಪಾಲನೆ ಮಾಡುತ್ತಿದ್ದನು. ವೈರಿರಾಜರು ಸುರಥನ ಅಭ್ಯುದಯವನ್ನು ಸಹಿಸಲಾರದೆ ಎಲ್ಲರೂ ಒಂದಾಗಿ ಸುರಥನ ರಾಜಧಾನಿಯ ಮೇಲೆ ದಾಳಿ ಮಾಡಿದರು. ಶತ್ರುಗಳು ತನಗಿಂತ ಬಲಾಢ್ಯರಿದ್ದುದರಿಂದ ಸುರಥನು ತನ್ನ ರಾಜ್ಯದಲ್ಲಿಯ ಇನ್ನೊಂದು ಪಟ್ಟಣಕ್ಕೆ ಮಂತ್ರಿ, ಸೇನಾಪತಿಗಳೊಡನೆ ಓಡಿಹೋಗಿ ರಾಜ್ಯದ ಕೆಲವು ಭಾಗವನ್ನು ಆಳತೊಡಗಿದನು. ಆಗ ವೈರಿಗಳು ಆ ರಾಜ್ಯದ ಮೇಲೆಯೂ ದಾಳಿ ಮಾಡಿದರು.

ಮಂತ್ರಿ, ಸೇನಾಪತಿಗಳು ಅವನನ್ನು ವಂಚಿಸಿ ವೈರಿಗಳನ್ನು ಕೂಡಿದರು. ಆಗ ಸುರಥನು ಅಶ್ವಾರೋಹಿಯಾಗಿ ವನವನ್ನು ಸೇರಿದನು. ಅವನು ವನದಲ್ಲಿ ಸಂಚರಿಸುತ್ತ ಮೇಧಾಮುನಿಯ ಆಶ್ರಮಕ್ಕೆ ಬಂದನು. ಮೇಧಾಋಷಿಯ ತಪೋವನವು ಪ್ರಶಾಂತವಾಗಿತ್ತು. ಅವನ ಆಶ್ರಮದಲ್ಲಿ ಹುಲಿ, ಸಿಂಹ, ಚಿಗರೆ, ಆಕಳುಗಳು ನಿರ್ವೈರದಿಂದ ವರ್ತಿಸುತ್ತಿದ್ದವು. ಆ ಮುನಿಯು ಅನೇಕ ಜನರಿಗೆ ಆಶ್ರಯವಿತ್ತಿದ್ದನು. ಆ ವನದಲ್ಲಿಯ ಗುರುಕುಲದಲ್ಲಿ ಅನೇಕ ವಿದ್ಯಾರ್ಥಿಗಳು ಸ್ವಾಧ್ಯಾಯ ಮಾಡುತ್ತಿದ್ದರು. ಸುರಥನು ಮೇಧಾಮುನಿಯ ದರ್ಶನ ಹೊಂದಿ ನಮಿಸಿ ತನ್ನ ಅವಸ್ಥೆಯನ್ನು ತಿಳಿಸಿದನು. ಆಗ ಆ ಮುನಿಯು ರಾಜನಿಗೆ ತನ್ನ ಆಶ್ರಮದಲ್ಲಿರಬೇಕೆಂದು ತಿಳಿಸಿದರು.

ಸ್ವಲ್ಪದಿನಗಳಾದ ಬಳಿಕ ಅಲ್ಲಿಗೆ ಸಮಾಧಿ ಎಂಬ ವೈಶ್ಯನು ಬಂದನು. ಅವನು ರಾಜನನ್ನು ಭೆಟ್ಟಿಯಾಗಿ, ಮೇಧಾಮುನಿಯ ದಯಾಳುತನದ ಬಗ್ಗೆ ತಿಳಿದುಕೊಂಡು ಅವನ ಆಶ್ರಮದಲ್ಲಿ ವಾಸವಾದನು. ಒಂದು ದಿನ ಸಮಾಧಿಯು ತನ್ನ ಗೋಳನ್ನು ರಾಜನಿಗೆ ಹೇಳಿದನು. ಹೆಂಡತಿಯೂ ಮಗನೂ ಸಂಪತ್ತನ್ನು ಸ್ವಾಧೀನಪಡಿಸಿಕೊಂಡು ಮನೆಯಿಂದ ತನ್ನನ್ನು ಹೊರಗೆ ಹಾಕಿದ ಸಂಗತಿಯನ್ನು ತಿಳಿಸಿದನು. ಇಬ್ಬರೂ ದುಃಖಿಗಳು ಮೇಧಾಮುನಿಯ ಬಳಿಗೆ ಹೋಗಿ ತಮ್ಮ ತಮ್ಮ ದುಃಖಗಳನ್ನು ಅವನಿಗೆ ತಿಳಿಸಿದರು.

ಮೇಧಾಮುನಿ–ರಾಜಾ, ಸಮಾಧಿ, ಸನಾತನ ಶಕ್ತಿಸ್ವರೂಪೆಯಾದ ಜಗದಂಬೆಯು ಎಲ್ಲರ ಮನವನ್ನು ತನ್ನ ಮಾಯೆಯಿಂದ ಮೋಹಗೊಳಿಸುವಳು. ಪ್ರಾಕ್ತನ ಕರ್ಮಗಳ ಫಲಗಳನ್ನು ಅವಳೇ ಕೊಡುವಳು. ನೀವಿಬ್ಬರೂ ಹಿಂದಿನ ಕರ್ಮದ ಫಲಗಳನ್ನನುಭವಿಸತೊಡಗಿರುವಿರಿ. ನೀವು ಅವಳನ್ನು ಪ್ರಸನ್ನೀಕರಿಸಿ ಕೊಂಡರೆ ಸಂಕಟವು ಪರಿಹಾರವಾಗುವದು.

ಸುರಥ–ಎಲ್ಲ ವಿಪತ್ತಗಳನ್ನು ಪರಿಹರಿಸುವ ಮಹಾಮಾಯೆಯು ಯಾರು? ಅವಳ ಪ್ರಾದುರ್ಭಾವವು ಹೇಗಾಯಿತು ?

ಮೇಧಾಮುನಿ–ಭಗವಾನ್ ನಾರಾಯಣನು ಯೋಗನಿದ್ರೆಯಲ್ಲಿದ್ದಾಗ ಅವನ ಕರ್ಣಕಮಲದಿಂದ ಮಧು ಕೈಟಭರೆಂಬ ಮಹಾದೈತ್ಯರು ಉತ್ಪನ್ನರಾದರು. ಅವರು ಬ್ರಹ್ಮದೇವನನ್ನು ಯುದ್ಧಕ್ಕೆ ಆಹ್ವಾನಿಸಿದರು. ಆಗ ಬ್ರಹ್ಮನು ಗಾಬರಿ

ಯಾದನು. ಶ್ರೀಮನ್ನಾರಾಯಣನನ್ನು ಯೋಗನಿದ್ರೆಯಿಂದ ಎಚ್ಚರಿಸುವ ಕಾರ್ಯವನ್ನು ಮಾಡಬೇಕಾಗಿತ್ತು. ಆಗ ಶ್ರೀಹರಿಯ ನೇತ್ರ, ಮುಖಗಳಿಂದ ಮಹಾಮಾಯಾ ಕಾಲಿಕಾದೇವಿಯು ಪ್ರಕಟಳಾದಳು. ಅವಳು ನಾರಾಯಣನನ್ನು ಯೋಗನಿದ್ರೆಯಿಂದ ಎಚ್ಚರಿಸಿದಳು. ಅವನಿಗೂ ಮಧು-ಕೈಟಭರಿಗೂ ಬಹುಕಾಲದವರೆಗೆ ಯುದ್ಧವು ನಡೆಯಿತು. ಆಗ ಜಗದೀಶ್ವರಿ ಮಹಾಕಾಲಿಯು ತನ್ನ ಪ್ರಭಾವದಿಂದ ಮಧು-ಕೈಟಭರನ್ನು ಮೋಹಿತಗೊಳಿಸಿದಳು. ಆಗ ಶ್ರೀಹರಿಯು ಆ ದೈತ್ಯರನ್ನು ಸಂಹರಿಸಿದನು. ಜಗದಂಬೆಯು ಲೋಕೋಪಕಾರ ಕ್ಕಾಗಿ ಅವತರಿಸಿರುವಳು. ಅವಳು ಜನರ ದುಃಖನಿವಾರಣೆಗಾಗಿ ಯುಗ ಯುಗ ಗಳಲ್ಲಿ ಅವತಾರ ಮಾಡುವಳು.

ಮೇಧಾಮುನಿ- ರಂಭನೆಂಬ ದೈತ್ಯನ ಪುತ್ರನಾದ ಮಹಿಷಾಸುರನು ದೇವತೆಗಳನ್ನು ಪರಾಭವಗೊಳಿಸಿ ಸ್ವರ್ಗಸಿಂಹಾಸನವನ್ನು ಆಕ್ರಮಿಸಿದನು. ಆಗ ತ್ರಿಮೂರ್ತಿಗಳ ತೇಜದಿಂದ ಜಗದಂಬೆಯು ಅವತರಿಸಿದಳು. ಅವಳು ಮಹಿಷಾಸುರನೊಡನೆ ಯುದ್ಧ ಮಾಡಿ ಅವನನ್ನು ಸಂಹರಿಸಿದಳು.

ಭಗವತಿ ಜಗದಂಬೆಯು ಶುಂಭ, ನಿಶುಂಭ, ಧೂಮ್ರಲೋಚನ, ಚಂಡ, ಮುಂಡ, ರಕ್ತಬೀಜ ಮೊದಲಾದ ದೈತ್ಯರನ್ನು ಸಂಹರಿಸಿ ಜಗತ್ತನ್ನು ಗಂಡಾಂತರ ದಿಂದ ಪಾರು ಮಾಡಿದಳು.

ರಾಜಾ, ನೀನು ದೇವಿಯ ಪೂಜೆಯನ್ನೂ ವ್ರತವನ್ನೂ ನೆರವೇರಿಸಬೇಕು. ಉಮಾದೇವಿಯು ಭಕ್ತರ ಸಂಕಟಗಳನ್ನು ನಿವಾರಣೆ ಮಾಡುವಳು.

ಸೂತಪುರಾಣಿಕ- ಮಹರ್ಷಿಗಳೆ, ಮೇಧಾಋಷಿಯು ಹೇಳಿದ ಪ್ರಕಾರ ಭಗವತಿ ಉಮಾದೇವಿಯ ವ್ರತವನ್ನು ಮಾಡಿ ಸುರಥರಾಜನು ತನ್ನ ರಾಜ್ಯವನ್ನು ಹೊಂದಿದನು. ಸಮಾಧಿ ವೈಶ್ಯನಿಗೆ ತನ್ನ ಹೆಂಡಿರು, ಮಕ್ಕಳು, ಧನಸಂಪತ್ತಿಯ ಆಶೆಯಿರಲಿಲ್ಲ. ಅವನು ದೇವಿಯ ವ್ರತವನ್ನು ಮಾಡಿ ಸದ್ಗತಿಯನ್ನು ಪಡೆದನು.

ಉಮಾಸಂಹಿತಾ ಸಂಪೂರ್ಣ.

## ಕೈಲಾಸ ಸಂಹಿತಾ

# ಪ್ರಣವ ಸ್ವರೂಪ

ನಮಃ ಶಿವಾಯ ಸಾಂಬಾಯ ಸಗಣಾಯ ಸಸೂನವೇ ।
ಪ್ರಧಾನ ಪುರುಷೇಶಾಯ ಸರ್ಗಸ್ಥಿತ್ಯಂತಹೇತವೇ ॥

ಪ್ರಧಾನ (ಪ್ರಕೃತಿ) ಮತ್ತು ಪುರುಷನ ನಿಯಂತನೂ ಸೃಷ್ಟಿ, ಸ್ಥಿತಿ ಲಯಾದಿ ಗಳಿಗೆ ಕಾರಣನೂ ಆದ ಪಾರ್ವತಿಸಹಿತ ಶಿವನಿಗೆ ಅವನ ಪಾರ್ಷದ ಪುತ್ರರೊಡನೆ ಪ್ರಣಾಮಗಳು.

ಶೌನಕಾದಿ ಋಷಿಗಳು–ಸೂತಪುರಾಣಿಕನೆ, ಶಿವತತ್ವಜ್ಞಾನವನ್ನು ವೃದ್ಧಿ ಗೊಳಿಸುವ ಕೈಲಾಸಸಂಹಿತೆಯನ್ನು ವಿವರಿಸಬೇಕು.

ಸೂತಪುರಾಣಿಕ–ಮಹರ್ಷಿಗಳೆ, ನೀವೆಲ್ಲರೂ ಶಿವನ ಭಕ್ತರಿದ್ದು ದೃಢತಾ ಪೂರ್ವಕವಾಗಿ ಶಿವವ್ರತಗಳನ್ನು ನೆರವೇರಿಸುವವರಿರುವಿರಿ. ನಿಮಗೆ ನಾನು ಕೈಲಾಸ ಸಂಹಿತೆಯನ್ನು ತಿಳಿಸುವೆನು, ಧ್ಯಾನವಿಟ್ಟು ಕೇಳಿರಿ. ರಥಂತರ ಕಲ್ಪದಲ್ಲಿ ಮಹಾಮುನಿ ವಾಮದೇವನು ತಾಯಿಯ ಗರ್ಭದಿಂದ ಜನಿಸಿದ ಕೂಡಲೆ ಶಿವತತ್ವಜ್ಞಾನ ವುಳ್ಳವರಲ್ಲಿ ಸರ್ವಶ್ರೇಷ್ಠನೆನಿಸಿಕೊಂಡನು. ವೇದ, ಆಗಮ, ಪುರಾಣಗಳಲ್ಲಿಯೂ ಅನ್ಯಶಾಸ್ತ್ರಗಳಲ್ಲಿಯೂ ಪಾರಂಗತನಾಗಿದ್ದನು. ಅವನು ನಿಷ್ಕಾಮಿಯಾಗಿದ್ದು ದ್ವಂದ್ವಾತೀತನಾಗಿದ್ದನು; ಹಾಗೂ ಅಹಂಕಾರಶೂನ್ಯನಾಗಿದ್ದನು. ಅಜ್ಞಾನಿ ಮಹಾತ್ಮನು ಎರಡನೆಯ ಮಹೇಶ್ವರನಾಗಿದ್ದನು. ಇವನಿಗೆ ದೊಡ್ಡ ದೊಡ್ಡ ಮುನಿಗಳು ಶಿಷ್ಯರಾಗಿದ್ದರು. ಅವನು ಯಾವಾಗಲೂ ಪರಬ್ರಹ್ಮ ಪರಮಾತ್ಮ ಶಂಭುವಿನ ಧ್ಯಾನದಲ್ಲಿ ಮಗ್ನನಾಗಿರುತ್ತಿದ್ದನು. ಅವನು ಅಲ್ಲಲ್ಲಿ ಸಂಚರಿಸುತ್ತಿದ್ದನು. ಒಮ್ಮೆ ಅವನು ಸಂಚಾರ ಮಾಡುತ್ತ ಮೇರುವಿನ ದಕ್ಷಿಣಶಿಖರವಾದ ಕುಮಾರ ಶೃಂಗ ಶಿಖರಪ್ರದೇಶದಲ್ಲಿ ಪ್ರವೇಶ ಮಾಡಿದನು. ಅಲ್ಲಿ ಶಿವಕುಮಾರನಾದ ಮಯೂರವಾಹನ ಭಗವಾನ್ ಸ್ಕಂದದೇವನು ವಾಸಿಸಿದ್ದನು. ಅವನೊಡನೆ ಅವನ ಶಕ್ತಿಭೂತಳಾದ ಗಜವಲ್ಲಿಯೂ ಇರುತ್ತಿದ್ದಳು. ಅಲ್ಲಿ ಸ್ಕಂದಸರವೆಂಬ ದೊಡ್ಡ ಸರೋವರವಿತ್ತು. ಅದು ಕುಮಾರ ಸ್ವಾಮಿಯು ಇದ್ದ ಸ್ಥಳಕ್ಕೆ ಬಹಳ ಸಮೀಪ ವಾಗಿತ್ತು. ಸರೋವರದ ಜಲವು ಸ್ವಚ್ಛವೂ ಸ್ವಾದಿಷ್ಟವೂ ಆಗಿತ್ತು. ಮಹಾಮುನಿ ಯಾದ ವಾಮದೇವನು ಈ ಸರಸ್ಸಿನಲ್ಲಿ ಶಿಷ್ಯರಿಂದೊಡಗೂಡಿ ಸ್ನಾನ ಮಾಡಿ, ಶಿಖರದ ಮೇಲಿದ್ದ ಸ್ಕಂದಸ್ವಾಮಿಯ ದರ್ಶನ ತೆಗೆದುಕೊಂಡನು.

ವಾಮದೇವ–ಪ್ರಣವದ ವಾಚ್ಯಾರ್ಥ, ಪ್ರಣವಾರ್ಥಗಳನ್ನು ಪ್ರತಿಪಾದಿಸುವ ಪ್ರಣವಾಕ್ಷರರೂಪಬೀಜದಿಂದ ಮುಕ್ತನಾದ ಪ್ರಣವರೂಪ ಸ್ವಾಮಿ ಕಾರ್ತಿಕೇಯಾ, ನಿನಗೆ ಅನಂತ ಪ್ರಣಾಮಗಳು.

ವಾಮದೇವನು ಭಗವಾನ್ ಕಾರ್ತಿಕೇಯನಿಗೆ ವಂದಿಸಿ ಬಹುಪರಿಯಾಗಿ ಅವನನ್ನು ಪ್ರಾರ್ಥಿಸಿದನು. ಅವನ ಸ್ತುತಿಯಿಂದ ಮಹೇಶ್ವರಪುತ್ರನಾದ ಕಾರ್ತಿಕೇಯನು ಅತ್ಯಂತ ಪ್ರಸನ್ನನಾದನು.

ಶ್ರೀಸ್ಕಂದ–ಮಹಾಮಹಿಮನಾದ ವಾಮದೇವ ಮುನಿಯೆ, ನಿನ್ನ ಪೂಜೆ, ಪ್ರಾರ್ಥನೆಗಳಿಂದ ನಾನು ಪ್ರಸನ್ನನಾದೆನು. ನಾನು ಇಂದು ನಿನ್ನ ಯಾವ ಅಭೀಷ್ಟೆಯನ್ನು ಪೂರೈಸಬೇಕು ? ನೀನು ಪ್ರಧಾನ ಯೋಗಿಯಿರುವೆ, ನಿಸ್ಪೃಹನಿರುವೆ, ವೀತರಾಗನಿರುವೆ, ಸಂಪೂರ್ಣ ಜಗತ್ತಿನ ಕಲ್ಯಾಣ ಚಿಂತನೆ ಮಾಡುವುದಕ್ಕಾಗಿಯೆ ನೀನು ಭೂತಳದಲ್ಲಿ ಸಂಚಾರ ಮಾಡುತ್ತಿರುವೆ. ಬ್ರಹ್ಮನ್, ನೀನು ಲೋಕಕಲ್ಯಾಣಕ್ಕಾಗಿ ಯಾವುದಾದರೂ ವಿಷಯವನ್ನು ವಿಚಾರಿಸಬಹುದು.

ವಾಮದೇವ–ಭಗವನ್, ನೀನು ಪರಮೇಶ್ವರನಿರುವೆ. ನೀನು ಅಲೌಕಿಕ ಲೌಕಿಕ ವಿಭೂತಿಗಳನ್ನು ಸೃಷ್ಟಿಸಿರುವೆ. ನೀನು ಸರ್ವಜ್ಞನೂ, ಸರ್ವಕರ್ತನೂ, ಸರ್ವ ಶಕ್ತಿಗಳನ್ನು ಧಾರಣ ಮಾಡುವವನೂ, ಸರ್ವೇಶ್ವರನೂ ಆಗಿರುವೆ. ನಾನು ಸಾಮಾನ್ಯಜೀವಿಯಾಗಿರುವೆನು. ನೀನು ಪರಮಾತ್ಮಸ್ವರೂಪನು. ನಿನ್ನ ದರ್ಶನದಿಂದ ನಾನು ಕೃತಾರ್ಥನಾದೆನು. ಕ್ಷಣಮಾತ್ರ ವಿಜ್ಞಾನದಿಂದ ಪ್ರೇರಿತನಾದ ನಾನು ನಿನ್ನ ಸಮಕ್ಷಮ ಒಂದು ಪ್ರಶ್ನೆಯನ್ನು ಇಡುವೆನು. ನನ್ನ ಈ ಅಪರಾಧಕ್ಕಾಗಿ ಕ್ಷಮಿಸಬೇಕು. ಪ್ರಣವವು ಎಲ್ಲಕ್ಕಿಂತಲೂ ಉತ್ತಮ ಮಂತ್ರವಾಗಿದೆ. ಅದು ಸಾಕ್ಷಾತ್ ಪರಮೇಶ್ವರ ವಾಚಕವಾಗಿದೆ. ಪಶು (ಜೀವ)ಗಳ ಪಾಶ (ಬಂಧನ) ವನ್ನು ಮುಕ್ತಗೊಳಿಸುವನು ಪಶುಪತಿಯೆಂದು ಅದರ ವಾಚ್ಯಾರ್ಥವಿರುವದು. 'ಓಮಿತೀದಂ ಸರ್ವಂ' ಓಂಕಾರವು ಕಣ್ಣಿಗೆ ಕಾಣುವ ಸಮಸ್ತ ವಿಶ್ವವಾಗಿರುವದು. 'ಓಮಿತಿ ಬ್ರಹ್ಮ' ಓಂ ಇದು ಬ್ರಹ್ಮವಾಗಿದೆ. 'ಸರ್ವಂಹ್ಯೇತದ್ ಬ್ರಹ್ಮ' ಇದು ಸರ್ವವೂ ಬ್ರಹ್ಮಮಯವಾಗಿದೆ. ಇವೆಲ್ಲ ಮಾತುಗಳನ್ನು ಶ್ರುತಿಯು ವರ್ಣಿಸಿದೆ. ನಾನು ಸಮಷ್ಟಿ ಹಾಗೂ ವ್ಯಷ್ಟಿಭಾವದಿಂದ ಪ್ರಣವಾರ್ಥದ ಶ್ರವಣ ಮಾಡಿರುವೆನು. ಪ್ರಣವದ ದ್ವಾರವಾಗಿ ಎಲ್ಲವುಗಳ ಪ್ರತಿಪಾದನವಾಗಿದೆ

ಯೆಂಬುದನ್ನು ಕೇಳಿರುವೆನು. ಭಗವನ್, ನಿನ್ನಂತಹ ಗುರುವು ದೊರೆಯಲಾರನು. ಆದುದರಿಂದ ನಿನ್ನ ಬಳಿಗೆ ಬಂದೆನು. ಉಪದೇಶವಿಧಿಯಿಂದ ಹಾಗೂ ಸದಾಚಾರ ಪರಂಪರೆಯನ್ನು ಲಕ್ಷಿಸಿ, ನೀನು ನನಗೆ ಪ್ರಣವಾರ್ಥವನ್ನು ಉಪದೇಶಿಸಬೇಕೆಂದು ಪ್ರಾರ್ಥಿಸುವೆನು.

ವಾಮದೇವ ಮುನೀಶ್ವರನು ಹೀಗೆ ಪ್ರಾರ್ಥಿಸಿದ ಬಳಿಕ ಕಾರ್ತಿಕೇಯನು ಪ್ರಣವ ಸ್ವರೂಪನೂ, ಮೂವತ್ತೆಂಟು ಶ್ರೇಷ್ಠ ಕಲೆಗಳಿಂದ ಲಕ್ಷಿತನಾದವನೂ, ಭಗವತಿ ಉಮಾದೇವಿಯೊಡನೆ ಸ್ಥಿತನಾದವನೂ, ಮುನಿವರರಿಂದ ಪರಿವೃತ ನಾದವನೂ ಆದ ಭಗವಾನ್ ಸದಾಶಿವನಿಗೆ ಪ್ರಣಾಮ ಮಾಡಿ, ಶ್ರುತಿಗಳೂ ಗುಪ್ತ ವಾಗಿರಿಸಿಕೊಂಡ ಮಹಾ ಶ್ರೇಯೋದಾಯಕ ಪ್ರಣವಸ್ವರೂಪವನ್ನು ವಿವರಿಸ ತೊಡಗಿದನು.

ಶ್ರೀಸ್ಕಂದ–ಮಹಾಭಾಗ ಮುನೀಶ್ವರ ವಾಮದೇವಾ, ನಿನ್ನದು ಸಾಧು ವಾದ. ಯಾಕಂದರೆ, ನೀನು ಭಗವಾನ್ ಶಿವನ ಪರಮ ಭಕ್ತನೂ, ಶಿವತತ್ವದ ಜ್ಞಾನ ಹೊಂದಿದವರಲ್ಲಿ ಪರಮಶ್ರೇಷ್ಠನೂ ಆಗಿರುವೆ, ನೀನು ತಿಳಿಯದಂತಹ ವಸ್ತುವು ತ್ರಿಲೋಕದಲ್ಲಿ ಯಾವುದೂ ಇಲ್ಲ. ಹೀಗಿದ್ದರೂ ಲೋಕಾನುಗ್ರಹಾಕಾಂಕ್ಷೆ ಯಿಂದ ನನ್ನನ್ನು ಪ್ರಶ್ನಿಸಿರುವೆ. ಆದುದರಿಂದ ನಾನು ಈ ವಿಷಯವನ್ನು ವಿವರಿಸುವೆನು. ಈ ಲೋಕದಲ್ಲಿರುವ ಮಾನವರು ನಾನಾ ಪ್ರಕಾರದ ಶಾಸ್ತ್ರಗಳಿಂದ ಮೋಹಿತರಾಗಿ ರುವರು. ಪರಮೇಶ್ವರನ ಅತಿ ವಿಚಿತ್ರಮಾಯೆಯು ಅವರನ್ನು ಪರಮಾರ್ಥದಿಂದ ವಂಚಿತಗೊಳಿಸಿರುವದು. ಆದುದರಿಂದ ಪ್ರಣವದ ವಾಚ್ಯಾರ್ಥಭೂತನಾದ ಸಾಕ್ಷಾತ್ ಪರಮೇಶ್ವರನನ್ನು ಅವರು ತಿಳಿಯುವದಿಲ್ಲ. ಆ ಮಹೇಶ್ವರನು ಸಗುಣನೂ ಹಾಗೂ ತ್ರಿದೇವಜನಕನಾದ ಪರಬ್ರಹ್ಮ ಪರಮಾತ್ಮನಿರುವನು. ಇದು ಸತ್ಯವಿರುವದೆಂದು ನಾನು ತ್ರಿವಾರವಾಗಿ ಕೈ ಎತ್ತಿ ಶಪಥ ಪೂರ್ವಕವಾಗಿ ಹೇಳುವೆನು. ಪ್ರಣವದ ಅರ್ಥವು ಸಾಕ್ಷಾತ್ ಪರಮೇಶ್ವರನೆಂದು ನಾನು ಸಾರಿ ಸಾರಿ ಹೇಳುವೆನು. ಶ್ರುತಿ, ಸ್ಮೃತಿ, ಪುರಾಣ, ಆಗಮಗಳಲ್ಲಿ ಪ್ರಧಾನವಾಗಿ ಪ್ರಣವದ ವಾಚ್ಯಾರ್ಥವು ಹೇಳಲ್ಪಟ್ಟಿದೆ. ಬ್ರಹ್ಮ, ವಿಷ್ಣು, ಇಂದ್ರ, ಭೂತಗಳು, ಇಂದ್ರಿಯಸಮುದಾಯಗಳು ಪರಮಾತ್ಮನಿಂದಲೇ ಪ್ರಕಟವಾಗಿರುವವು. ಆದರೆ ಪರಮಾತ್ಮನು ಯಾವುದರಿಂದಲೂ ಉತ್ಪನ್ನವಾಗಿಲ್ಲ. ವಿದ್ಯುತ್ ಸೂರ್ಯ– ಚಂದ್ರರ ಪ್ರಕಾಶಕ್ಕಿಂತಲೂ ಹೆಚ್ಚು ಪ್ರಕಾಶಮಾನನು ಪರಮಾತ್ಮನಾಗಿರುವನು.

ಅವನು ಸಂಪೂರ್ಣ ಐಶ್ವರ್ಯವಂತನಿರುವದರಿಂದ ಅವನು ಸರ್ವೇಶ್ವರ ಶಿವನೆಂಬ ನಾಮನ್ನು ಧಾರಣ ಮಾಡಿರುವನು. ಹೃದಯಾಕಾಶದಲ್ಲಿ ವಿರಾಜಮಾನನಾಗಿರುವ ಭಗವಾನ್ ಶಂಭುವು ಮುಮುಕ್ಷುಪುರುಷನ ಧ್ಯೇಯವಾಗಿರುವನು. ಸರ್ವವ್ಯಾಪಿಯಾದ ಪ್ರಕಾಶಾತ್ಮನೂ ಭಾಸಸ್ವರೂಪನೂ ಚಿನ್ಮಯನೂ ಆಗಿರುವನು. ಈ ಪರಮಪುರುಷನ ಪರಾಶಕ್ತಿ ಶಿವೆಯು ಭಕ್ತಿ ಭಾವನೆಗಳಿಂದ ಸುಲಭಳೂ, ನಿರ್ಗುಣಳೂ ಆಗಿರುವಳು. ಅವಳು ನಿಷ್ಕಲಳಾಗಿದ್ದು ಪರಮೇಶ್ವರನ ಮೂರು ರೂಪಳಾಗಿದ್ದಾಳೆ. ಸ್ಥೂಲ, ಸೂಕ್ಷ್ಮ ಹಾಗೂ ಇವೆರಡರಿಂದ ಮುಕ್ತವಾದದ್ದು. ಮುಮುಕ್ಷುಯೋಗಿಗಳು ಕ್ರಮಶಃ ಈ ಸ್ವರೂಪಗಳ ಧ್ಯಾನ ಮಾಡಬೇಕು. ಶಂಭುವು ನಿಷ್ಕಲನೂ, ಸನಾತನ ಆದಿದೇವನೂ ಇದ್ದು, ದೇವಾಧಿದೇವ ಸದಾಶಿವನಾಗಿರುವನು. ಈ ಮಹಾದೇವನು ಪಂಚಕಲಾ ರೂಪನಾಗಿರುವನು. ಅವನಿಗೆ ಪಂಚಮುಖಗಳಿರುವವು. ಈಶಾನವು ಅವನ ಮುಕುಟವು, ತತ್ಪುರುಷವು ಅವನ ಮುಖವು, ಅಘೋರವು ಹೃದಯವು, ವಾಮದೇವವು ಗುಹ್ಯ ಪ್ರದೇಶವು, ಸದ್ಯೋಜಾತವು ಅವನ ಪಾದಗಳು. ಅವನು ಸಾಕಾರ ನಿರಾಕಾರ ಪರಮಾತ್ಮನಾಗಿರುವನು. ಸರ್ವಜ್ಞತಾದಿ ಆರು ಶಕ್ತಿಗಳು ಅವನ ಶರೀರದ ಆರು ಅಂಗಗಳು. ಅವು ಶಬ್ದಾದಿ ಶಕ್ತಿಗಳಿಂದ ಸ್ಫುರಿತಹೃದಯ ಕಮಲದ್ವಾರವಾಗಿ ಸುಶೋಭಿತವಿರುವದು. ವಾಮಭಾಗದಲ್ಲಿ ಮನೋನ್ಮಣಿ ನಾಮಕವಾದ ತನ್ನ ಶಕ್ತಿಯಿಂದ ಅವನು ವಿಭೂಷಿತನಿರುವನು.

ವಾಮದೇವ–ಭಗವನ್ ಷಡಾನನಾ, ಪ್ರಣವದ ಆರು ಪ್ರಕಾರದ ಅರ್ಥಗಳ ಪರಿಜ್ಞಾನವು ಅಭೀಷ್ಟ ವಸ್ತುಗಳನ್ನು ಕೊಡುವಂತಹದಿರುವದು. ಈ ಆರು ಪ್ರಕಾರದ ಅರ್ಥಗಳ ಜ್ಞಾನವು ಏನಿರುವದು ? ಅರ್ಥವು ಏನಿರುವದು ? ಅರ್ಥಗಳ ಪರಿಜ್ಞಾನವಾದ ಬಳಿಕ ದೊರೆಯುವ ಫಲವೇನು ? ಪಾರ್ವತಿನಂದನಾ, ನಾನು ಕೇಳಿದ ಮಾತುಗಳನ್ನು ವಿವರಿಸಬೇಕು.

ಶ್ರೀಸ್ಕಂದ–ಮುನಿಶ್ರೇಷ್ಠಾ, ಸಮಷ್ಟಿ ಹಾಗೂ ವ್ಯಷ್ಟಿಭಾವದಿಂದ ಮಹೇಶ್ವರನ ಪರಿಜ್ಞಾನವು ಪ್ರಣವಾರ್ಥದ ಪರಿಜ್ಞಾನವೇ ಆಗಿದೆ. ನನ್ನ ಪ್ರವಚನದಿಂದ ಆರೂ ಪ್ರಕಾರದ ಅರ್ಥಗಳಲ್ಲಿ ಏಕತೆಯನ್ನು ಕಾಣುವೆ. ಮೊದಲನೆಯದು ಮಂತ್ರರೂಪ ಅರ್ಥವಿರುವದು. ಯಂತ್ರಭಾವಿತ ಅರ್ಥವು ಎರಡನೆಯದು. ಮೂರನೆಯದು ದೇವತಾಬೋಧಕ ಅರ್ಥವು. ನಾಲ್ಕನೆಯದು

ಪ್ರಪಂಚರೂಪ ಅರ್ಥವು. ಐದನೆಯದು ಗುರುಸ್ವರೂಪದಿಂದ ಕಾಣು ವಂತಹದು. ಆರನೆಯ ಅರ್ಥವು ಶಿಷ್ಯಸ್ವರೂಪದ ಪರಿಚಯ ಕೊಡುವಂತಹದು. ಪ್ರಣವದಲ್ಲಿ ಐದು ಅಕ್ಷರಗಳನ್ನು ವೇದವು ಹೇಳಿದೆ. ಮೊದಲನೆಯದು ಆದಿಸ್ವರ ಅ, ಎರಡನೆಯದು ಐದನೆಯಸ್ವರವು 'ಉ', ಮೂರನೆಯದು ಪಂಚಮ ವರ್ಗ ಪವರ್ಗದ ಅಂತಿಮ ಅಕ್ಷರ 'ಮ', ನಾಲ್ಕನೆಯ ಅಕ್ಷರವು ಬಿಂದು, ಐದನೆಯ ಅಕ್ಷರವು ನಾದ. ಇದು ಸಮಷ್ಟಿರೂಪ ವೇದಾದಿ ಪ್ರಣವ ಎಂದು ಹೇಳಲ್ಪಟ್ಟಿದೆ. ನಾದವು ಎಲ್ಲ ಅಕ್ಷರಗಳ ಸಮಷ್ಟಿ ರೂಪವಾಗಿದೆ. ಬಿಂದುಯುಕ್ತವಾದ ನಾಲ್ಕು ಅಕ್ಷರಗಳು ವ್ಯಷ್ಟಿರೂಪದಿಂದ ಶಿವವಾಚಕ ಪ್ರಣವದಲ್ಲಿ ಪ್ರತಿಷ್ಠಿತವಾಗಿವೆ.

## ಶಿವತತ್ವ

ಶ್ರೀಸ್ಕಂದ–ವಾಮದೇವಾ, ಕರ್ಮಸತ್ತೆಯ ಪ್ರತಿಪಾದಕ ಕರ್ಮಫಲ ವಾದದಿಂದ ಪ್ರಾರಂಭಮಾಡಿ ಶಾಸ್ತ್ರಗಳಲ್ಲಿರುವ ವಿವಿಧ ವಿಷಯಗಳ ವಿಶದ ವಿವೇಚನೆಯು ಜ್ಞಾನಪ್ರದಾನ ಮಾಡುವಂತಹದಿರುವದು. ಜ್ಞಾನಿ ಪುರುಷನು ವಿವೇಕಪೂರ್ವಕವಾಗಿ ಇದನ್ನು ಶ್ರವಣ ಮಾಡಬೇಕು. ನೀನು ಅನೇಕ ಶಿಷ್ಯರಿಗೆ ಉಪದೇಶಿಸಿರುವೆ. ಅವರಲ್ಲಿ ಯಾರು ನಿನ್ನ ಸಮಾನರಿರುವರು ? ಅಧಮ ಶಿಷ್ಯರು ಇಂದಿಗೂ ಅನ್ಯಾನ್ಯ ಶಾಸ್ತ್ರಗಳಲ್ಲಿ ಅಂಡಲೆಯುತ್ತಿರುವರು. ಅನೀಶ್ವರವಾದಿ ದರ್ಶನ ಚಕ್ರದಲ್ಲಿ ಬಿದ್ದು ಅವರು ಮೋಹಿತರಾಗುತ್ತಿರುವರು. ಆರು ಮುನಿಗಳು ಅವರಿಗೆ ಶಾಪ ಕೊಟ್ಟಿರುವರು. ಯಾಕೆಂದರೆ ಮೊದಲೇ ಅವರು ಶಿವನಿಂದೆಯನ್ನು ಮಾಡುತ್ತಿದ್ದರು. ಆದುದರಿಂದ ಅವರ ಮಾತುಗಳನ್ನು ಕೇಳಬಾರದು. ಅವರು ಅನ್ಯಥಾವಾದಿಗಳಾಗಿರುವರು. ಇಲ್ಲಿ ಪ್ರತಿಜ್ಞಾ, ಹೇತು ಉದಾಹರಣ, ಉಪನಯ, ನಿಗಮನ ಎಂಬ ಐದು ಅವಯವಗಳಿಂದ ಯುಕ್ತವಾದ ಅನುಮಾನ ಪ್ರಯೋಗಕ್ಕೆ ಅವಕಾಶವಿರುವದು. ಧೂಮದರ್ಶನದಿಂದ ಪರ್ವತದಲ್ಲಿ ಅಗ್ನಿ ಇರುವದೆಂಬ ಅನುಮಾನವನ್ನು ಪ್ರತಿಪಾದಿಸುವಂತೆ, ಪ್ರತ್ಯಕ್ಷ ಪ್ರಪಂಚ ದರ್ಶನರೂಪ ಹೇತುವನ್ನವಲಂಬಿಸಿ, ಪರಮೇಶ್ವರ ಪರಮಾತ್ಮನನ್ನೂ ತಿಳಿದುಕೊಳ್ಳುವ ಸಾಧ್ಯತೆಯಿರುವದೆಂಬುದರಲ್ಲಿ ಸಂಶಯವಿಲ್ಲ.

ಈ ವಿಶ್ವವು ಸ್ತ್ರೀ–ಪುರುಷ ರೂಪವಾಗಿರುವದೆಂಬುದನ್ನು ಪ್ರತ್ಯಕ್ಷ ಕಾಣುವೆವು. ಆರು ಕೋಶಗಳಿಂದ ಕೂಡಿದ ಶರೀರವು ಮೂರು ಮಾತೆಯ ಅಂಶ ದಿಂದಲೂ, ಮೂರೂ ಪಿತನ ಅಂಶದಿಂದಲೂ ಉತ್ಪನ್ನವಾಗಿದೆಯೆಂದು ಶ್ರುತಿಯ ಕಥನವಿರುವದರಿಂದ ಎಲ್ಲ ಶರೀರಗಳು ಸ್ತ್ರೀ– ಪುರುಷ ಭಾವದಿಂದ ಕೂಡಿರುವ ವೆಂದು ಜನರು ತಿಳಿಯುವರು. ವಿದ್ವಾನರು ಪರಮಾತ್ಮನಲ್ಲಾದರೂ ಸ್ತ್ರೀ–ಪುರುಷ ಭಾವವಿರುವವೆಂದು ಹೇಳುವರು. ಪರಬ್ರಹ್ಮ ಪರಮಾತ್ಮನು ಸತ್, ಚಿತ್, ಆನಂದ (ಸಚ್ಚಿದಾನಂದ) ರೂಪನೆಂದು ಶ್ರುತಿಗಳು ಹೇಳುವವು. ಅಸತ್ ಪ್ರಪಂಚವನ್ನು ನಿವೃತ್ತಗೊಳಿಸುವ ಶಬ್ದವಾದರೂ ಸದ್ರೂಪವೆಂದು ಹೇಳಲ್ಪಟ್ಟಿದೆ. ಚಿತ್ ಶಬ್ದದಿಂದ ಜಡಜಗತ್ತಿನ ನಿವೃತ್ತಿಯು ಮಾಡಲ್ಪಡುವದು.

ಜೀವದ ಆಶ್ರಿತವಾದ ಚಿಚ್ಛಕ್ತಿಯು ಅದು ಯಾವಾಗಲೂ ದುರ್ಬಲ ವಾಗುವದು. ಅದರ ನಿವೃತ್ತಿಗಾಗಿ ಪರಮಾತ್ಮನಲ್ಲಿ ಸಾರ್ವಕಾಲಿಕ ಸರ್ವ ಶಕ್ತಿವಂತಿಕೆಯು ವಿದ್ಯಮಾನವಿರುವದು. ಈಶ್ವರನು ಬಲವಂತನಾಗಿರುವನು. ಶಿವ ಶಕ್ತಿಯರ ಸಂಯೋಗದಿಂದ ನಿರಂತರವಾದ ಆನಂದವು ಪ್ರಕಟವಾಗುತ್ತಿರುವದು. ಈ ಆನಂದವನ್ನು ಪ್ರಾಪ್ತಮಾಡಿಕೊಳ್ಳುವ ಉದ್ದೇಶದಿಂದ ಪಾಪರಹಿತ ಮುನಿಗಳು ಶಿವನಲ್ಲಿ ಮನವನ್ನಿರಿಸಿ ನಿರಾಮಯನಾದ ಅವನನ್ನು ಪ್ರಾಪ್ತಮಾಡಿಕೊಳ್ಳುವರು. ಶಿವ ಹಾಗೂ ಶಕ್ತಿ ಇವರು ಸರ್ವಾತ್ಮಾ ಮತ್ತು ಬ್ರಹ್ಮರೆಂದು ಹೇಳಿಸಿಕೊಳ್ಳುವರು. ಬೃಹಶಬ್ದದಿಂದ ವ್ಯಾಪಕತೆಯೂ ಸರ್ವಾತ್ಮತೆಯೂ ಪ್ರತಿಪಾದನವಾಗುವದು. ಶಂಭುವಿಗ್ರಹದಲ್ಲಿ ಬೃಂಹಣತ್ವವೂ, ಬೃಹತ್ವವೂ ನಿತ್ಯವೂ ವಿದ್ಯಮಾನವಿರುವವು. ಸದ್ಯೋಜಾತಾದಿ ಪಂಚಬ್ರಹ್ಮಮಯ ಶಿವವಿಗ್ರಹದಲ್ಲಿ ವಿಶ್ವದ ಪ್ರತೀತಿಯು ಬ್ರಹ್ಮಶಬ್ದದಲ್ಲಿ ಹೇಳಲ್ಪಟ್ಟಿದೆ.

ವಾಮದೇವ ಮುನಿಯೆ, 'ಹಂಸ' ಶಬ್ದವನ್ನು ತಿರುವು ಮುರುವು ಮಾಡಿದರೆ 'ಸೋಹಂ' ಪದವು ನಿರ್ಮಾಣವಾಗುವದು. 'ಸೋಹಂ' ಪದದಲ್ಲಿಯ ಸಕಾರ, ಹಕಾರಗಳನ್ನು ತ್ಯಾಗ ಮಾಡಿದರೆ 'ಓಮ್' ಶಬ್ದವು ಉಳಿಯುವದು. ಇದು ಪರಮಾತ್ಮ ವಾಚಕವು. ''ಓಂ'' ಇದು ಮಹಾಮಂತ್ರ ರೂಪವು. ಶಕ್ತ್ಯಾತ್ಮಕ ಶಿವನು ಈ ಮಹಾಮಂತ್ರದ ವಾಚ್ಯಾರ್ಥವಾಗಿರುವನು. ಇದು ಜೀವದ ಶಿವರೂಪತೆ ಯನ್ನು ಬೋಧಿಸುವದು.

ಶ್ರುತಿಯ 'ಪ್ರಜ್ಞಾನಂ ಬ್ರಹ್ಮ' ವಾಕ್ಯದಲ್ಲಿಯ ಪ್ರಜ್ಞಾನ ಶಬ್ದವು ಚೈತನ್ಯದ

ಪರ್ಯಾಯ ಶಬ್ದವಾಗಿದೆ. ಚೈತನ್ಯವು ಆತ್ಮವೆಂದೂ ಆತ್ಮವು ಚೈತನ್ಯರೂಪದಿಂದ ಶಿವಸೂತ್ರದಲ್ಲಿ ಹೇಳಲ್ಪಟ್ಟಿದೆ. ವಿಶ್ವದ ಸಂಪೂರ್ಣ ಜ್ಞಾನವು ಹಾಗೂ ಸ್ವತಂತ್ರತಾಪೂರ್ವಕವಾದ ಜಗನ್ನಿರ್ಮಾಣದ ಕ್ರಿಯೆಯೂ ಚೈತನ್ಯ ಶಬ್ದದಿಂದ ಸೂಚಿತವಾಗುವದು. ಅದಕ್ಕೇ ಆತ್ಮ ಇಲ್ಲವೆ ಪರಮಾತ್ಮನೆಂದು ಹೇಳಲ್ಪಟ್ಟಿದೆ.

ಜ್ಞಾನಬಂಧ ಎಂಬ ಎರಡನೆಯ ಶಿವಸೂತ್ರವಿರುವದು. ಇದರಲ್ಲಿ ಪಶುವರ್ಗ (ಜೀವ ಸಮುದಾಯ)ದ ಲಕ್ಷಣವು ಹೇಳಲ್ಪಟ್ಟಿದೆ. ಈ ಸೂತ್ರದಲ್ಲಿ ಜ್ಞಾನದ್ವಾರವಾಗಿ ಜ್ಞಾನ, ಕ್ರಿಯೆಗಳಾಗುವದು ಜೀವದ ಲಕ್ಷಣವೆಂದು ಹೇಳಲ್ಪಟ್ಟಿದೆ. ಈ ಜ್ಞಾನ ಶಕ್ತಿಗಳು ಪರಾಶಕ್ತಿಯ ಪ್ರಥಮ ಸ್ಪಂದನವಾಗಿರುವವು. ಶ್ರುತಿಯ ದ್ವಾರವಾಗಿ ಈ ಪರಾಶಕ್ತಿಯ ಸ್ತವನವು ಮಾಡಲ್ಪಟ್ಟಿರುವದು. ಜ್ಞಾನ, ಕ್ರಿಯಾ, ಇಚ್ಛಾರೂಪವೆಂಬ ಮೂರು ದೃಷ್ಟಿಗಳು ಶಿವನಲ್ಲಿರುವವು. ಈ ಮೂರೂ ದೃಷ್ಟಿಗಳು ಜೀವಿಗಳ ಮನದಲ್ಲಿ ಸ್ಥಿತವಾಗಿ ಇಂದ್ರಿಯಜ್ಞಾನ ಗೋಚರ ದೇಹದಲ್ಲಿ ಪ್ರವೇಶ ಮಾಡಿ ಜೀವರೂಪವಾಗಿ ಸದಾ ಜ್ಞಾನ, ಕ್ರಿಯಾಯುಕ್ತವಾಗಿರುವವು.

ಪ್ರತ್ಯಕ್ಷವಾಗಿ ಕಾಣುವ ಸಮಸ್ತ ವಿಶ್ವವು ಓಂಕಾರವಿರುವದೆಂದು ಸನಾತನ ಶ್ರುತಿಯ ಕಥನವಿರುವದು. ಇದರಿಂದ ಪ್ರಣವ ಹಾಗೂ ಜಗತ್ತಿನ ಏಕತೆಯು ಸೂಚಿತವಾಗುವದು. ಶಿವ–ಶಕ್ತಿಯರ ಸಂಯೋಗವು ಪರಮಾತ್ಮವಾಗಿದೆ. ಶಿವನ ಪರಾಶಕ್ತಿಯಿಂದ ಚಿಚ್ಛಕ್ತಿಯು ಪ್ರಕಟವಾಗುವದು. ಚಿಚ್ಛಕ್ತಿಯಿಂದ ಆನಂದಶಕ್ತಿಯು ಪ್ರಾದುರ್ಭಾವವಾಗುವದು. ಆನಂದಶಕ್ತಿಯಿಂದ ಇಚ್ಛಾಶಕ್ತಿಯು ಉದಯವಾಗಿರುವದು. ಇಚ್ಛಾಶಕ್ತಿಯಿಂದ ಜ್ಞಾನಶಕ್ತಿಯೂ, ಜ್ಞಾನಶಕ್ತಿಯಿಂದ ಕ್ರಿಯಾಶಕ್ತಿಯೂ ಪ್ರಕಟವಾಗಿರುವವು. ಇವುಗಳಿಂದ ನಿವೃತ್ತಿ ಮೊದಲಾದ ಕಲೆಗಳು ಉತ್ಪನ್ನವಾಗಿವೆ. ಚಿಚ್ಛಕ್ತಿಯಿಂದ ನಾದವೂ, ಆನಂದಶಕ್ತಿಯಿಂದ ಬಿಂದುವೂ ಪ್ರಕಟವಾಗಿವೆ. ಇಚ್ಛಾಶಕ್ತಿಯಿಂದ ಮಕಾರವು ಉತ್ಪನ್ನವಾಗಿದೆ. ಜ್ಞಾನಶಕ್ತಿಯಿಂದ ಐದನೆಯ ಸ್ವರವು ಉಕಾರವು ಹುಟ್ಟಿದೆ. ಕ್ರಿಯಾಶಕ್ತಿಯಿಂದ ಅಕಾರವು ಪ್ರಕಟವಾಗಿರುವದು.

ವಾಮದೇವ ಮುನಿಯೆ, ಶಿವನಿಂದ ಈಶಾನವು ಉತ್ಪನ್ನವಾಗಿದೆ. ಈಶಾನದಿಂದ ತತ್ಪುರುಷವೂ, ತತ್ಪುರುಷದಿಂದ ಅಘೋರವೂ, ಅಘೋರದಿಂದ ವಾಮದೇವವೂ, ವಾಮದೇವದಿಂದ ಸದ್ಯೋಜಾತವೂ ಪ್ರಾಕಟ್ಯವಾಗಿರುವವು. ಈಗ ಕಲೆಗಳ ಉತ್ಪತ್ತಿಯ ಕ್ರಮವನ್ನು ಹೇಳುವೆನು. ಈಶಾನದಿಂದ

ಶಾಂತ್ಯತೀತಾಕಲಾ, ತತ್ಪುರುಷದಿಂದ ಶಾಂತಿಕಲಾ, ಅಘೋರದಿಂದ ವಿದ್ಯಾಕಲಾ, ವಾಮದೇವದಿಂದ ಪ್ರತಿಷ್ಠಾಕಲಾ, ಸದ್ಯೋಜಾತದಿಂದ ನಿವೃತ್ತಿಕಲಾ ಉತ್ಪನ್ನ ವಾಗಿದೆ. ಈಶಾನದಿಂದ ಚಿಚ್ಛಕ್ತಿದ್ವಾರವಾಗಿ ಮಿಥುನಪಂಚಕದ ಉತ್ಪತ್ತಿಯಾಗಿದೆ. ಅನುಗ್ರಹ, ತಿರೋಭಾವ, ಸಂಹಾರ, ಸ್ಥಿತಿ, ಸೃಷ್ಟಿ ಈ ಐದು ಕೃತ್ಯಗಳ ಹೇತುವಾಗಿ ರುವದರಿಂದ ಅದಕ್ಕೆ ಪಂಚಕವೆನ್ನುವರು. ಮುನಿ, ಶ್ರೇಷ್ಠಾ ಆಕಾಶಾದಿಗಳ ಕ್ರಮದಿಂದ ಈ ಐದು ಮಿಥುನಗಳ ಉತ್ಪತ್ತಿಯಾಗಿದೆ. ಇವುಗಳಲ್ಲಿ ಮೊದಲನೆಯ ಮಿಥುನವು ಆಕಾಶವು; ಎರಡನೆಯದು ವಾಯು. ಮೂರನೆಯದು ಅಗ್ನಿಯು; ನಾಲ್ಕನೆಯದು ಜಲವು; ಐದನೆಯದು ಪೃಥ್ವಿ. ಆಕಾಶದ ಗುಣವು ಶಬ್ದವು; ವಾಯುವಿನಿಂದ ಶಬ್ದ, ಸ್ಪರ್ಶ; ಅಗ್ನಿಯಿಂದ ಶಬ್ದ, ಸ್ಪರ್ಶ, ರೂಪವು; ಜಲದಿಂದ ಶಬ್ದ, ಸ್ಪರ್ಶ, ರೂಪ, ರಸ; ಪೃಥ್ವಿಯಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ. ಪಂಚಭೂತಗಳ ಈ ವಿಸ್ತಾರಕ್ಕೆ ಪ್ರಪಂಚವೆನ್ನುವರು. ಸರ್ವಸಮಷ್ಟಿಯ ಹೆಸರು 'ವಿರಾಟ್' ಎನ್ನುವರು. ಪೃಥ್ವೀತತ್ವದಿಂದ ಕ್ರಮಶಃ ಶಿವತತ್ವದವರೆಗಿರುವ ತತ್ವ ಸಮುದಾಯವೇ ಬ್ರಹ್ಮಾಂಡವು. ಅದು ಕ್ರಮಶಃ ತತ್ವಸಮೂಹದಲ್ಲಿ ಲೀನವಾಗುತ್ತಾಗುತ್ತ ಎಲ್ಲವೂ ಜೀವನ ಭೂತ ಚೈತನ್ಯಮಯ ಪರಮೇಶ್ವರನಲ್ಲಿ ಲಯ ಹೊಂದುವವು. ಸೃಷ್ಟಿಕಾಲದಲ್ಲಿ ಪುನಃ ಶಕ್ತಿದ್ವಾರವಾಗಿ ಶಿವನಿಂದ ಹೊರಬಿದ್ದು ಸ್ಥೂಲಪ್ರಪಂಚ ರೂಪದಿಂದ ಪ್ರಳಯಕಾಲದವರೆಗೆ ಸುಖರೂಪ ವಾಗಿ ಸ್ಥಿತವಾಗಿರುವದು. ತನ್ನ ಇಚ್ಛೆಯಿಂದ ಸಂಸಾರದ ಸೃಷ್ಟಿಗಾಗಿ ಉದ್ಯತ ನಾಗಿರುವ ಮಹೇಶ್ವರನ ಪ್ರಥಮ ಪರಿಸ್ಪಂದನವೇ ಶಿವತತ್ವವಾಗಿದೆ.

ಸರ್ವಕರ್ತೃತ್ವರೂಪ, ಸರ್ವತತ್ವರೂಪ, ಪೂರ್ಣತ್ವರೂಪ, ನಿತ್ಯರೂಪ, ವ್ಯಾಪಕತ್ವರೂಪ ಇವು ಐದು ಶಿವನ ಶಕ್ತಿಗಳಾಗಿವೆ. ಕಲಾ, ವಿದ್ಯಾ, ರಾಗ, ಕಾಲ, ನಿಯತಿ ಇವುಗಳಿಗೆ ಕಲಾಪಂಚಕವೆನ್ನುವರು. ಐದು ತತ್ವಗಳ ರೂಪದಿಂದ ಪ್ರಕಟವಾಗುವದೇ ಕಲೆಯು. ಅದು ಕರ್ತೃತ್ವ ಹೇತುವಾಗುವದು; ತತ್ವದ ಸಾಧನವೂ ಆಗುವದು. ಆ ಕಲೆಯು ರಾಗವು. ಭಾವಪದಾರ್ಥಗಳ ಮತ್ತು ಪ್ರಕಾಶಗಳ ಭಾವನಾತ್ಮಕ ರೂಪದಿಂದ ಕ್ರಮಶಃ ಅಪಚ್ಛೇದವಾಗಿ ಸಂಪೂರ್ಣ ಆದಿಯೆಂದು ಹೇಳಿಸಿಕೊಳ್ಳುವದು ಕಾಲವು. ಇದು ನನ್ನ ಕರ್ತವ್ಯವಾಗಿದೆ. ಇದು ಕರ್ತವ್ಯವಲ್ಲ ಎಂದು ನಿಯಂತ್ರಣಮಾಡುವ ಪ್ರಭು ಶಕ್ತಿಯ ಹೆಸರು ನಿಯತಿಯು. ಅದರ ಆಕ್ಷೇಪದಿಂದ ಜೀವದ ಪತನವಾಗುವದು. ಇವು ಐದೂ ಜೀವದ

ಸ್ವರೂಪವನ್ನು ಆಚ್ಛಾದಿತಗೊಳಿಸುವ ಆವರಣಗಳಾಗಿವೆ. ಇವು ಪಂಚಕಂಚುಕ ಗಳೆಂದು ಹೇಳಿಸಿಕೊಳ್ಳುವವು. ಇವುಗಳ ನಿವಾರಣೆಗಾಗಿ ಅಂತರಂಗ ಸಾಧನದ ಅವಶ್ಯಕತೆಯುಂಟು.

# ಮಹಾ ವಾಕ್ಯಗಳು

ಶ್ರೀಸ್ಕಂದ–ವಾಮದೇವ ಮಹಾಯೋಗೀಶ್ವರಾ, ಮಹಾವಾಕ್ಯಗಳನ್ನು ಪ್ರಸ್ತುತಪಡಿಸುವೆನು–

೧. ಪ್ರಜ್ಞಾನಂ ಬ್ರಹ್ಮ(ಐತರೇಯ ೩ । ೩ । ಹಾಗೂ ಆತ್ಮಪ್ರ. ೧,) ಬ್ರಹ್ಮನು ಉತ್ಕೃಷ್ಟ ಜ್ಞಾನಸ್ವರೂಪನು ಇರುವನು.

೨. ಅಹಂ ಬ್ರಹ್ಮಾಸ್ಮಿ (ಬೃಹದಾರಣ್ಯ ೧ । ೪ । ೧೦), ನಾನು ಬ್ರಹ್ಮ ನಿರುವೆನು.

೩. ತತ್ವಮಸಿ (ಛಾ. ಉ. ಖಂ. ೮ ರಿಂದ ೧೬ ವರೆಗೆ,) ಆ ಬ್ರಹ್ಮನು ನೀನಿರುವೆ.

೪. ಅಯಮಾತ್ಮಾ ಬ್ರಹ್ಮ (ಮಾಂಡೂಕ್ಯ. ೨ । ಬೃಹ. ೨ । ೫ । ೧೯,) ಆ ಆತ್ಮನು ಬ್ರಹ್ಮನಿರುವನು.

೫. ಈಶಾವಾಸ್ಯಮಿದಂ ಸರ್ವಂ (ಈಶಾ. ೧,) ಅದು ಸರ್ವವೂ ಈಶನಿಂದ ವ್ಯಾಪ್ತವಿರುವದು.

೬. ಪ್ರಾಣೋಽಸ್ಮಿ (ಕೌಷೀ. ೩,) ನಾನು ಪ್ರಾಣನಿರುವೆನು.

೭. ಪ್ರಜ್ಞಾನಾತ್ಮಾ(ಕೌಷೀ. ೩,) ಪ್ರಜ್ಞಾನ ಸ್ವರೂಪನಿರುವೆನು.

೮. ಯದೇಹ ತದಮುತ್ರ ತದನ್ವಿಹ (ಕಠ ೨ । ೧ । ೧೦,) ಯಾವ ಪರಮಾತ್ಮನು ಇಲ್ಲಿರುವನೋ ಅವನು ಅಲ್ಲಿಯೂ (ಪರಲೋಕ) ಇರುವನು.

೯. ಅನ್ಯದೇವ ತದ್ವಿದಿತಾದಯೋ ಅವಿದಿತಾದಧಿ (ಕೇನ ೧ । ೩,) ಆ

ಬ್ರಹ್ಮನು ಜ್ಞಾತವಸ್ತುಗಳಿಂದ ಭಿನ್ನನಿರುವನು. ಅಜ್ಞಾತದಿಂದಲೂ ಮೇಲಿರುವನು.

೧೦. ಏಷ ತ್ ತ್ ಆತ್ಮಾಂತರ್ಯಾಮ್ಯಮೃತಃ (ಬೃಹ. ೩ । ೭ । ೩-೨೩,) ಅವನು ನಿಮ್ಮ ಆತ್ಮನು ಅಂತರ್ಯಾಮಿ ಅಮೃತನಿರುವನು.

೧೧. ಸ ಯಶ್ಚಾಯಂ ಪುರುಷೋ ಯಶ್ಚಾಸಾವಾದಿತ್ಯೇ ಸ ಏಕಃ (ತೈತ್ತಿರೀಯ ೨।೮,) ಅವನು ಪುರುಷನಲ್ಲಿಯೂ ಇರುವನು; ಆದಿತ್ಯನಲ್ಲಿಯೂ ಇರುವನು. ಒಬ್ಬನೇ ಇರುವನು.

೧೨. ಅಹಮಸ್ಮಿ ಪರಂಬ್ರಹ್ಮಪರಾಪರ ಪರಾತ್ಪರಂ। ನಾನು ಪರಾಪರ ಸ್ವರೂಪ ಪರಾತ್ಪರ ಪರಬ್ರಹ್ಮನಿರುವೆನು.

೧೩. ವೇದಶಾಸ್ತ್ರ ಗುರೂಣಾಂ ತು ಸ್ವಯಮಾನಂದ ಲಕ್ಷಣಂ। ವೇದಶಾಸ್ತ್ರ, ಗುರುಜನರ ವಚನಗಳಿಂದ ಸ್ವಯಂ ಹೃದಯದಲ್ಲಿ ಆನಂದಸ್ವರೂಪ ಬ್ರಹ್ಮನ ಅನುಭವವಾಗತೊಡಗುವದು.

೧೪. ಸರ್ವಭೂತಸ್ಥಿತಂ ಬ್ರಹ್ಮ ತದೇವಾಹಂ ನ ಸಂಶಯಃ । ಯಾವನು ಸಂಪೂರ್ಣ ಭೂತಗಳಲ್ಲಿ ಸ್ಥಿತನಾಗಿರುವನೋ ಅದೇ ಬ್ರಹ್ಮನು ನಾನಿರುವೆನು. ಇದರಲ್ಲಿ ಸಂಶಯವಿಲ್ಲ.

೧೫. ತತ್ವಸ್ಯ ಪ್ರಾಣೋऽಹಮಸ್ಮಿ ಪೃಥಿವ್ಯಾಃ ಪ್ರಾಣೋऽಹಮಸ್ಮಿ। ನಾನು ತತ್ವದ ಪ್ರಾಣನಿರುವೆನು, ಪೃಥ್ವಿಯ ಪ್ರಾಣನಿರುವೆನು.

೧೬. ಅಪಾಂ ಚ ಪ್ರಾಣೋऽಹಮಸ್ಮಿ ತೇಜಸಸ್ಯ ಪ್ರಾಣೋऽಹಮಸ್ಮಿ। ನಾನು ಜಲದ ಪ್ರಾಣನಿರುವೆನು, ತೇಜದ ಪ್ರಾಣನಿರುವೆನು.

೧೭. ವಾಯೋಶ್ಚ ಪ್ರಾಣೋऽಹಸ್ಮಿ ಆಕಾಶಶ್ಚ ಪ್ರಾಣೋऽಹಮಸ್ಮಿ । ವಾಯುವಿನ ಪ್ರಾಣನಿರುವೆನು. ಆಕಾಶದ ಪ್ರಾಣನಿರುವೆನು.

೧೮. ತ್ರಿಗುಣಸ್ಯ ಪ್ರಾಣೋऽಹಮಸ್ಮಿ। ನಾನು ತ್ರಿಗುಣಾತ್ಮದ ಪ್ರಾಣನಿರುವೆನು.

೧೯. ಸರ್ವೋऽಹಂ ಸರ್ವಾತ್ಮಕೋ ಸಂಸಾರೀ ಯದ್ಭೂತಂ ಯಚ್ಚ ಭವ್ಯಂ ಯದ್ವರ್ತಮಾನಂ ಸರ್ವಾತ್ಮಕತ್ವಾದದ್ವಿತೀಯೋऽಹಂ। ನಾನು ಸರ್ವವೂ ಇರುವೆನು. ಸರ್ವರೂಪವೂ ಇರುವೆನು. ಸಂಸಾರಿ ಜೀವಾತ್ಮನೂ

ಇರುವೆನು. ಭೂತ, ವರ್ತಮಾನ, ಭವಿಷ್ಯಗಳು ನನ್ನ ಸ್ವರೂಪವಾಗಿರುವದರಿಂದ ನಾನು ಅದ್ವಿತೀಯ ಪರಮಾತ್ಮನಾಗಿರುವೆನು.

೨೦. ಸರ್ವಂ ಖಲ್ವಿದಂ ಬ್ರಹ್ಮ (ಛಾಂದೋಗ್ಯ. ೩ । ೧೪ । ೨) ಅದೆಲ್ಲವೂ ನಿಶ್ಚಯವಾಗಿ ಬ್ರಹ್ಮನೇ ಇರುವದು.

೨೧. ಸರ್ವೋಽಹಂ ವಿಮುಕ್ತೋಽಹಂ । ನಾನು ಸರ್ವರೂಪನಿರುವೆನು, ಮುಕ್ತನಿರುವೆನು.

೨೨. ಯೋಽಸೌ ಸೋಽಹಂ ಹಂಸಃ । ಸೋಽಹಮಸ್ಮಿ । ಯಾವನು ಅವನಿರುವನೋ ಅವನು ನಾನಿರುವೆನು. ನಾನು ಅವನಿರುವೆನು, ಅವನು ನಾನಿರುವೆನು.

ವಾಮದೇವಾ, ಈ ಪ್ರಕಾರವಾಗಿ ಮಹಾವಾಕ್ಯಗಳನ್ನು ಭಗವಾನ್ ಶಿವನು ಹೇಳಿರುವನು. ಈಶಾವಾಸ್ಯೋಪನಿಷತ್ತಿನ ಎರಡು ವಾಕ್ಯಗಳಿಂದ ಪ್ರತಿಪಾದಿತ ಅರ್ಥವು ಸಾಕ್ಷಾತ್ ಶಿವನ ಏಕತ್ವದ ಜ್ಞಾನ ಪ್ರದಾನ ಮಾಡುವಂತಹದಿರುವದು. ಗುರುವು ಶಿಷ್ಯನಿಗೆ ಇವುಗಳನ್ನು ಆದರಪೂರ್ವಕವಾಗಿ ಉಪದೇಶ ಮಾಡಬೇಕು.

ಕೈಲಾಸ ಸಂಹಿತಾ ಸಂಪೂರ್ಣ.

## ವಾಯುವೀಯ ಸಂಹಿತಾ (ಪೂರ್ವಾರ್ಧ)

# ನೈಮಿಷಾರಣ್ಯ

ವ್ಯಾಸ ಉವಾಚ

ನಮಃ ಶಿವಾಯ ಸೋಮಾಯ ಸಗಣಾಯ ಸಸೂನವೇ ।
ಪ್ರಧಾನ ಪುರುಷೇಶಾಯ ಸರ್ಗಸ್ಥಿತ್ಯಂತ ಹೇತವೇ ॥
ಶಕ್ತಿರಪ್ರತಿಮಾ ಯಸ್ಯ ಹ್ಯೈಶ್ವರ್ಯಂ ಚಾಪಿ ಸರ್ವಗಂ ।
ಸ್ವಾಮಿತ್ವಂ ಚ ವಿಭುತ್ವಂ ಚ ಸ್ವಭಾವಂ ಸಂಪ್ರವಕ್ಷತೇ ॥
ತಮಜಂ ವಿಶ್ವಕರ್ಮಾಣಂ ಶಾಶ್ವತಂ ಶಿವಮವ್ಯಯಂ ।
ಮಹಾದೇವಂ ಮಹಾತ್ಮಾನಂ ವ್ರಜಾಮಿ ಶರಣಂ ಶಿವಂ ॥

ವ್ಯಾಸ– ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳಿಗೆ ಹೇತುವೂ, ಪ್ರಕೃತಿ– ಪುರುಷರಿಗೆ ಈಶ್ವರನೂ, ಪ್ರಮಥಗಣ, ಪುತ್ರದ್ವಯ– ಉಮಾಸಮೇತನೂ ಆದ ಶಿವನಿಗೆ ನಮಸ್ಕಾರವು. ಅತುಲನೀಯ ಶಕ್ತಿಯುತನಾದ, ವ್ಯಾಪಕ ಐಶ್ವರ್ಯ ವಂತನಾದ, ಸ್ವಾಮಿತ್ವ– ವಿಭುತ್ವಗಳು ಸ್ವಭಾವವಾಗಿರುವ, ವಿಶ್ವಸೃಷ್ಟನೂ, ಅಜನ್ಮನೂ, ಅವಿನಾಶಿಯೂ, ಮಹಾದೇವನೂ ಆದ ಮಂಗಲಮಯ ಪರಮಾತ್ಮ ಶಿವನಿಗೆ ನಾನು ಶರಣು ಹೋಗುವೆನು.

ಧರ್ಮಕ್ಷೇತ್ರವೂ ಮಹಾನ್ ತೀರ್ಥವೂ ಆಗಿರುವ ಗಂಗಾ, ಯಮುನಾ ಸರಸ್ವತಿ ನದಿಗಳ ತ್ರಿವೇಣಿ ಸಂಗಮದ ಪ್ರಯಾಗದಲ್ಲಿ ಶುದ್ಧಹೃದಯಿಗಳೂ, ಸತ್ಯ ಪರಾಯಣರೂ, ಮಹಾತೇಜಸ್ವಿಗಳೂ, ಮಹಾಭಾಗರೂ ಆದ ಮುನಿಗಳು ಒಂದು ಮಹಾಯಜ್ಞದ ಆಯೋಜನೆ ಮಾಡಿದರು. ಕ್ಲೇಶರಹಿತ ಕರ್ಮಾನುಷ್ಠಾನ ಮಾಡುವ ಮಹಾತ್ಮರ ಯಜ್ಞದ ಸಮಾಚಾರವನ್ನು ಕೇಳಿ, ನಿಪುಣ ಕಥಾವಾಚಕ ತ್ರಿಕಾಲವೇತ್ತನಾದ ಸೂತಪುರಾಣಿಕನು ಅಲ್ಲಿಗೆ ಬಂದನು. ಪೌರಾಣಿಕ ಶಿರೋಮಣಿಯ ಆಗಮನದಿಂದ ಮುನಿಗಳ ಮನಸ್ಸು ಪ್ರಸನ್ನತೆಯಿಂದ ಅರಳಿತು. ಅವರು ಸೂತಪುರಾಣಿಕನನ್ನು ಪೂಜಿಸಿ ಸ್ವಾಗತಿದರು.

ಮುನಿಗಳು– ಶಿವಭಕ್ತ ಶಿರೋಮಣಿಯೂ ಮಹಾ ಬುದ್ಧಿವಂತನೂ ಮಹಾ ಭಾಗನೂ ಆದ ರೋಮಹರ್ಷಣ ಸೂತಪುರಾಣಿಕನೆ, ನೀನು ಸರ್ವಜ್ಞನಿರುವೆ. ಈ ಸಮಯದಲ್ಲಿ ನೀನು ಇಲ್ಲಿಗೆ ಆಗಮಿಸಿದ್ದು ನಮ್ಮ ಮಹಾ ಸೌಭಾಗ್ಯದ ಲಕ್ಷಣವಾಗಿದೆ. ನಿನಗೆ ವಿದಿತವಾಗದ ಯಾವ ವಿಷಯಗಳೂ ಮೂಲೋಕದಲ್ಲಿ ಇಲ್ಲವೇ ಇಲ್ಲ. ಭಾಗ್ಯವಶದಿಂದ ನೀನು ಇಲ್ಲಿಗೆ ನೀನಾಗಿ ದರ್ಶನ ಕೊಟ್ಟೆ. ನಮ್ಮ ಕಲ್ಯಾಣ ಮಾಡದೆ ನೀನು ಮರಳಬಾರದು. ಆದುದರಿಂದ ವೇದಾಂತದ ಸಾರಸರ್ವಸ್ವವಾದ ಪವಿತ್ರ ಪುರಾಣವನ್ನು ಶ್ರವಣ ಮಾಡಿಸಬೇಕು.

ಸೂತಪುರಾಣಿಕ– ಮಹರ್ಷಿಗಳೆ, ನೀವು ನನ್ನನ್ನು ಬಹುಪರಿಯಾಗಿ ಸತ್ಕರಿಸಿ ನನ್ನ ಮೇಲೆ ಅತ್ಯಂತ ಕೃಪೆ ಮಾಡಿದಿರಿ. ನಾನು ಅವಶ್ಯವಾಗಿ ಪುರಾಣಪ್ರವಚನ ಕಾರ್ಯವನ್ನು ನೆರವೇರಿಸುವೆನು. ನಾನೀಗ ಭಗವಾನ್ ಶಿವ, ಭಗವತಿ ಪಾರ್ವತಿ, ಕುಮಾರ ಸ್ಕಂದ, ಗಣೇಶ, ನಂದಿ, ಸತ್ಯವತೀಕುಮಾರ ಸಾಕ್ಷಾತ್ ಭಗವಾನ್ ವ್ಯಾಸ ಮೊದಲಾದವರಿಗೆ ಪ್ರಣಾಮ ಮಾಡಿ ವೇದತುಲ್ಯವಾದ ಪುರಾಣಕಥೆಯನ್ನು ಹೇಳುವೆನು. ಪುರಾಣಗಳು ಶಿವತತ್ವಜ್ಞಾನದ ಸಾಗರಗಳಾಗಿವೆ ಹಾಗೂ ಭೋಗ,

ಮೋಕ್ಷಗಳ ಸಾಧನಗಳಾಗಿವೆ. ಆರು ವೇದಾಂಗಗಳು, ನಾಲ್ಕು ವೇದಗಳು, ಮೀಮಾಂಸಾ, ವಿಸ್ತೃತನ್ಯಾಯಶಾಸ್ತ್ರ, ಪುರಾಣ, ಧರ್ಮಶಾಸ್ತ್ರ ಇವುಗಳು ಹದಿನಾಲ್ಕು ವಿದ್ಯೆಗಳಾಗಿವೆ. ಆಯುರ್ವೇದ, ಧನುರ್ವೇದ, ಗಂಧರ್ವವೇದ, ಅರ್ಥಶಾಸ್ತ್ರ ಇವು ನಾಲ್ಕು ಕೂಡಿ ಹದಿನೆಂಟು ವಿದ್ಯೆಗಳೆನಿಸುವವು. ಇವೆಲ್ಲವುಗಳ ನಿರ್ಮಾತೃವು ತ್ರಿಕಾಲದರ್ಶಿ ವಿದ್ವಾನ್ ಸಾಕ್ಷಾತ್ ಭಗವಾನ್ ಶೂಲಪಾಣಿ ಶಿವನಾಗಿರುವನೆಂದು ಶ್ರುತಿವಚನವಿದೆ. ಸಂಪೂರ್ಣ ವಿಶ್ವದ ಸ್ವಾಮಿಯಾದ ಭಗವಾನ್ ಸದಾಶಿವನು ಸಮಸ್ತ ಸಂಸಾರವನ್ನು ಸೃಷ್ಟಿಸುವ ಇಚ್ಛೆಯುಂಟಾದಾಗ ಅವನು ತನ್ನ ಸನಾತನ ಪುತ್ರನಾದ ವಿಶ್ವಯೋನಿ ಬ್ರಹ್ಮನನ್ನು ಉತ್ಪನ್ನ ಮಾಡಿದನು. ಅವನಿಗೆ ಸೃಷ್ಟಿಜ್ಞಾನವನ್ನು ಉತ್ಪನ್ನ ಮಾಡಿಕೊಡುವ ಸಮಸ್ತ ವಿದ್ಯೆಗಳನ್ನು ಉಪದೇಶಿಸಿದನು. ತರುವಾಯ ಸೃಷ್ಟಿಪರಿಪಾಲನೆಗಾಗಿ ಶ್ರೀಹರಿಯನ್ನು ನಿಯುಕ್ತಗೊಳಿಸಿದನು. ಬ್ರಹ್ಮದೇವನು ಸೃಷ್ಟಿಯ ವಿಸ್ತಾರಕ್ಕಾಗಿ ಪ್ರಜೆಗಳನ್ನು ಉತ್ಪಾದಿಸತೊಡಗಿದನು. ಮೊದಲು ಪುರಾಣಗಳು ಪ್ರಕಟವಾದವು. ಅನಂತರದಲ್ಲಿ ನಾಲ್ಕು ವೇದಗಳು ಪ್ರಾದುರ್ಭವಿಸಿದವು. ತರುವಾಯ ಶಾಸ್ತ್ರಗಳು ಉತ್ಪನ್ನ ವಾದವು.

ದ್ವಾಪರದಲ್ಲಿ ಭಗವಾನ್ ಶ್ರೀಹರಿಯು ಸತ್ಯವತಿಯ ಗರ್ಭದಿಂದ ಕೃಷ್ಣ ದ್ವೈಪಾಯನ। ವ್ಯಾಸನೆಂಬ ಹೆಸರಿನಿಂದ ಅವತರಿಸಿದನು. ವ್ಯಾಸನು ವೇದಗಳನ್ನು ನಾಲ್ಕು ಭಾಗವಾಗಿ ವಿಭಜಿಸಿದನು. ದೇವಲೋಕದಲ್ಲಿ ಪುರಾಣಗಳ ವಿಸ್ತಾರವು ನೂರು ಕೋಟಿ ಶ್ಲೋಕಗಳಾಗಿತ್ತು. ವೇದವ್ಯಾಸನು ಅವುಗಳನ್ನು ನಾಲ್ಕು ಲಕ್ಷ ಶ್ಲೋಕಗಳನ್ನಾಗಿ ಮಾಡಿದನು. ಪುರಾಣಗಳ ಸಂಖ್ಯೆಯು ಹದಿನೆಂಟು ಇರುವದು: ೧. ಬ್ರಹ್ಮಪುರಾಣ, ೨. ಪದ್ಮಪುರಾಣ, ೩. ವಿಷ್ಣು ಪುರಾಣ, ೪. ಶಿವ ಪುರಾಣ, ೫. ಭಾಗವತ ಪುರಾಣ, ೬. ಭವಿಷ್ಯ ಪುರಾಣ, ೭. ನಾರದ ಪುರಾಣ, ೮. ಮಾರ್ಕಂಡೇಯ ಪುರಾಣ, ೯. ಅಗ್ನಿ ಪುರಾಣ ೧೦. ಬ್ರಹ್ಮವೈವರ್ತ ಪುರಾಣ, ೧೧. ಲಿಂಗ ಪುರಾಣ, ೧೨. ವಾರಾಹ ಪುರಾಣ, ೧೩. ಸ್ಕಂದ ಪುರಾಣ, ೧೪. ವಾಮನ ಪುರಾಣ, ೧೫. ಕೂರ್ಮ ಪುರಾಣ, ೧೬. ಮತ್ಸ್ಯಪುರಾಣ, ೧೭. ಗರುಡ ಪುರಾಣ, ೧೮. ಬ್ರಹ್ಮಾಂಡ ಪುರಾಣವು. ಇವು ಪವಿತ್ರ ಪುರಾಣ ಗಳಾಗಿವೆ. ಅವುಗಳಲ್ಲಿ ಶಿವಪುರಾಣ ನಾಲ್ಕನೆಯದಾಗಿದೆ. ಈ ಪುರಾಣದ ಶ್ಲೋಕ ಸಂಖ್ಯೆಯೂ ಒಂದು ಲಕ್ಷ ಇರುವದು.ಇದರ ನಿರ್ಮಾಣವನ್ನು ಭಗವಾನ್ ಶಿವನು

ಹನ್ನೆರಡು ಸಂಹಿತೆಗಳಲ್ಲಿ ನಿರ್ಮಾಣ ಮಾಡಿರುವನು. ವೇದವ್ಯಾಸನು ಈ ಗ್ರಂಥವನ್ನು ಏಳು ಸಂಹಿತೆಗಳಿಗಿಳಿಸಿ ಇಪ್ಪತ್ನಾಲ್ಕು ಸಾವಿರ ಶ್ಲೋಕಗಳಲ್ಲಿ ವರ್ಣಿಸಿರುವನು. ಧರ್ಮಾತ್ಮನಾದ ವೇದವ್ಯಾಸ ಮುನಿಯು ಕೃಪೆಯಿಂದ ಎಲ್ಲ ಪುರಾಣಗಳನ್ನು ನನಗೆ ಉಪದೇಶಿಸಿದನು. ಆ ಅಮಿತ ತೇಜಸ್ವಿಯಾದ ಮುನಿವರ್ಯನಿಗೆ ನನ್ನ ಪ್ರಣಾಮಗಳು.

ಸೂತಪುರಾಣಿಕ– ಒಂದಾನೊಂದು ಸಮಯದಲ್ಲಿ ಋಷಿ, ಮಹರ್ಷಿಗಳು ತತ್ವಜ್ಞಾನದ ವಿಷಯವಾಗಿ ವಾದ–ವಿವಾದದಲ್ಲಿ ತೊಡಗಿ, ತತ್ವನಿರೂಪಣವು ಅತ್ಯಂತ ಕಠಿಣವಾಗಿ ತೋರತೊಡಗಿದ್ದರಿಂದ ಎಲ್ಲರೂ ಬ್ರಹ್ಮದೇವನ ಬಳಿಗೆ ಹೋಗಿ, ಪರಮ ತತ್ವದ ಬಗ್ಗೆ ನಿಶ್ಚಿತವಾದ ಜ್ಞಾನ ಮಾಡಿಕೊಡಬೇಕೆಂದು ಪ್ರಾರ್ಥಿಸಿದರು.

ಬ್ರಹ್ಮದೇವ–ಮುನಿಪುಂಗವರೆ, ಭಗವಾನ್ ಶಿವನ ಕೃಪಾ ಪ್ರಸಾದವು ಪ್ರಾಪ್ತವಾಗುವದಕ್ಕಾಗಿ ನೀವೆಲ್ಲರೂ ಸ್ತ್ರೀ–ಪುತ್ರರಿಂದ ಕೂಡಿಕೊಂಡು ಕಾಯೇ, ವಾಚಾ, ಮನದಿಂದ ದೋಷರಹಿತರಾಗಿ ಶಿವಧ್ಯಾನದಲ್ಲಿ ನಿರತರಾಗಬೇಕು. ನೀವು ದೀರ್ಘಕಾಲದವರೆಗೆ ಮಹಾನ್ ಯಜ್ಞದಲ್ಲಿ ನಿರತರಾಗಬೇಕು. ಯಜ್ಞವು ಸಮಾಪ್ತವಾದ ಕೂಡಲೆ ಸಾಕ್ಷಾತ್ ವಾಯುದೇವನು ಅಲ್ಲಿಗೆ ಬಂದು ಸರ್ವಜನರಿಗೂ ಕಲ್ಯಾಣಕಾರಕವಾದ ಉಪದೇಶ ಮಾಡುವನು. ನಾನು ಈಗ ಮನೋಮಯ ಚಕ್ರವನ್ನು ನಿರ್ಮಾಣ ಮಾಡಿರುವೆನು. ಅದನ್ನು ಇಲ್ಲಿಂದ ಎಸೆಯುವೆನು. ಅದರ ನೇಮಿಯು ವಿದೀರ್ಣವಾಗಿ, ಅದು ಮುರಿದು ಚಕ್ರವು ಎಲ್ಲಿ ಬೀಳುವದೋ ಅದು ಶುಭದೇಶವು. ಅದು ಜಲಪೂರ್ಣವಾಗಿರುವದು. ಆ ಮುನಿಯ ಪೂಜಿತ ವನವು ನೈಮಿಷಾರಣ್ಯವೆಂಬ ಹೆಸರಿನಿಂದ ಪ್ರಸಿದ್ಧವಾಗುವದು. ಅಲ್ಲಿ ಯಕ್ಷ, ಗಂಧರ್ವ, ವಿದ್ಯಾಧರರು ವಾಸ ಮಾಡುವರು. ಪೂರ್ವಕಾಲದಲ್ಲಿ ಸೃಷ್ಟಿಯನ್ನು ರಚನೆ ಮಾಡುವ ಪ್ರಜಾಪತಿಗಳು ಇಲ್ಲಿಯೇ ಅನೇಕ ದಿವ್ಯ ಯಜ್ಞಗಳನ್ನು ಮಾಡಿರುವರು. ನೈಮಿಷಾರಣ್ಯವು ಯಜ್ಞಗಳಿಗೂ ತಪಸ್ಸಿಗೂ ಪವಿತ್ರ ಭೂಮಿಯಾಗಿದೆ. ನೀವು ಮಹಾಯಜ್ಞವನ್ನು ನೆರವೇರಿಸಿರಿ. ನಿಮ್ಮ ಯಜ್ಞ ಸಮಾಪ್ತಿಯಾದ ಕೂಡಲೆ ಅಲ್ಲಿಗೆ ಆಕಾಶ ಪುತ್ರನಾದ ವಾಯುದೇವನು ಬಂದು ನಿಮಗೆ ದಿವ್ಯ ತತ್ವೋಪದೇಶ ಮಾಡುವನು.

ಸೂತಪುರಾಣಿಕ– ಬ್ರಹ್ಮದೇವನು ಹೀಗೆ ಹೇಳಿದ ಬಳಿಕ ಎಲ್ಲ ಋಷಿಗಳೂ

ನೈಮಿಷಾರಣ್ಯಕ್ಕೆ ಹೋಗಿ ಯಜ್ಞವನ್ನು ಪ್ರಾರಂಭಿಸಿದರು. ಆ ಯಜ್ಞವು ಬಹಳ ಕಾಲ ನಡೆಯಿತು. ಯಜ್ಞ ಸಮಾಪ್ತಿಯಾಗಿ ಅವಭೃತ ಸ್ನಾನವಾದ ಬಳಿಕ ಬ್ರಹ್ಮದೇವನ ಆಜ್ಞೆಯಂತೆ ವಾಯುದೇವನು ಅಲ್ಲಿಗೆ ಬಂದನು. ಋಷಿಗಳು ಅವನ ಆಗಮನದಿಂದ ಸಂತುಷ್ಟರಾಗಿ ಅವನನ್ನು ಸತ್ಕರಿಸಿ, ಸುವರ್ಣ ಪೀಠದಲ್ಲಿ ಕುಳ್ಳಿರಿಸಿ ಪೂಜಿಸಿದರು. ವಾಯುದೇವನು ಅವರ ಸುಖ ಸಮಾಚಾರಗಳನ್ನು ವಿಚಾರಿಸಿದನು. ಋಷಿಗಳು ತಮ್ಮ ಮಹಾಯಜ್ಞವು ಪೂರ್ತಿಗೊಂಡ ಸಂಗತಿಯನ್ನು ನಿವೇದಿಸಿದರು.

ವಾಯುದೇವ–ಮುನಿಗಳೆ, ನೀವು ಸಕುಶಲರಾಗಿ ಯಜ್ಞಾನುಷ್ಠಾನವನ್ನು ಪೂರ್ತಿಗೊಳಿಸಿರುವಿರಿ. ನೀವು ಇನ್ನು ಮೇಲೆ ಯಾವ ಕಾರ್ಯಗಳನ್ನು ಮಾಡ ಬೇಕೆಂದಿರುವಿರಿ ?

ಮುನಿಗಳು–ಪ್ರಭುವೆ, ಬ್ರಹ್ಮದೇವನ ಅನುಜ್ಞೆಯಂತೆ ನಮ್ಮ ಕಲ್ಯಾಣ ವೃದ್ಧಿಗಾಗಿಯೇ ನಿನ್ನ ಆಗಮನವಾಗಿದೆ. ನಮಗೆ ತತ್ವೋಪದೇಶ ಮಾಡಬೇಕು. ನೀನು ಈಶ್ವರವಿಷಯಕ ಜ್ಞಾನವನ್ನು ಹೇಗೆ ಹೊಂದಿದೆ ? ಅವ್ಯಕ್ತಜನ್ಮನಾದ ಬ್ರಹ್ಮದೇವನ ಶಿಷ್ಯನು ಯಾವ ಪ್ರಕಾರವಾಗಿ ಆಗಿರುವೆ ?

ವಾಯುದೇವ–ಮಹರ್ಷಿಗಳೆ, ಹತ್ತೊಂಭತ್ತನೆಯ ಕಲ್ಪದ ಹೆಸರು ಶ್ವೇತಲೋಹಿತ ಕಲ್ಪವಾಗಿರುವದು. ಆ ಕಲ್ಪದಲ್ಲಿ ಚತುರ್ಮುಖ ಬ್ರಹ್ಮನು ಸೃಷ್ಟಿಯ ಕಾಮನೆಯಿಂದ ತಪಸ್ಸು ಮಾಡಿದನು. ಆಗ ದೇವಾಧಿದೇವ ಮಹೇಶ್ವ ರನು ಶ್ವೇತನಾಮಕ ಮುನಿಯ ರೂಪದಿಂದ ಬ್ರಹ್ಮದೇವನಿಗೆ ಉತ್ತಮೋತ್ತಮ ಜ್ಞಾನವನ್ನು ಉಪದೇಶಿಸಿದನು. ನಾನು ಬ್ರಹ್ಮದೇವನಿಂದ ಜ್ಞಾನ ಪ್ರಾಪ್ತಿ ಹೊಂದಿ ದೆನು. ಆ ಜ್ಞಾನದಿಂದ ಪರಮಾನಂದವು ಪ್ರಾಪ್ತವಾಗುವದು. ಈ ಧರ್ಮಕ್ಷೇತ್ರ ವಾದ ನೈಮಿಷಾರಣ್ಯದಲ್ಲಿ ನಿಮಗೆ ಆ ಜ್ಞಾನವನ್ನು ಉಪದೇಶಿಸುವೆನು.

## ಶಕ್ತಿ ದೇವಿಗೆ ಶಾಪ

ವಾಯುದೇವ–ಮಹರ್ಷಿಗಳೆ, ನಾನು ಪೂರ್ವಕಾಲದಲ್ಲಿ ಪಶು, ಪಾಶ, ಪಶುಪತಿ ಇವುಗಳ ವಿಷಯದಲ್ಲಿ ಜ್ಞಾನವನ್ನು ಹೊಂದಿದೆನು. ಸುಖಾಪೇಕ್ಷಿಯು ಅವುಗಳ ಬಗ್ಗೆ ನಿಷ್ಠೆಯುಳ್ಳವನಾಗಿರಬೇಕು. ಅಜ್ಞಾನದಿಂದ ಉತ್ಪನ್ನವಾಗುವ ದುಃಖಗಳು ಜ್ಞಾನದಿಂದ ದೂರವಾಗುವವು. ವಸ್ತುವಿನ ಬಗ್ಗೆ ವಿವೇಕವನ್ನು

ಹೊಂದುವದೇ ಜ್ಞಾನವು. ವಸ್ತುಗಳಲ್ಲಿ ಮೂರು ಭೇದಗಳಿವೆ. ಜಡ (ಪ್ರಕೃತಿ) ಚೇತನ (ಜೀವ) ಮತ್ತು ಅವುಗಳ ನಿಯಂತ (ಪರಮೇಶ್ವರ). ಇವು ಮೂರನ್ನೂ ಕ್ರಮದಿಂದ ಪಾಶ, ಪಶು, ಪಶುಪತಿ ಎಂದು ಹೇಳುವರು. ತತ್ವಜ್ಞ ಪುರುಷನು ಪ್ರಾಯಶಃ ಈ ಮೂರುತತ್ವಗಳಿಗೆ ಕ್ಷರ, ಅಕ್ಷರ ಹಾಗೂ ಇವುಗಳಿಂದ ಅತೀತ ಎಂದೆನ್ನುವರು. ಕ್ಷರತತ್ವದ ಹೆಸರು ಪಾಶವು. ಕ್ಷರ ಹಾಗೂ ಅಕ್ಷರ ಇವೆರಡರ ಅತೀತವೆಂದರೆ ಪರಮತತ್ವವು. ಅದಕ್ಕೇ ಪಶುಪತಿ ಎಂದೆನ್ನುವರು. ಪ್ರಕೃತಿಗೆ ಕ್ಷರವೆನ್ನುವರು. ಪುರುಷ (ಜೀವ)ನು ಅಕ್ಷರನೆನಿಸಿಕೊಳ್ಳುವನು. ಇವೆರಡನ್ನೂ ಪ್ರೇರೇಪಿಸುವವನು ಕ್ಷರ ಹಾಗೂ ಅಕ್ಷರಗಳಿಂದ ಭಿನ್ನವಾದ ತತ್ವವು ಪರಮೇಶ್ವರನು. ಮಾಯೆಯ ಹೆಸರೇ ಪ್ರಕೃತಿ. ಪುರುಷನು ಮಾಯೆಯಿಂದ ಪರಿವೃತನಾಗಿರುವನು. ಮಲ ಹಾಗೂ ಕರ್ಮಗಳ ದ್ವಾರವಾಗಿ ಪುರುಷನೊಡನೆ ಪ್ರಕೃತಿಯ ಸಂಬಂಧವುಂಟಾಗುವದು. ಶಿವನು ಇವೆರಡರ ಪ್ರೇರಕನಾದ ಈಶ್ವರನು. ಮಾಯೆಯು ಪರಮೇಶ್ವರನ ಶಕ್ತಿಯು. ಚಿತ್ಸ್ವರೂಪ ಜೀವವು ಆ ಮಾಯೆಯಿಂದ ಆವೃತವಾಗಿದೆ. ಚೇತನಜೀವವನ್ನು ಆಚ್ಛಾದಿಸುವ ಅಜ್ಞಾನಮಯ ಪಾಶವೂ ಮಲವೆನಿಸುವದು. ಅದರಿಂದ ಶುದ್ಧವಾಯಿತೆಂದರೆ ಜೀವವು ಶಿವ ನಾಗುವದು.

ಮಹರ್ಷಿಗಳೆ, ಈ ವಿಶ್ವವನ್ನು ನಿರ್ಮಾಣಮಾಡುವವನು ಪಶುಪತಿಯು. ಅವನು ಅನಂತ ಗುಣಗಳಿಗೆ ಆಶ್ರಯನಾಗಿರುವನು. ಅವನು ಪಶುಗಳನ್ನು ಪಾಶದಿಂದ ಮುಕ್ತ ಮಾಡುವವನಿರುವನು. ಅವನಿಲ್ಲದೆ ಸೃಷ್ಟಿಯು ನಿರ್ಮಾಣ ವಾಗುವದಿಲ್ಲ. ಯಾಕೆಂದರೆ ಪಶುವು ಅಜ್ಞಾನಿಯು. ಪಾಶವು ಅಚೇತನವಾಗಿದೆ. ಜಡವಸ್ತುಗಳ ಕರ್ತನು ಪಶುಪತಿಯಾಗಿರುವನು. ಮಹೇಶ್ವರನು ವ್ಯಕ್ತಾವ್ಯಕ್ತ ಜಗತ್ತಿನ ಭರಣ, ಪೋಷಣೆಗಳನ್ನು ಮಾಡುವನು. ಅವನು ಸಂಸಾರಬಂಧನದಿಂದ ಮುಕ್ತಗೊಳಿಸುವನು. ಸೃಷ್ಟಿಯ ಆರಂಭದಲ್ಲಿ ಏಕಮಾತ್ರ ರುದ್ರದೇವನು ವಿದ್ಯಮಾನನಾಗಿರುವನು. ಅವನು ಈ ಸಂಸಾರವನ್ನು ಸೃಷ್ಟಿಸುವನು; ರಕ್ಷಣೆ ಮಾಡುವನು; ಕೊನೆಗೆ ಎಲ್ಲವನ್ನೂ ಸಂಹಾರ ಮಾಡುವನು. ಇವನು ಬ್ರಹ್ಮದೇವನನ್ನು ಉತ್ಪನ್ನ ಮಾಡುವನು. ಇವನಿಂದ ಶ್ರುತಿಗಳು ಉತ್ಪನ್ನವಾಗುವವು. ಇವನು ಮಹಾನ್ ಋಷಿಯು. ಇವನಿಗಿಂತ ಸೂಕ್ಷ್ಮವಾದದ್ದೂ ಹಾಗೂ ಇವನಿಗಿಂತ ದೊಡ್ಡದಾದದ್ದೂ ಯಾವದೂ ಇಲ್ಲ. ಇವನು ಅಣುವಿಗಿಂತ ಅಣುವು, ಮಹಾನ್

ಕ್ಕಿಂತ ಮಹಾನ್‌ನು ಆಗಿರುವನು. ಈ ಅವಿನಾಶಿ ಮಹೇಶ್ವರನು ಜೀವದ ಹೃದಯ ಗುಹೆಯಲ್ಲಿ ನಿವಾಸ ಮಾಡುವನು.

ವೇದಾಂತ ಶಾಸ್ತ್ರದ ಪರಮ ಗೋಪನೀಯ ಜ್ಞಾನವನ್ನು ಬ್ರಹ್ಮದೇವನು ಪೂರ್ವಕಲ್ಪದಲ್ಲಿ ನನಗೆ ಉಪದೇಶಿಸಿದನು. ಶಮ, ದಮಗಳಿಲ್ಲದವನಿಗೆ ಈ ವೇದಾಂತ ಶಾಸ್ತ್ರವನ್ನು ಉಪದೇಶಿಸಬಾರದು. ಸದಾಚಾರವಿಲ್ಲದ ಮಗನಿಗೂ ಕೂಡ ಅದನ್ನು ಹೇಳಬಾರದು. ಪರಮದೇವ ಪರಮೇಶ್ವರನಲ್ಲಿ ಭಕ್ತಿಭಾವ ವುಳ್ಳವನಿಗೆ ಶಿವತತ್ವಗಳನ್ನು ಉಪದೇಶಿಸಬೇಕು.

ಮಹೇಶ್ವರ ಪ್ರೇರಣೆಯಿಂದ ಬ್ರಹ್ಮದೇವನು ಸೃಷ್ಟಿಕಾರ್ಯವನ್ನು ಪ್ರಾರಂಭಿಸಿದನು. ಅವನು ಸನಕ, ಸನಂದನ, ಸನಾತನ, ಸನತ್ಕುಮಾರ, ಋಭು ಎಂಬ ಐವರು ಮಾನಸಪುತ್ರರನ್ನು ಉತ್ಪನ್ನ ಮಾಡಿದನು. ಇವರೆಲ್ಲರೂ ಯೋಗಿಗಳೂ ವೀತರಾಗಿಗಳೂ ಆಗಿ ಈಶ್ವರಚಿಂತನೆಯಲ್ಲಿ ಮಗ್ನರಾಗಿ ಇರುತ್ತಿದ್ದರು. ಆದುದರಿಂದ ಅವರು ಸೃಷ್ಟಿಕಾರ್ಯವನ್ನು ನೆರವೇರಿಸುವ ಇಚ್ಛೆಯುಳ್ಳವರಾಗಿರಲಿಲ್ಲ. ಆಗ ಬ್ರಹ್ಮದೇವನು ಮತ್ತೆ ತಪಶ್ಚರ್ಯ ಮಾಡಿದನು. ದೀರ್ಘಕಾಲದವರೆಗೆ ಆ ತಪಶ್ಚರ್ಯದಿಂದ ಪ್ರಯೋಜನವಾಗದ್ದರಿಂದ ಅವನಿಗೆ ದುಃಖವಾಯಿತು. ಆಗ ಅವನ ಎರಡೂ ನೇತ್ರಗಳಿಂದ ದುಃಖಾಶ್ರುಗಳು ಉದುರ ತೊಡಗಿದವು. ಆ ಅಶ್ರುಬಿಂದುಗಳಿಂದ ಭೂತ, ಪ್ರೇತಗಳು ಉತ್ಪನ್ನವಾದವು. ಬ್ರಹ್ಮದೇವನು ಈ ಘಟನೆಯಿಂದ ಮತ್ತಿಷ್ಟು ದುಃಖಿತನಾದನು. ಅವನು ತನ್ನನ್ನು ತಾನೇ ನಿಂದಿಸಿಕೊಂಡನು. ಕ್ರೋಧ, ಮೋಹಗಳು ಅವನಿಗೆ ಆವಿಷ್ಟವಾದುದ ರಿಂದ ಮೂರ್ಛಿತನಾದನು. ತರುವಾಯ ಅವನು ಪ್ರಾಣತ್ಯಾಗ ಮಾಡಿದನು. ಆಗ ಪ್ರಾಣಗಳ ಸ್ವಾಮಿಯಾದ ಭಗವಾನ್ ನೀಲಲೋಹಿತ ರುದ್ರದೇವನು ಬ್ರಹ್ಮನ ಮುಖದಿಂದ ಉತ್ಪನ್ನನಾದನು. ತರುವಾಯ ಜಗದೀಶ್ವರ ಪ್ರಭುವು ಹನ್ನೊಂದು ರುದ್ರರ ರೂಪದಿಂದ ಪ್ರಕಟನಾದನು. ಮಹೇಶ್ವರನು ಬ್ರಹ್ಮದೇವನಿಗೆ ಪ್ರಾಣ ದಾನ ಮಾಡಿ ಪ್ರಜಾಸೃಷ್ಟಿ ಮಾಡಲು ಆಜ್ಞೆ ಮಾಡಿದನು. ಬ್ರಹ್ಮದೇವನು ಭಗವಾನ್ ಮಹಾದೇವನನ್ನು ಸ್ತುತಿಸಿ ಪ್ರಣಾಮಗಳನ್ನರ್ಪಿಸಿ ಸೃಷ್ಟಿ ಕಾರ್ಯಕ್ಕೆ ಸಿದ್ಧನಾದನು.

ಬ್ರಹ್ಮದೇವನು ತನ್ನ ಮನದಿಂದ ಮರೀಚಿ, ಅಂಗೀರಾ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ ಎಂಬ ಪ್ರಜಾಪತಿಗಳನ್ನು ನಿರ್ಮಾಣ ಮಾಡಿದನು. ಇವರ

ವಂಶವೇ ಜಗತ್ತಿನಲ್ಲಿ ವಿಸ್ತಾರವಾಯಿತು. ದೇವತೆಗಳು, ರಾಕ್ಷಸರು, ಪಿತೃಗಳು, ಯಕ್ಷರು, ಭೂತಗಳು, ಸರ್ಪ, ಪಶುಪಕ್ಷಿಗಳು ಉತ್ಪನ್ನವಾದ ಬಳಿಕ ಬ್ರಹ್ಮದೇವನ ಮುಖದಿಂದ ಗಾಯತ್ರಿ, ಛಂದ, ವೇದಗಳು, ಯಜ್ಞಗಳು ಉತ್ಪನ್ನವಾದವು. ಅಚಿಂತ್ಯರೂಪ ಮಹೇಶ್ವರನು ಸೃಷ್ಟಿಯ ನಿರ್ಮಾತೃವಾಗಿರುವನು. ಅವನು ಬ್ರಹ್ಮ-ವಿಷ್ಣು-ರುದ್ರರನ್ನು ಸೃಷ್ಟಿಯ ಸ್ಥಿತಿ, ಪಾಲನೆ, ಸಂಹಾರ ಕಾರ್ಯಕ್ಕಾಗಿಯೇ ನೇಮಿಸಿರುವನು. ಅವನೇ ಈ ತ್ರಿಮೂರ್ತಿಗಳಿಗೆ ಆ ಶಕ್ತಿಯನ್ನು ಪ್ರದಾನ ಮಾಡಿರುವನು.

ಬ್ರಹ್ಮದೇವನು ಭಗವಾನ್ ರುದ್ರದೇವನಿಗೆ ಸೃಷ್ಟಿಕಾರ್ಯ ಮಾಡಲು ಬೇಡಿಕೊಂಡನು. ಆಗ ರುದ್ರದೇವನು ನಿರ್ಮಾಣ ಮಾಡಿದ ಸೃಷ್ಟಿಯು ಅತ್ಯಂತ ಉಗ್ರವಾಗಿತ್ತು. ಅವನು ತನ್ನ ಆಕಾರದ ಉಗ್ರ ರುದ್ರಗಣವನ್ನು ಉತ್ಪನ್ನ ಮಾಡಿದನು. ಬ್ರಹ್ಮದೇವನು ಅವನಿಗೆ ನಮಸ್ಕರಿಸಿ, ನೀನು ಇಂತಹ ಪ್ರಜೆಗಳನ್ನು ಸೃಷ್ಟಿಸಕೂಡದೆಂದು ಪ್ರಾರ್ಥಿಸಿದನು. ಆಗ ರುದ್ರದೇವನು ಸೃಷ್ಟಿಕಾರ್ಯದಿಂದ ನಿವೃತ್ತನಾದನು. ತರುವಾಯ ಬ್ರಹ್ಮದೇವನು ಮೈಥುನೀ ಸೃಷ್ಟಿಯನ್ನು ನಿರ್ಮಾಣ ಮಾಡಬೇಕೆಂದು ಯೋಚಿಸಿದನು. ಅದಕ್ಕಾಗಿ ಅವನು ತಪಶ್ಚರ್ಯ ಮಾಡ ತೊಡಗಿದನು. ಆದ್ಯಾ, ಅನಂತ, ಲೋಕಭಾವಿನೀ, ಸೂಕ್ಷ್ಮತರಾ, ಶುದ್ಧಾ, ಭಾವಗಮ್ಯಾ, ಮನೋಹರಾ, ನಿರ್ಗುಣ, ನಿಷ್ಪ್ರಪಂಚಾ, ನಿಷ್ಕಲಾ, ನಿತ್ಯಾ, ಪರಮಾಶಕ್ತಿ ಮೊದಲಾದವುಗಳಿಂದ ಯುಕ್ತನಾದ ಭಗವಾನ್ ತ್ರಿಲೋಚನನನ್ನು ಹೃದಯದಲ್ಲಿ ಚಿಂತನೆ ಮಾಡುತ್ತ ಬ್ರಹ್ಮದೇವನು ಬಹು ಕಾಲ ಧ್ಯಾನ ಮಾಡಿದನು. ಆಗ ಮಹಾದೇವನು ಅರ್ಧನಾರೀ ನಟೇಶ್ವರನ ರೂಪದಿಂದ ಪ್ರಕಟನಾದನು. ಆಗ ಬ್ರಹ್ಮದೇವನು ಮಹೇಶ್ವರನನ್ನೂ ಉಮೆಯನ್ನೂ ಬಗೆಬಗೆಯಾಗಿ ಸ್ತುತಿಸಿದನು. ಆಗ ಮಹೇಶ್ವರನ ವಾಮಭಾಗದಿಂದ ಭಗವತಿ ರುದ್ರಾಣಿಯು ಪ್ರಕಟಳಾದಳು. ಬ್ರಹ್ಮದೇವನು ಮಹಾದೇವನಿಗೂ ಮಹಾದೇವಿಗೂ ವಂದಿಸಿ ದನು. ತರುವಾಯ ಅವನು ವರದಾಯಿನಿ ಮಾಯಾದೇವೇಶ್ವರಿಯನ್ನು ಬೇಡಿ ಕೊಂಡನು.

ಬ್ರಹ್ಮದೇವ-ರುದ್ರಾಣಿ, ನೀನು ಜಗತ್ತಿನ ವೃದ್ಧಿಗಾಗಿ ದಕ್ಷ ಪ್ರಜಾಪತಿಯ ಪುತ್ರಿಯಾಗಿ ಜನಿಸಬೇಕು.

ಬ್ರಹ್ಮದೇವನ ಪ್ರಾರ್ಥನೆಯನ್ನು ನೆರವೇರಿಸಬೇಕೆಂದು ಶಂಕರನು ಉಮೆಗೆ ಹೇಳಿದನು. ತರುವಾಯ ಶಿವ–ಶಕ್ತಿಯರು ಅಂತರ್ಧಾನರಾದರು.

ಬ್ರಹ್ಮದೇವನು ತನ್ನ ಶರೀರದ ಬಲಭಾಗದಿಂದ ಸ್ವಾಯಂಭುವ ಮನುವನ್ನೂ ಎಡಭಾಗದಿಂದ ಶತರೂಪೆಯನ್ನೂ ಉತ್ಪನ್ನ ಮಾಡಿದನು. ಶತರೂಪಾದೇವಿಯು ಮನುವನ್ನು ಪತಿಯನ್ನಾಗಿ ಸ್ವೀಕರಿಸಿದಳು. ಶತರೂಪೆಯ ಮೂರನೆಯ ಪುತ್ರಿಯಾದ ಪ್ರಸೂತಿಯು ದಕ್ಷಪ್ರಜಾಪತಿಯನ್ನು ವರಿಸಿದಳು. ಈ ದಂಪತಿಗಳ ಉದರದಿಂದ ಸತಿದೇವಿಯು ಜನಿಸಿದಳು. ಇವಳೇ ಭಗವತಿ ಆದಿ ಶಕ್ತಿಯು. ಇವಳು ಭಗವಾನ್ ರುದ್ರದೇವನನ್ನು ವಿವಾಹವಾದಳು. ಸತಿ ದೇವಿಯು ದಕ್ಷಯಜ್ಞದಲ್ಲಿ ತಂದೆಯಿಂದ ಅಪಮಾನಿತಳಾದುದರಿಂದ ಯೋಗಾಗ್ನಿ ದಗ್ಧಳಾದಳು. ರುದ್ರಾಣಿಯು ಹಿಮರಾಜನ ಪುತ್ರಿಯಾಗಿ ಜನಿಸಿದಳು. ಅವಳಿಗೆ ಪಾರ್ವತಿಯೆಂಬ ಹೆಸರು ಪ್ರಾಪ್ತವಾಯಿತು ಪಾರ್ವತಿಯು ತಪವನ್ನಾಚರಿಸಿ ಭಗವಾನ್ ರುದ್ರದೇವನನ್ನು ವರಿಸಿದಳು.

ವಾಯುದೇವ–ಗಿರಿರಾಜ ಮಂದರಾಚಲನು ಭಗವಾನ್ ಮಹಾ ದೇವನೂ, ಅಂಬಿಕಾದೇವಿಯೂ ತನ್ನಲ್ಲಿ ನಿವಾಸ ಮಾಡಬೇಕೆಂಬ ಉದ್ದೇಶದಿಂದ ತಪಾಚರಣೆ ಮಾಡಿ ಸಫಲನಾದನು. ಆಗ ತ್ರಿಲೋಚನನಾದ ಶಿವನೂ ಮಹಾದೇವಿಯೂ ಮಂದರಾಚಲದ ಉದ್ಯಾನದಲ್ಲಿ ವಾಸಮಾಡತೊಡಗಿದರು. ಕೆಲವು ಕಾಲ ಕಳೆದ ಬಳಿಕ ಬ್ರಹ್ಮದೇವನು ಶಿವನ ಬಳಿಗೆ ಬಂದು, ತನ್ನಿಂದ ವರವನ್ನು ಪಡೆದ ಶುಂಭ, ನಿಶುಂಭ ದೈತ್ಯರು ಗಂಡಾಂತರಕಾರಿಯಾಗಿ ಪರಿಣಮಿಸಿರುವ ರೆಂದೂ, ಪಾರ್ವತಿದೇವಿಯ ಅಂಶದಿಂದ ಉತ್ಪನ್ನಳಾಗುವ ಅಯೋನಿಜೆಯಾದ ಶಕ್ತಿದೇವತೆಯಿಂದ ಮಾತ್ರ ಅವನ ವಧೆಯು ಸಾಧ್ಯವೆಂದೂ ತಿಳಿಸಿದನು. ರುದ್ರದೇವನು ಅವನ ಹೇಳಿಕೆಗೆ ಅನುಮೋದನೆ ಕೊಟ್ಟು ಕಳುಹಿಸಿದನು. ತರುವಾಯ ರುದ್ರದೇವನು ಪಾರ್ವತಿಗೆ "ಕಾಲಿ" ಆಗೆಂದು ಹೇಳಿದನು. ಪತಿಯು ವೃಥಾ ತನಗೆ ಶಪಿಸಿದ್ದಕ್ಕಾಗಿ ಪಾರ್ವತಿಯು ಕ್ರುದ್ಧಳಾದಳು.

ದೇವಿ–ಪ್ರಭುವೆ, ನೀನು ವೃಥಾ ನನಗೆ ಶಿಕ್ಷೆ ವಿಧಿಸಿದೆ. ಪತಿಯ ಪ್ರೇಮಕ್ಕೆ ವಂಚಿತಳಾದ ಸ್ತ್ರೀಯ ಜನ್ಮವು ವ್ಯರ್ಥವು.

ಶಿವ–ಭವಾನಿ, ನಿನ್ನ ಮೇಲೆ ನನ್ನ ಪ್ರೇಮವು ಇಲ್ಲವೆಂದು ಭಾವಿಸದಿರು. ನಮ್ಮಿಬ್ಬರ ಪ್ರೇಮವು ಕಾಮದೇವನ ಪ್ರೇರಣೆಯಿಂದ ಕೂಡಿದ್ದಲ್ಲ. ಕಾಮದೇವನು

ಉತ್ಪನ್ನವಾಗುವ ಮೊದಲೇ ಜಗತ್ತು ಉತ್ಪನ್ನವಾಗಿದೆ. ಸಾಮಾನ್ಯ ಜನರ ರತಿಕ್ರೀಡೆಗಾಗಿ ಕಾಮದೇವನ ಸೃಷ್ಟಿಯಾಗಿದೆ. ನಾನು ಅವನನ್ನು ಭಸ್ಮ ಮಾಡಿರುವೆನು. ನಮ್ಮಿಬ್ಬರ ಲೀಲಾವಿಹಾರವು ಜಗತ್ತಿನ ಕಲ್ಯಾಣಕ್ಕಾಗಿ ಇರುವದು. ನನ್ನ ಮಾತಿನ ಸತ್ಯತೆಯು ನಿನಗೆ ಬೇಗನೆ ತೋರುವದು.

ದೇವಿ–ಭಗವನ್, ನನ್ನ ವರ್ಣವು ಗೌರವಾಗಿರದ್ದರಿಂದ ನಾನು ನಿನಗೆ ಪ್ರಿಯಳಾಗಲಾರೆನು. ಈ ಶ್ಯಾಮ ವರ್ಣವನ್ನು ಬದಲಿಸಿ ಗೌರಿಯಾಗುವದಕ್ಕಾಗಿ ನಾನು ತಪಸ್ಸು ಮಾಡುವೆನು.

## ಕೌಶಿಕಿ

ವಾಯುದೇವ–ಮುನಿಗಳೆ, ಜಗನ್ಮಾತೆ ಪಾರ್ವತೀದೇವಿಯು ರುದ್ರದೇವನಿಗೆ ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಪತಿವಿಯೋಗ ದುಃಖವನ್ನು ಸಹನ ಮಾಡಿಕೊಂಡು ಹಿಮಾಚಲಕ್ಕೆ ನಡೆದಳು. ಮೊದಲು ಕೌಮಾರ್ಯಾವಸ್ಥೆಯಲ್ಲಿ ತನ್ನ ಸಖಿಯರಾದ ಜಯೆ, ವಿಜಯೆರೊಡನೆ ತಪಶ್ಚರ್ಯ ಮಾಡಿದ ಸ್ಥಳಕ್ಕೆ ಅವಳು ಬಂದಳು. ತರುವಾಯ ಅವಳು ತಂದೆ–ತಾಯಿಗಳ ದರ್ಶನ ಹೊಂದಿ, ಎಲ್ಲ ಭೂಷಣಗಳನ್ನು ಅವರ ವಶಕ್ಕೆ ಕೊಟ್ಟಳು. ಅವರಿಗೆ ಎಲ್ಲ ಘಟನೆಯನ್ನು ತಿಳಿಸಿ ತಪೋವನಕ್ಕೆ ಬಂದಳು. ಅವಳು ನಿತ್ಯ ಮೂರುಸಲ ಸ್ನಾನಮಾಡಿ ಶಿವನ ಪೂಜೆಯನ್ನು ಮಾಡುತ್ತಿದ್ದಳು. ಪತಿಯಾದ ಶಂಕರನು ಬ್ರಹ್ಮದೇವನ ರೂಪದಿಂದ ತನಗೆ ದರ್ಶನ ಕೊಡುವನೆಂಬ ದೃಢ ವಿಶ್ವಾಸದಿಂದ ಅವಳು ತಪಾಚರಣೆ ಮಾಡತೊಡಗಿದಳು. ಆಗ ಒಂದು ಮಹಾ ವ್ಯಾಘ್ರವು ಅಲ್ಲಿಗೆ ಬಂದಿತು. ಆರ್ಭಟಿಸುತ್ತ ಬಂದ ಹುಲಿಯು ಪಾರ್ವತಿ ದೇವಿಯನ್ನು ಕಂಡಕೂಡಲೆ ಸ್ತಬ್ಧವಾಯಿತು. ಕ್ಷುಧೆಯಿಂದ ಬಳಲಿದ ಆ ದುಷ್ಟ ಮೃಗವು ಶಾಂತವಾಯಿತು. ಅದು ಜಗನ್ಮಾತೆಯ ಸೇವೆ ಮಾಡುತ್ತ ಅಲ್ಲಿಯೇ ವಾಸವಾಯಿತು.

ಶುಂಭ, ನಿಶುಂಭರು ಉನ್ಮತ್ತರಾಗಿ ಜಗತ್ತಿಗೆ ಗಂಡಾಂತರಕಾರಿಗಳಾಗಿದ್ದರು. ಆಗ ದೇವತೆಗಳು ತಮ್ಮ ವಿಪತ್ತನ್ನು ಪರಿಹರಿಸಬೇಕೆಂದು ಬ್ರಹ್ಮದೇವನನ್ನು ಪ್ರಾರ್ಥಿಸಿದರು. ಆಗ ಬ್ರಹ್ಮದೇವನು ಜಗಜ್ಜನನಿ ಪಾರ್ವತಿ ದೇವಿಯ ಬಳಿಗೆ ಬಂದು, ಕೈ ಜೋಡಿಸಿ ಪ್ರಾರ್ಥಿಸಿದನು.

ಬ್ರಹ್ಮದೇವ–ದೇವಿ, ನೀನು ನಿನ್ನ ಮನದ ಉದ್ದೇಶವು ಸಿದ್ಧಿಸಬೇಕೆಂದು ತಪಾಚರಣೆ ಮಾಡತೊಡಗಿರುವೆ. ಎಲ್ಲ ಸಿದ್ಧಿಗಳು ನಿನ್ನ ಅಧೀನದಲ್ಲಿಯೇ ಇರುವವು. ನೀನು ನಿನ್ನ ಪತಿಯಾದ ಮಹಾದೇವನನ್ನು ತೊರೆದು ಈ ಭಯಾನಕ ವನದಲ್ಲಿ ತಪಶ್ಚರ್ಯ ಮಾಡತೊಡಗಿದ್ದು ನೋಡಿ ನನಗೆ ಆಶ್ಚರ್ಯವಾಗಿದೆ.

ದೇವಿ–ಬ್ರಹ್ಮದೇವಾ, ನಿನಗೆ ಆಶ್ಚರ್ಯವೇ? ನೀನೇ ಈ ನಾಟಕದ ಸೂತ್ರಧಾರನು. ಎಲ್ಲವೂ ನಿನ್ನ ನಿಯಮ. ಸೃಷ್ಟಿಯ ಆದಿ ಕಾಲದಲ್ಲಿ ಮಹಾದೇವ ನಿಂದ ನಿನ್ನ ಉತ್ಪತ್ತಿಯು. ಆಗ ಸಮಸ್ತ ಪ್ರಜೆಗಳಲ್ಲಿ ನೀನೂ ನನ್ನ ಪುತ್ರನಾಗಿರುವದರಿಂದ ನೀನು ನನ್ನ ಮಗನಾದೆ. ತರುವಾಯ ಪ್ರಜಾವೃದ್ಧಿಗಾಗಿ ರುದ್ರದೇವನು ನಿನ್ನ ಹಣೆಯಿಂದ ಉತ್ಪನ್ನನಾದನು. ನಾನು ರುದ್ರದೇವನನ್ನು ವರಿಸಿದ್ದರಿಂದ ನಾನು ನಿನ್ನ ಸೊಸೆಯಾದೆನು. ನನ್ನ ತಂದೆಯಾದ ಗಿರಿರಾಜ ಹಿಮಾಲಯನು ನಿನ್ನ ಪುತ್ರನಾಗಿರುವದರಿಂದ ನೀನು ನನಗೆ ಪಿತಾಮಹನಾಗಿರುವೆ. ನೀನು ಅಂತಃಪುರದಲ್ಲಿ ನನ್ನ ಪತಿಯೊಡನೆ ನಡೆಯಿಸಿದ ಘಟನೆಯನ್ನು ಹೇಳುವದರಿಂದ ಲಾಭವೇನಿದೆ ? ನನ್ನ ಶರೀರದಲ್ಲಿಯ ಶ್ಯಾಮವರ್ಣವು ಹೋಗಿ ಗೌರವರ್ಣವು ಉಂಟಾಗಬೇಕೆಂದು ನನ್ನ ಅಪೇಕ್ಷೆಯುಂಟು.

ಬ್ರಹ್ಮದೇವ -ಭಗವತಿ, ಈ ಸಣ್ಣ ಕಾರ್ಯಕ್ಕಾಗಿ ಇಷ್ಟು ಕಠೋರ ತಪಶ್ಚರ್ಯದ ಅವಶ್ಯಕತೆಯೇನಿತ್ತು ? ನಿನ್ನ ಲೀಲೆಯು ಲೋಕಹಿತಕ್ಕಾಗಿ ಇರುವದು. ದೇವಿ, ಶುಂಭ–ನಿಶುಂಭರೆಂಬ ದೈತ್ಯರು ನನ್ನ ವರದಿಂದ ಜಗತ್ತಿಗೆ ಕಂಟಕಪ್ರಾಯರಾಗಿರುವರು. ಅವರ ಸಂಹಾರವು ನಿನ್ನಿಂದಲೇ ಆಗಬೇಕಾಗಿದೆ. ನೀನು ನಿನ್ನ ಶಕ್ತಿಯನ್ನು ಪ್ರಯೋಗಿಸಿದಾಗ ಆ ದೈತ್ಯರು ಮರಣ ಹೊಂದುವರು.

ಬ್ರಹ್ಮದೇವನು ಹೀಗೆ ಪ್ರಾರ್ಥಿಸಿದ ಬಳಿಕ ಗಿರಿರಾಜಕುಮಾರಿ ದೇವಿ ಪಾರ್ವತಿಯು ತನ್ನ ಕಪ್ಪು ಆವರಣವನ್ನು ಕಳಚಿ ಗೌರವರ್ಣದವಳಾದಳು. ಕಪ್ಪು ಆವರಣವು ಅವಳ ಶಕ್ತಿಯಾಗಿತ್ತು. ಕೃಷ್ಣ ಆವರಣದಿಂದ 'ಕೌಶಿಕಿ' ಎಂಬ ಶಕ್ತಿಯಾದಳು. ಅವಳು ಶುಂಭ, ನಿಶುಂಭರ ವಧೆ ಮಾಡಲು ಸಿದ್ಧಳಾದಳು. ಆ ಅಷ್ಟಭುಜಾ ದೇವಿಗೆ ಬ್ರಹ್ಮದೇವನು ಒಂದು ಪ್ರಬಲ ಸಿಂಹವನ್ನು ಅರ್ಪಿಸಿದನು. ಕೂಡಲೆ ದೇವಿ ಕೌಶಿಕೆಯು ಸಿಂಹವಾಹಿನಿಯಾಗಿ ವಿಂಧ್ಯ ಪರ್ವತಕ್ಕೆ ಹೋದಳು, ಅವಳು ಆ ದೈತ್ಯರೊಡನೆ ಘನಘೋರ ಸಂಗ್ರಾಮ ಮಾಡಿ ಇಬ್ಬರನ್ನೂ ಸಂಹರಿಸಿದಳು. ಜಗತ್ತು ಗಂಡಾಂತರದಿಂದ ಪಾರಾಯಿತು.

ತರುವಾಯ ದೇವಿಯು ನಿರುಪದ್ರವಿಯಾಗಿದ್ದ ಸಿಂಹವನ್ನು ತನ್ನ ಸಂಗಡ ಕರೆದೊಯ್ಯುವ ಅಪೇಕ್ಷೆಯನ್ನು ವ್ಯಕ್ತಪಡಿಸಿದಳು. ಅವಳು ತಪಸ್ಸಿನಿಂದ ನಿವೃತ್ತಳಾದಳು. ಬ್ರಹ್ಮದೇವನು ಸಭ್ಯ ಪ್ರಾಣಿಯಾಗಿದ್ದ ಅದನ್ನು ಬಳಿಯಲ್ಲಿ ತೆಗೆದುಕೊಂಡು ಹೋಗಬಹುದೆಂದು ಹೇಳಿ ಅಂತರ್ಧಾನನಾದನು. ಗೌರಿಯು ಸಿಂಹವನ್ನು ಸಂಗಡ ತೆಗೆದುಕೊಂಡು ಮಂದರಾಚಲಕ್ಕೆ ಹೋದಳು. ಮಹೇಶ್ವರನು ಅದನ್ನು ಗಣಾಧ್ಯಕ್ಷನನ್ನು ಮಾಡಿದನು. ಅದು ಸೋಮನಂದಿ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು.

## ಶಿವನ ಸರ್ವಾನುಗ್ರಾಹಕ ಸ್ವರೂಪ

ಋಷಿಗಳು—ವಾಯುದೇವಾ, ಶಿವನು ಶಾಂತ ಸ್ವಭಾವದಿಂದಿದ್ದು ಎಲ್ಲರ ಮೇಲೆ ಅನುಗ್ರಹ ಮಾಡುತ್ತಿದ್ದರೆ ಎಲ್ಲರ ಅಭಿಲಾಷೆಗಳನ್ನೂ ಒಮ್ಮೆಲೆ ಪೂರ್ತಿಗೊಳಿಸುವದಿಲ್ಲವೇಕೆ ? ಸರ್ವ ಸಮರ್ಥನಾದ ಶಿವನು ಎಲ್ಲರನ್ನೂ ಬಂಧನ ದಿಂದ ಮುಕ್ತಗೊಳಿಸುವದಿಲ್ಲವೇಕೆ ? ಅನಾದಿಕಾಲದಿಂದ ಪ್ರತಿಯೊಬ್ಬರ ಕರ್ಮಗಳು ಬೇರೆ ಬೇರೆಯಾಗಿರುವದರಿಂದ ಎಲ್ಲರಿಗೂ ಒಂದೇ ಬಗೆಯಾಗಿ ಫಲಗಳು ದೊರೆಯದೆ ಇರುವದು ಉಚಿತವಲ್ಲ. ಯಾಕಂದರೆ, ಕರ್ಮವು ನಿಯಾಮಕವಾಗುವದು ಶಕ್ಯವಿರುವದಿಲ್ಲ. ಆ ಕರ್ಮಗಳಾದರೂ ಈಶ್ವರನ ಪ್ರೇರಣೆಯಿಂದಲೇ ಘಟಿಸುವವು. ಇಂತಹ ವಿಭಿನ್ನ ಯುಕ್ತಿಗಳ ದ್ವಾರವಾಗಿ ಪ್ರಸಾರಿತವಾಗುವ ನಾಸ್ತಿಕತೆಯು ಯಾವ ಬಗೆಯಿಂದ ನಿವೃತ್ತವಾಗುವದೆಂಬುದನ್ನು ಉಪದೇಶಿಸಬೇಕು.

ವಾಯುದೇವ--ಮುನಿಗಳೆ, ನೀವೆಲ್ಲರೂ ಯುಕ್ತಿ ಪ್ರೇರಿತರಾಗಿ ಸಂಶಯ ಗಳನ್ನು ವ್ಯಕ್ತಪಡಿಸಿದ್ದು ಉಚಿತವಾಗಿದೆ. ಯಾವುದೊಂದು ಸಂಗತಿಯನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯು ಸಾಧುಭಾವದ ಪುರುಷರಲ್ಲಿ ನಾಸ್ತಿಕತೆಯನ್ನು ಉತ್ಪನ್ನ ಮಾಡುವದಿಲ್ಲ. ಸತ್ಪುರುಷರಲ್ಲಿಯ ಮೋಹವನ್ನು ನಿವಾರಿಸುವ ಪ್ರಮಾಣ ಗಳನ್ನು ನಾನು ಪ್ರಸ್ತುತಗೊಳಿಸುವೆನು. ಆ ಸತ್ಪುರುಷರಲ್ಲಿ ಅನ್ಯಥಾಭಾವವು ಉತ್ಪನ್ನವಾಗುವದಕ್ಕೆ ಪ್ರಭು ಮಹಾದೇವನ ಕೃಪೆಯ ಅಭಾವವೇ ಕಾರಣವಾಗಿದೆ. ಪರಿಪೂರ್ಣ ಪರಮಾತ್ಮನಾದ ಶಿವನ ಪರಮಾನುಗ್ರಹವಿಲ್ಲದೆ ಯಾವ ಕರ್ತವ್ಯವೂ

ಇಲ್ಲ. ಪರಾನುಗ್ರಹ ಕರ್ಮದಲ್ಲಿ ಸ್ವಭಾವವು ಪೂರ್ಣತಃ ಸಮರ್ಥವಿರುವದು; ಅನ್ಯಥಾ ನಿಸ್ವಭಾವ ಪುರುಷನು ಯಾರ ಮೇಲೆಯೂ ಅನುಗ್ರಹ ಮಾಡಲು ಸಮರ್ಥನಾಗುವದಿಲ್ಲ. ಪಶು (ಜೀವ) ಪಾಶ (ಪ್ರಕೃತಿ) ರೂಪ ಸಂಪೂರ್ಣ ಜಗತ್ತು ಶಿವಾನುಗ್ರಹಕ್ಕೆ ಪಾತ್ರವಾಗಿರುವದು. ಪರಾನುಗ್ರಹಕ್ಕಾಗಿ ಪಶುಪತಿಯ ಆಜ್ಞೆಯ ಸಮನ್ವಯವು ಅವಶ್ಯವಾಗಿದೆ. ಪತಿಯು ಆಜ್ಞೆಮಾಡುವವನಿರುವನು. ಅವನು ಎಲ್ಲರ ಮೇಲೆಯೂ ಸದಾಕಾಲ ಅನುಗ್ರಹ ಮಾಡುವನು. ಆ ಅನುಗ್ರಹಕ್ಕಾಗಿ ಆಜ್ಞಾರೂಪ ಅರ್ಥವನ್ನು ಸ್ವೀಕಾರ ಮಾಡಿದ ಬಳಿಕ ಶಿವನು ಪರತಂತ್ರನೆಂದು ಹೇಗೆ ಹೇಳಿಸಿಕೊಳ್ಳುವನು ? ಅನುಗ್ರಾಹಕನ ಅಪೇಕ್ಷೆಯನ್ನು ದೊರಕಿಸಿಕೊಳ್ಳದೆ ಯಾವ ಅನುಗ್ರಹವೂ ಸಿದ್ಧವಾಗುವದಿಲ್ಲ. ಆದುದರಿಂದ ಸ್ವಾತಂತ್ರ್ಯ ಶಬ್ದದ ಅರ್ಥದ ಅಪೇಕ್ಷೆಯನ್ನು ಹಿಡಿಯದಿರುವದು ಅನುಗ್ರಹದ ಲಕ್ಷಣವಾಗಿದೆ. ಯಾವನು ಅನುಗ್ರಾಹ್ಯನೋ ಅವನು ಪರತಂತ್ರನು. ಯಾಕಂದರೆ ಪಶುಪತಿಯ ಅನುಗ್ರಹದ ಹೊರತು ಅವನಿಗೆ ಭೋಗ, ಮೋಕ್ಷಗಳು ಸಿದ್ಧಿಸುವದಿಲ್ಲ. ಮೂರ್ತ್ಯಾತ್ಮನಾದರೂ ಅನುಗ್ರಹಪಾತ್ರನು. ಯಾಕಂದರೆ ಅವನಾದರೂ ಶಿವನ ಆಜ್ಞೆಯಿಂದ ಪರಿವೃತನಾಗಿರುವನು. ಶಿವನ ಆಜ್ಞೆಗೆ ಹೊರತಾದ ಯಾವ ವಸ್ತುವೂ ಇರುವದಿಲ್ಲ. ಸಗುಣರೂಪದಿಂದ ನಿರ್ಗುಣ ಪರಮಾತ್ಮನ ಪ್ರಾಪ್ತಿಯಾಗುವದು. ಸಗುಣ ರೂಪಗಳಾದ ಮೂರ್ತಿ ಅಥವಾ ಲಿಂಗಗಳಲ್ಲಿ ಶಿವನು ವಿರಾಜಮಾನನಾಗಿರುವನು. ಇದು ಶಿವನ ಮೂರ್ತಿಯು ಇಲ್ಲವೆ ಲಿಂಗವೆಂದು ಔಪಚಾರಿಕವಾಗಿ ಹೇಳಲ್ಪಡುವದು. ನಿರಾಕಾರನಾದ ಶಿವನು ಸಾಕಾರ ಅನುಭವದಿಂದ ಉಪಲಕ್ಷಿತನಾಗುವದಿಲ್ಲವೆಂಬಂತೇನೂ ಇಲ್ಲ. ಪ್ರಮಾಣ ಇಲ್ಲವೆ ಪ್ರತೀಕವಿಲ್ಲದೆ ಬುದ್ಧಿಯು ಉದಯವಾಗುವದಿಲ್ಲ. ಯಾವುದಾದರೂ ಮೂರ್ತಿಯು ಆತ್ಮದ ಉಪಲಕ್ಷಣವಾಗುವದು. ಕಾಷ್ಠಾದಿಗಳಿಲ್ಲದೆ ಅಗ್ನಿಯು ಉಪಲಬ್ಧವಾಗುವದಿಲ್ಲ. ಅದರಂತೆ ಶಿವನಾದರೂ ಮೂರ್ತ್ಯಾತ್ಮದಲ್ಲಿ ಆರೂಢ ವಾಗದೆ ಉಪಲಬ್ಧನಾಗುವದಿಲ್ಲ.

ಭಗವಾನ್ ಶಿವನು ಎಲ್ಲರ ಮೇಲೆಯೂ ಅನುಗ್ರಹ ಮಾಡುವನು. ಅವನು ಯಾರನ್ನೂ ನಿಗ್ರಹಿಸುವದಿಲ್ಲ. ದುಷ್ಟನಿಗ್ರಹ, ಶಿಷ್ಟ ಪರಿಪಾಲನೆಗಾಗಿ ದಂಡನೀತಿಯ ಪ್ರಶಂಸೆ ಮಾಡಲ್ಪಡುವದು. ದಂಡಾಂತ ಅನುಶಾಸನವು ಲೋಕಹಿತಕ್ಕಾಗಿ ಇರುವದು. ಸೂರ್ಯನು ಎಲ್ಲ ಕಮಲಗಳನ್ನು ವಿಕಾಸ

ಗೊಳಿಸುವಂತೆ ಶಿವನು ಎಲ್ಲರ ಮೇಲೆಯೂ ಅನುಗ್ರಹ ಮಾಡುವನು. ಭಗವಾನ್ ಶಿವನು ಎಲ್ಲ ಜೀವಗಳನ್ನು ಬಂಧನದಿಂದ ಮುಕ್ತಗೊಳಿಸಲು ಸಮರ್ಥನಿರುವನು. ಸಂಸಾರವು ದುಃಖಮಯುವಿರುವದೆಂದು ವಿಚಾರವಂತರ ನಿಶ್ಚಿತ ಸಿದ್ಧಾಂತ ವಿರುವದು. ಯಾವನು ಸ್ವಭಾವತಃ ದುಃಖಮಯನಾಗಿರುವನೋ ಅವನು ಹೇಗೆ ದುಃಖರಹಿತನಾಗುವನು ? ವೈದ್ಯನು ಔಷಧದಿಂದ ರೋಗಿಗಳನ್ನು ಗುಣಪಡಿಸು ವಂತೆ ಮಲಿನ ಸ್ವಭಾವದವನೂ ದುಃಖಿಯೂ ಆದವನನ್ನು ಶಿವನು ಅನುಗ್ರಹಿಸಿ ಉದ್ಧರಿಸುವನು. ಜೀವಿಗಳಲ್ಲಿರುವ ಸ್ವಾಭಾವಿಕ ಮಲವೇ ಅವನನ್ನು ಸಾಂಸಾರಿಕ ಚಕ್ರದಲ್ಲಿ ಕೆಡಹುವದು. ಸಂಸಾರಕ್ಕೆ ಕಾರಣೀಭೂತವಾದ ಅಚೇತನ ಮಾಯೆಯು ಶಿವನ ಸಾನ್ನಿಧ್ಯವು ಪ್ರಾಪ್ತವಾಗದೆ ಸ್ವತಃ ಚೇಷ್ಟಾಶೀಲವಾಗುವದಿಲ್ಲ. ಚುಂಬಕ ಮಣಿಯು ಲೋಹದ ಸಾನ್ನಿಧ್ಯವನ್ನು ಹೊಂದಿ ಉಪಕಾರಕವಾಗುವಂತೆ ಶಿವನಾದರೂ ಮಾಯಾ ಮೊದಲಾದವುಗಳ ಸಾನ್ನಿಧ್ಯ ಹೊಂದಿ ಉಪಕಾರಕ ನಾಗುವನು; ಅವುಗಳನ್ನು ಸಚೇತನಗೊಳಿಸುವನು. ಅವುಗಳ ವಿದ್ಯಮಾನ ಸಾನ್ನಿಧ್ಯವನ್ನು ಕಾರಣವಾಗಿ ನಿವಾರಣೆ ಮಾಡುವದಿಲ್ಲ. ಆದುದರಿಂದ ಜಗತ್ತಿಗೆ ಅಜ್ಞಾತನಾಗಿದ್ದ ಶಿವನು ಅದರ ಅಧಿಷ್ಠಾತೃವಾಗಿರುವನು. ಶಿವನ ಹೊರತು ಇಲ್ಲಿ ಯಾವುದೂ ಚೇಷ್ಟಾಶೀಲವಾಗುವದಿಲ್ಲ. ಅವನ ಆಜ್ಞೆಯಿಲ್ಲದೆ ಒಂದು ಎಲೆಯೂ ಅಲ್ಲಾಡುವದಿಲ್ಲ. ಅವನಿಂದ ಪ್ರೇರಿತವಾದರೂ ಜಗತ್ತು ವಿಭಿನ್ನ ಪ್ರಕಾರದ ಚೇಷ್ಟೆಗಳನ್ನು ಮಾಡುತ್ತಿದ್ದರೂ ಶಿವನು ಅವುಗಳಿಗೆ ಮೋಹಿತನಾಗುವದಿಲ್ಲ. ಅವನ ಆಜ್ಞಾರೂಪಿಣಿಯಾದ ಶಕ್ತಿಯು ಎಲ್ಲವನ್ನೂ ನಿಯಂತ್ರಿಸುವದು. ಅದಕ್ಕೆ ಎಲ್ಲ ಕಡೆಗೂ ಮುಖವಿರುವದು. ಅದು ಸಂಪೂರ್ಣ ವಿಶ್ವದ ವಿಸ್ತಾರ ಮಾಡುವದು. ಹಾಗಿದ್ದರೂ ಅದರ ದೋಷದಿಂದ ಶಿವನು ದೂಷಿತನಾಗುವದಿಲ್ಲ.

ವಾಯುದೇವನು ಹೀಗೆ ಹೇಳುತ್ತಿರುವಾಗ 'ಸತ್ಯಂ ಓಂ ಅಮೃತಂ ಸೌಮ್ಯಂ' ಎಂದು ಅಶರೀರವಾಣಿಯಾಯಿತು. ಅದನ್ನು ಕೇಳಿ ಎಲ್ಲರೂ ಪ್ರಸನ್ನ ರಾದರು. ಅವರ ಎಲ್ಲ ಸಂಶಯಗಳು ನಿವಾರಣೆಯಾದವು. ಎಲ್ಲ ಮುನಿಗಳೂ ವಾಯುದೇವನಿಗೆ ಪ್ರಣಾಮ ಮಾಡಿದರು. ತರುವಾಯ ವಾಯುದೇವನು ಆ ಮುನಿಜನರ ಸಂದೇಹವು ಪೂರ್ಣನಿವಾರಣೆ ಹೊಂದಿ ಜ್ಞಾನವು ಪ್ರತಿಷ್ಠಿತವಾಗ ಬೇಕೆಂಬ ಉದ್ದೇಶದಿಂದ ಹೇಳಲಾರಂಭಿಸಿದನು.

ವಾಯುದೇವ–ಜ್ಞಾನವು ಪರೋಕ್ಷ, ಅಪರೋಕ್ಷವೆಂದು ಎರಡು

ವಿಧವಾಗಿರುವದು. ಪರೋಕ್ಷಜ್ಞಾನವು ಅಸ್ಥಿರವೆನಿಸುವದು. ಅಪರೋಕ್ಷಜ್ಞಾನವು ಸುಸ್ಥಿರ ವಾಗಿದೆ. ಮುಕ್ತ ಪೂರ್ಣ ಉಪದೇಶದಿಂದ ದೊರೆಯುವ ಜ್ಞಾನವು ಪರೋಕ್ಷವು; ಶ್ರೇಷ್ಠ ಅನುಷ್ಠಾನದಿಂದ ದೊರೆಯುವ ಜ್ಞಾನವು ಅಪರೋಕ್ಷವು. ಅಪರೋಕ್ಷ ಜ್ಞಾನವಿಲ್ಲದೆ ಮೋಕ್ಷವು ದೊರೆಯುವದಿಲ್ಲ. ಆದುದರಿಂದ ನೀವೆಲ್ಲರೂ ಆಲಸ್ಯರಹಿತರಾಗಿ ಶ್ರೇಷ್ಠ ಅನುಷ್ಠಾನದ ಸಿದ್ಧಿಗಾಗಿ ಪ್ರಯತ್ನ ಮಾಡಿರಿ.

## ಪರಮ ಧರ್ಮ

ಮುನಿಗಳು–ವಾಯುದೇವಾ, ಮೋಕ್ಷರೂಪ ಜ್ಞಾನವನ್ನು ಅಪರೋಕ್ಷ ಮಾಡುವಂತಹ ಯಾವ ಶ್ರೇಷ್ಠ ಅನುಷ್ಠಾನವಿರುವದೆಂಬುದನ್ನು ತಿಳಿಸಬೇಕು.

ವಾಯುದೇವ–ಭಗವಾನ್ ಶಿವನಿಂದ ಹೇಳಲ್ಪಟ್ಟಿರುವ ಪರಮ ಧರ್ಮದ ಅನುಷ್ಠಾನವೇ ಶ್ರೇಷ್ಠ ಅನುಷ್ಠಾನವೆಂದು ಹೇಳಲ್ಪಟ್ಟಿದೆ. ಈ ಅನುಷ್ಠಾನವು ಸಿದ್ಧಿಸಿತೆಂದರೆ ಸಾಕ್ಷಾತ್ ಮೋಕ್ಷದಾಯಕ ಶಿವನು ಅಪರೋಕ್ಷ ನಾಗುವನು. ಆ ಪರಮಧರ್ಮವು ಐದು ಪರ್ವಗಳ ಕಾರಣದಿಂದಾಗಿ ಕ್ರಮಶಃ ಐದು ಪ್ರಕಾರವಾಗಿ ತಿಳಿಯಬೇಕು. ಕ್ರಿಯೆ, ತಪ, ಜಪ, ಧ್ಯಾನ, ಜ್ಞಾನ ಇವೇ ಆ ಪರ್ವಗಳು. ಇವು ಉತ್ತರೋತ್ತರವಾಗಿ ಶ್ರೇಷ್ಠವಾಗಿವೆ. ಈ ಉತ್ಕೃಷ್ಟ ಸಾಧನಗಳಿಂದ ಸಿದ್ಧವಾದ ಧರ್ಮವು ಪರಮಧರ್ಮವೆಂದು ಮನ್ನಿಸಲ್ಪಟ್ಟಿದೆ. ಒಮ್ಮೊಮ್ಮೆ ಪರೋಕ್ಷ ಜ್ಞಾನವಾದರೂ ಅಪರೋಕ್ಷವಾಗುವದು. ವೈದಿಕ ಧರ್ಮವು ಎರಡು ಪ್ರಕಾರವಾಗಿ ಹೇಳಲ್ಪಟ್ಟಿದೆ. ಒಂದು ಪರಮು, ಇನ್ನೊಂದು ಅಪರಮು. ಧರ್ಮದ ಶಬ್ದದಿಂದ ಪ್ರತಿಪಾದಿಸಲ್ಪಟ್ಟಿರುವ ಅರ್ಥದಿಂದ ನಮ್ಮ ಸಲುವಾಗಿ ಶ್ರುತಿಗಳು ಪ್ರಮಾಣಗಳಾಗಿವೆ. ಯೋಗಪರ್ಯಂತರವಾಗಿರುವ ಪರಮಧರ್ಮವು ಶ್ರುತಿಗಳ ಶಿರೋಭೂತವಾದ ಉಪನಿಷತ್ತಿನಲ್ಲಿ ವರ್ಣಿತವಾಗಿದೆ. ಅಪರಮು ಸಂಹಿತಾ ಧರ್ಮವು ಮಂತ್ರಗಳಿಂದ ಪ್ರತಿಪಾದಿತವಾಗಿದೆ. ಯಾವುದರಲ್ಲಿ ಬದ್ಧ ಜೀವಗಳ ಅಧಿಕಾರವಿರುವದಿಲ್ಲವೋ ಆ ವೇದಾಂತವರ್ಣಿತ ಧರ್ಮವು ಪರಮು ಧರ್ಮವಾಗಿರುವದು. ಅದರಿಂದ ಭಿನ್ನವಾದ ಯಜ್ಞ–ಯಾಗಾದಿಗಳಲ್ಲಿ ಎಲ್ಲರ ಅಧಿಕಾರವಿರುವದರಿಂದ ಅದು ಸಾಧಾರಣ ಧರ್ಮವೆಂದೆನಿಸಿಕೊಳ್ಳುವದು. ಅಪರಮು ಧರ್ಮವು ಪರಮು ಧರ್ಮದ ಸಾಧನವೂ ಆಗುವದುಂಟು.

ಧರ್ಮಶಾಸ್ತ್ರ ಮೊದಲಾದವುಗಳಿಂದ ಸಮ್ಯಗ್ರೂಪವಾಗಿ ವಿಸ್ತಾರಪೂರ್ವಕ ಸಾಂಗೋಪಾಂಗ ನಿರೂಪಣವು ಮಾಡಲ್ಪಟ್ಟಿದೆ, ಭಗವಾನ್ ಶಿವನಿಂದ ಪ್ರತಿಪಾದಿತವಾಗಿರುವ ಪರಮಧರ್ಮದ ಹೆಸರೇ ಅನುಷ್ಠಾನವು. ಇತಿಹಾಸ, ಪುರಾಣಗಳಿಂದ ಅದರ ವಿಸ್ತಾರವಾಗಿರುವದಲ್ಲದೆ ಶೈವಶಾಸ್ತ್ರಗಳಿಂದಲೂ ಅದು ಸಾಂಗೋಪಾಂಗ ವಿಸ್ತರಣೆಯಾಗಿರುವದು. ಶೈವಾಗಮಗಳಲ್ಲಿ ಶ್ರೌತ ಹಾಗೂ ಅಶ್ರೌತ ಎಂಬ ಎರಡು ಭೇದಗಳಿರುವವು. ಶ್ರುತಿಸಾರಮಯವಾದ ಶೈವಶಾಸ್ತ್ರದ ವಿಸ್ತಾರವು ನೂರು ಕೋಟಿ ಶ್ಲೋಕಗಳಲ್ಲಿ ಮಾಡಲ್ಪಟ್ಟಿದೆ. ಅದರಲ್ಲಿ ಪಾಶುಪತ ವ್ರತವೂ, ಪಾಶುಪತಜ್ಞಾನವೂ ವರ್ಣಿತವಾಗಿರುವವು. ಯುಗಯುಗಗಳಲ್ಲಿಯ ಶಿಷ್ಯರಿಗೆ ಉಪದೇಶ ಮಾಡುವದಕ್ಕಾಗಿ ಭಗವಾನ್ ಶಿವನು ಯೋಗಾಚಾರ್ಯ ರೂಪದಿಂದ ಅವತೀರ್ಣನಾಗಿ ಅವುಗಳ ಪ್ರಚಾರವನ್ನು ಮಾಡುವನು.

ಶೈವಶಾಸ್ತ್ರವನ್ನು ಸಂಕ್ಷೇಪಗೊಳಿಸಿ ಅದರ ಸಿದ್ಧಾಂತ ಪ್ರವಚನ ಮಾಡುವ ಮಹರ್ಷಿಗಳು ಪ್ರಮುಖವಾಗಿ ನಾಲ್ಕು ಜನರಿರುವರು. ರುರು, ದಧೀಚ, ಅಗಸ್ತ್ಯ, ಮಹಾಯಶಸ್ವಿಯಾದ ಉಪಮನ್ಯು. ಅವರು ಸಂಹಿತೆಯ ಪ್ರವರ್ತಕರಾದ 'ಪಾಶುಪತ'ರೆಂದು ತಿಳಿಯಬೇಕು. ಅವರ ಸಂತಾನ ಪರಂಪರೆಯಲ್ಲಿ ಸಾವಿರಾರು ಗುರುಜನರು ಆಗಿಹೋಗಿರುವರು. ಪಾಶುಪತ ಸಿದ್ಧಾಂತದಲ್ಲಿ ಚರ್ಯಾ, ವಿದ್ಯಾ, ಕ್ರಿಯಾ, ಯೋಗ ಮೊದಲಾದ ನಾಲ್ಕು ಪಾದಗಳ ಕಾರಣದಿಂದ ಪರಮಧರ್ಮವು ನಾಲ್ಕು ಪ್ರಕಾರದ್ದಾಗಿದೆ. ಈ ನಾಲ್ಕು ಪ್ರಕಾರಗಳಲ್ಲಿ ಪಾಶುಪತಯೋಗವಿದ್ದು ಅದು ದೃಢತಾಪೂರ್ವಕ ಶಿವಸಾಕ್ಷಾತ್ಕಾರ ಮಾಡುವಂತಹದಾಗಿದೆ. ಆದುದರಿಂದ ಪಾಶುಪತಯೋಗವು ಶ್ರೇಷ್ಠ ಅನುಷ್ಠಾನವೆಂದು ತಿಳಿಯಲ್ಪಟ್ಟಿದೆ. ಭಗವಾನ್ ಶಿವನಿಂದ ಪರಿಕಲ್ಪಿತವಾದ 'ನಾಮಾಷ್ಟಕಮಯ ಯೋಗ'ದಿಂದ 'ಶೈವೀ ಪ್ರಜ್ಞೆಯು' ಉದಯವಾಗುವದು. ಆ ಪ್ರಜ್ಞೆಯಿಂದ ಪುರುಷನು ಶೀಘ್ರವಾಗಿ ಸುಸ್ಥಿರವಾದ ಪರಮ ಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವನು. ಈ ಜ್ಞಾನವು ಪ್ರತಿಷ್ಠಿತ ವಾಯಿತೆಂದರೆ ಅವನ ಮೇಲೆ ಶಿವನು ಪ್ರಸನ್ನನಾಗುವನು. ಅವನ ಕೃಪಾ ಪ್ರಸಾದದಿಂದ ಪರಮ ಯೋಗವು ಸಿದ್ಧವಾಗುವದರಿಂದ ಶಿವನ ಅಪರೋಕ್ಷ ದರ್ಶನವು ಲಭಿಸುವದು. ಶಿವನ ಅಪರೋಕ್ಷ ಜ್ಞಾನದಿಂದ ಸಂಸಾರ ಬಂಧನವು ದೂರವಾಗುವದು. ಈ ಬಗೆಯಾಗಿ ಸಂಸಾರ ಬಂಧನದಿಂದ ಮುಕ್ತನಾದ ಪುರುಷನು ಶಿವನ ಸಮಾನನಾಗುವನು. ಶಿವ, ಮಹೇಶ್ವರ, ರುದ್ರ, ವಿಷ್ಣು,

ಪಿತಾಮಹ (ಬ್ರಹ್ಮ), ಸಂಸಾರ ವೈದ್ಯ, ಸರ್ವಜ್ಞ, ಪರಮಾತ್ಮ ಇವು ಎಂಟು ನಾಮಗಳು ಶಿವನ ಪ್ರತಿಪಾದಕವಿರುವವು. ಇವುಗಳಲ್ಲಿ ಮೊದಲಿನ ಐದು ನಾಮಗಳು ಶಾಂತ್ಯತೀತಾ ಮೊದಲಾದ ಐದು ಕಲೆಗಳಿಂದ ಕೂಡಿರುವವು. ಅವು ಐದು ಉಪಾಧಿಗಳ ಗ್ರಹಣ ಮಾಡುವದರಿಂದ ಸದಾಶಿವ ಮೊದಲಾದವುಗಳ ಬೋಧಕವಾಗುವವು. ಉಪಾಧಿಗಳು ನಿವೃತ್ತಿ ಹೊಂದಿದ ಬಳಿಕ ಈ ಭೇದಗಳ ನಿವೃತ್ತಿಯಾಗುವದು. ಈ ಪದವು ನಿತ್ಯವಿರುವದು. ಆದರೆ ಈ ಪದದ ಮೇಲೆ ಪ್ರತಿಷ್ಠಿತನಾದವನು ಅನಿತ್ಯನೆನಿಸಿಕೊಳ್ಳುವನು. ಪದಗಳ ಪರಿವರ್ತನೆಯಾದ ಬಳಿಕ ಆ ಪುರುಷನು ಮುಕ್ತನಾಗುವನು. ಪರಿವರ್ತನಾನಂತರದಲ್ಲಿ ಪುನಃ ಎರಡನೆಯ ಆತ್ಮಗಳು ಆ ಪದಗಳನ್ನು ಪ್ರಾಪ್ತಿ ಮಾಡಿಕೊಳ್ಳುವವು. ಅವುಗಳಿಗೆ ಮೊದಲಿನ ಐದು ನಾಮಗಳು ನಿಯತವಾಗುವವು. ಉಪಾದಾನಾದಿ ಯೋಗದಿಂದ ಅನ್ಯ ಮೂರು ನಾಮಗಳೂ (ಸಂಸಾರ ವೈದ್ಯ, ಸರ್ವಜ್ಞ, ಪರಮಾತ್ಮಾ) ತ್ರಿವಿಧ ಉಪಾಧಿಗಳ ಪ್ರತಿಪಾದನ ಮಾಡುತ್ತ ಶಿವನಲ್ಲಿ ಅನುಗತವಾಗುವವು.

ಈಶ್ವರನು ಕಲ್ಯಾಣಮಯ ಗುಣಗಳ ಏಕಮಾತ್ರ ವಿಗ್ರಹನಾಗಿರುವನು. ಆದುದರಿಂದ ಶಿವತತ್ವದ ಅರ್ಥವನ್ನು ತಿಳಿದಿರುವ ಶ್ರೇಷ್ಠ ಮಹಾತ್ಮರು ಅವನಿಗೆ 'ಶಿವ' ಎಂದೆನ್ನುವರು. ಇಪ್ಪತ್ತು ಮೂರು ತತ್ವಗಳಿಂದ ಪ್ರಕೃತಿಯು ಕೂಡಿರುವ ದೆಂದು ಹೇಳಿದೆ. ಪುರುಷನು ಇಪ್ಪತ್ತೈದು ತತ್ವಗಳಿಂದ ಕೂಡಿರುವನೆಂದು ಹೇಳಲಾಗಿದೆ. ವೇದಗಳ ಆದಿಯಲ್ಲಿ ಇವುಗಳಿಂದ ಓಂಕಾರರೂಪವು ಹೇಳಲ್ಪ ಟ್ಟಿದೆ. ಓಂಕಾರ ಮತ್ತು ಪುರುಷನಲ್ಲಿ ವಾಚ್ಯ–ವಾಚಕ ಭಾವಸಂಬಂಧವಿರುವದು. ಅದರ ಯಥಾರ್ಥಜ್ಞಾನವು ವೇದದಿಂದಾಗುವದು. ಅದಾದರೂ ವೇದಾಂತದಲ್ಲಿ ಪ್ರತಿಷ್ಠಿತವಾಗಿರುವದು. ಆದುದರಿಂದ ಪರಮ ಪುರುಷನು ಅದರಿಂದ ವ್ಯತಿರಿಕ್ತನಾಗಿರುವನು. ಅವನ ಹೆಸರು ಮಹೇಶ್ವರನೆಂದಿರುವದು. ಯಾಕಂದರೆ ಪ್ರಕೃತಿ ಮತ್ತು ಪುರುಷ ಇವೆರಡರ ಪ್ರವೃತ್ತಿಯು ಅವನ ಆಧೀನವಿರುವದು. ಆ ಪ್ರಕೃತಿಗೆ ಮಾಯೆಯೆನ್ನುವರು. ಈ ಮಾಯೆಯು ಯಾರ ಶಕ್ತಿಯಾಗಿರುವದೋ ಆ ಮಾಯಾಪತಿಯ ಹೆಸರು 'ಮಹೇಶ್ವರ' ಎಂದಿರುವದು. ಮಹೇಶ್ವರನ ಸಂಬಂಧದಿಂದ ಮಾಯೆಯಲ್ಲಿ ಕ್ಷೋಭವುಂಟಾದರೆ ಅದಕ್ಕೆ 'ವಿಷ್ಣು' ಎಂದೆನ್ನು ವರು. ವಿಷ್ಣುವು ಕಾಲಾತ್ಮನೆಂದೂ, ಪರಮಾತ್ಮನೆಂದೂ ಹೇಳಿಸಿಕೊಳ್ಳುವನು. ಅವನು ಸ್ಥೂಲನೂ ಸೂಕ್ಷ್ಮನೂ ಆಗಿರುವನು. ದುಃಖ ಅಥವಾ ದುಃಖದ ಹೇತುವಿನ

ಹೆಸರು 'ಸತ್' ಆಗಿರುವದು. ಪ್ರಭುವು ಅದನ್ನು ಧ್ರಾವಣಗೊಳಿಸುವನು. ಅವನನ್ನು ಸಾಧುಪುರುಷರು ರುದ್ರನೆಂದು ಕರೆಯುವರು. ಕಲಾ, ಕಾಲ, ನಿಯತಿ, ವಿದ್ಯಾ, ರಾಗ, ಪ್ರಕೃತಿ, ಗುಣ ಇವು ಏಳು ತತ್ವಗಳು, ಪಂಚತನ್ಮಾತ್ರಾ, ಹತ್ತು ಇಂದ್ರಿಯಗಳು, ನಾಲ್ಕು ಅಂತಃಕರಣ, ಐದು ಶಬ್ದಾದಿ ವಿಷಯಗಳು, ಆಕಾಶಾದಿ ಪಂಚಭೂತಗಳು ಇವೆಲ್ಲ ಕೂಡಿ ಒಟ್ಟು ಮೂವತ್ತಾರು ತತ್ವಗಳಾಗುವವು. ಇವುಗಳಿಂದ ಶರೀರವು ರಚಿತವಾಗುವದು. ಈ ಶರೀರದಲ್ಲಿ ತಂದ್ರಾರಹಿತನಾಗಿ ವ್ಯಾಪಕಸ್ವರೂಪದಲ್ಲಿ ಭಗವಾನ್ ಶಿವನು ಸ್ಥಿತನಾಗಿರುವನು.

ಶಿವನ ಅಷ್ಟನಾಮುಗಳ ಅರ್ಥಸಹಿತವಾಗಿ ಉಪದೇಶ ಹೊಂದಬೇಕು. ಶಿವಾದಿ ಐದು ನಾಮುಗಳಿಂದ ನಿವೃತ್ತಿ ಮೊದಲಾದ ಐದು ಕಲೆಗಳ ಗ್ರಂಥಿಗಳನ್ನು ಕ್ರಮಶಃ ಭೇದನ ಹಾಗೂ ಗುಣಾನುಸಾರ ಶೋಧನ ಮಾಡಬೇಕು. ಗುಣಿತ, ಉದ್ಘಾತಯುಕ್ತ ಮತ್ತು ಅನಿರುದ್ಧ ಪ್ರಾಣಗಳ ದ್ವಾರವಾಗಿ ಹೃದಯ ಬ್ರಹ್ಮರಂಧ್ರ ಭೇದನ ಮಾಡಿ ಸುಷುಮ್ನಾನಾಡಿಯಿಂದ ತನ್ನ ಆತ್ಮವನ್ನು ಸಹಸ್ರಾರು ಚಕ್ರದೊಳಗೆ ಕೊಂಡೊಯ್ಯಬೇಕು. ಅದು ಶುಭ್ರವರ್ಣವಾಗಿರುವದು. ಅದು ತರುಣ ಸೂರ್ಯ ಸದೃಶವಾಗಿ ರಕ್ತವರ್ಣಕೇಶರದಿಂದ ರಂಜಿತವೂ ಅಧೋಮುಖವೂ ಆಗಿರುವದು. ಅದು ಐವತ್ತು ದಳಗಳಿಂದ ಸ್ಥಿತವಾದ 'ಅ' ಕಾರದಿಂದ 'ಕ್ಷ' ಕಾರದ ವರೆಗೆ ಸ ಬಿಂದು ಅಕ್ಷರ ಕರ್ಣಿಕೆಯ ಮಧ್ಯದಲ್ಲಿ ಚಂದ್ರಮಂಡಲಾಕಾರವಾಗಿರುವದು. ಈ ಚಂದ್ರಮಂಡಲವು ಛತ್ರಾಕಾರದಲ್ಲಿ ಸ್ಥಿತವಾಗಿದೆ. ಅದರಲ್ಲಿ ಒಂದು ಊರ್ಧ್ವ ಮುಖ ದ್ವಾದಶದ ದಲಕಮಲವನ್ನು ಆವೃತಗೊಳಿಸಿರುವದು. ಆ ಕಮಲದ ಕರ್ಣಿಕೆಯಲ್ಲಿ ವಿದ್ಯುತ್‌ಸದೃಶವಾದ ಅಕಥಾದಿ ತ್ರಿಕೋನ ಯಂತ್ರವಿರುವದು. ಆ ಯಂತ್ರದ ನಾಲ್ಕೂ ಬದಿಯು ಸುಧಾಸಾಗರವಾಗುವದರಿಂದ ಅದು ಮಣಿ ದ್ವೀಪದ ಆಕಾರದ್ದಾಗಿ ಹೋಗಿದೆ. ಈ ದ್ವೀಪದ ಮಧ್ಯಭಾಗದಲ್ಲಿ ಮಣಿಪೀಠವಿದೆ. ಅದರ ಮಧ್ಯದಲ್ಲಿ ನಾದ ಬಿಂದುವಿನ ಮೇಲೆ ಹಂಸಪೀಠವಿದೆ. ಅದರ ಮೇಲೆ ಪರಮ ಶಿವನು ವಿರಾಜಮಾನನಾಗಿರುವನು. ಉಕ್ತ ಚಂದ್ರ ಮಂಡಲದ ಮೇಲೆ ಶಿವನ ತೇಜದಲ್ಲಿ ಆತ್ಮವನ್ನು ಸಂಯುಕ್ತಗೊಳಿಸಬೇಕು. ಈ ಪ್ರಕಾರ ಜೀವವನ್ನು ಶಿವನಲ್ಲಿ ಲೀನಗೊಳಿಸಿ, ಶಾಕ್ತ ಅಮೃತ ವರ್ಷದ ದ್ವಾರವಾಗಿ ಶರೀರವನ್ನು ಅಭಿಷಿಕ್ತಗೊಳಿಸುವ ಭಾವನೆ ಹೊಂದಬೇಕು. ತರುವಾಯ ಅಮೃತಮಯ ವಿಗ್ರಹದಂತಾದ ಆತ್ಮವನ್ನು ಬ್ರಹ್ಮರಂಧ್ರದಿಂದ ಇಳಿಸಿ, ಹೃದಯ

ದಲ್ಲಿ ದ್ವಾದಶದಳ ಕಮಲದಲ್ಲಿ ಸ್ಥಿತವಾದ ಚಂದ್ರಮನಿಂದ ಯುಕ್ತವಾದ ಶ್ವೇತಕಮಲದ ಮೇಲೆ ಅರ್ಧನಾರೀಶ್ವರರೂಪದಿಂದ ವಿರಾಜಮಾನನಾದ ಮನೋಹರ ಆಕೃತಿಯ ನಿರ್ಮಲದೇವ ಭಕ್ತವತ್ಸಲ ಮಹಾದೇವ ಶಂಕರನ ಚಿಂತನೆ ಮಾಡಬೇಕು. ಅವನು ಶೀತಲಪ್ರಭೆಯಿಂದ ಯುಕ್ತನೂ ಪ್ರಸನ್ನನೂ ಇರುವನು. ಈ ಪ್ರಕಾರ ಮನದಲ್ಲಿ ಅವನನ್ನು ಧ್ಯಾನ ಮಾಡುತ್ತ, ಶಿವನ್ನು ಅಷ್ಟನಾಮಗಳ ಭಾವನಾಮಯ ಪುಷ್ಪಗಳಿಂದ ಅವನನ್ನು ಪೂಜಿಸಬೇಕು. ಪೂಜೆಯಾದ ಬಳಿಕ ಕೊನೆಗೆ ಮತ್ತೆ ಪ್ರಾಣಾಯಾಮ ಮಾಡಿ ಚಿತ್ತವನ್ನು ಏಕಾಗ್ರಗೊಳಿಸಿ ಶಿವನಾಮಾಷ್ಟಕ ಜಪ ಮಾಡಬೇಕು. ಅನಂತರದಲ್ಲಿ ಭಾವನೆಯ ದ್ವಾರವಾಗಿ ನಾಭಿಯಲ್ಲಿ ಎಂಟು ಆಹುತಿಗಳ ಹವನ ಮಾಡಿ ಪೂರ್ಣಾಹುತಿ ಕೊಟ್ಟು ಎಂಟು ಪುಷ್ಪಗಳನ್ನು ಏರಿಸಿ ಅಂತಿಮ ಅರ್ಚನೆಯನ್ನು ಪೂರ್ಣಗೊಳಿಸಬೇಕು. ತರುವಾಯ ತನ್ನನ್ನು ತಾನು ಶಿವನ ಚರಣದಲ್ಲಿ ಸಮರ್ಪಿತಗೊಳಿಸಬೇಕು. ಈ ಪ್ರಕಾರ ಮಾಡುವದರಿಂದ ಶೀಘ್ರವಾಗಿ ಪಾಶುಪತ ಜ್ಞಾನವು ಪ್ರಾಪ್ತವಾಗುವದು. ಸಾಧಕನು ಈ ಜ್ಞಾನವನ್ನು ಸ್ಥಿರಗೊಳಿಸಿಕೊಳ್ಳುವನು. ಪರಮ ಧರ್ಮವಾದ ಪಾಶುಪತ ಜ್ಞಾನವೂ ಪಾಶುಪತ ವ್ರತವೂ ಪರಮಯೋಗವನ್ನು ಹೊಂದಿ ಮನುಷ್ಯನು ಮುಕ್ತನಾಗುವನು.

## ಉಪಮನ್ಯು

ಋಷಿಗಳು–ಪ್ರಭುವೆ, ಧೌಮ್ಯ ಮಹರ್ಷಿಯ ಅಣ್ಣನಾದ ಉಪ ಮನ್ಯುವು ಹಾಲಿಗಾಗಿ ತಪಸ್ಸು ಮಾಡಿದಾಗ ಶಿವನು ಪ್ರಸನ್ನನಾಗಿ ಅವನಿಗೆ ಕ್ಷೀರಸಾಗರವನ್ನು ಕೊಟ್ಟನು. ಶೈಶವಾವಸ್ಥೆಯಲ್ಲಿಯೇ ಅವನಿಗೆ ಶಿವಶಾಸ್ತ್ರ ತತ್ವಜ್ಞಾನವು ಹೇಗೆ ಆಯಿತು ?

ವಾಯುದೇವ–ಮಹರ್ಷಿಗಳೆ, ಉಪಮನ್ಯುವು ಸಾಮಾನ್ಯ ಬಾಲಕ ನಾಗಿರಲಿಲ್ಲ. ಅವನು ಬುದ್ಧಿಮಾನ್ ಮುನಿವರ ವ್ಯಾಘ್ರಪಾದನ ಪುತ್ರನು. ಅವನಿಗೆ ಜನ್ಮಾಂತರದ ಸಿದ್ಧಿಯೂ ಆಗಿತ್ತು. ಹಿಂದಿನ ಜನ್ಮದಲ್ಲಿ ಅವನು ಯೋಗಭ್ರಷ್ಟ ನಾದನು. ಅವನು ಭಾಗ್ಯವಶದಿಂದ ಮುನಿಕುಮಾರನಾಗಿ ಜನ್ಮ ತಾಳಿದನು.

ಒಂದು ಕಾಲದಲ್ಲಿ ಉಪಮನ್ಯುವು ತನ್ನ ಮಾವನ ಮನೆಯಲ್ಲಿ ವಾಸ ವಾಗಿದ್ದನು. ಅವನಿಗೆ ತೀರ ತುಸುವೇ ಹಾಲು ದೊರಕಿತು. ಮಾವನ ಮಕ್ಕಳು

ಯಥೇಷ್ಟವಾಗಿ ಹಾಲು ಕುಡಿದು ಅವನೆದುರಿಗೆ ಒಳ್ಳೇ ಉತ್ಸಾಹದಿಂದ ಮೆರೆಯ ತೊಡಗಿದ್ದರು. ಆಗ ಉಪಮನ್ಯುವು ಕ್ಷುಧೆಯಿಂದ ತಾಯಿಯ ಬಳಿಗೆ ಬಂದು, ತನಗೆ ಹಾಲು ಕೊಡಬೇಕೆಂದು ಒತ್ತಾಯಪಡಿಸಿದನು.

ಮಗನ ಮಾತು ಕೇಳಿ ವ್ಯಾಘ್ರಪಾದ ಪತ್ನಿಯಾದ ತಪಸ್ವಿನಿ ಮಾತೆಗೆ ಸಂಕಟವಾಯಿತು. ಅವಳ ಕುಟೀರದಲ್ಲಿ ಹಾಲು ಇದ್ದಿಲ್ಲ. ಅವಳು ಪುತ್ರನನ್ನು ವಾತ್ಸಲ್ಯದಿಂದ ಅಪ್ಪಿಕೊಂಡು ಮುದ್ದಿಟ್ಟು ಕೆಳಗಿಳಿಸಿ, ಇಲ್ಲಿಯೇ ಇರು; ಹಾಲು ತರುವೆನು ಎಂದು ಹೇಳಿ ಒಳಗೆ ಹೋದಳು. ಹಸಿದ ಮಗುವಿಗೆ ತೊಟ್ಟು ಹಾಲು ಕೊಡಲು ಸಾಧ್ಯವಿಲ್ಲೆಂಬುದನ್ನು ನೆನೆದು ಅವಳು ರೋದಿಸಿದಳು. "ಅಮ್ಮಾ, ಹಾಲು ಕೊಡು" ಎಂದು ಹಸಿದ ಬಾಲಕನು ಪ್ರಲಾಪಿಸುತ್ತಿದ್ದನು. ಆಗ ಅವಳು ಒಂದು ಉಪಾಯ ಮಾಡಿದಳು : ಉಂಛವೃತ್ತಿಯಿಂದ ಕೂಡಿಸಿದ ಧಾನ್ಯವನ್ನು ತೆಗೆದುಕೊಂಡು ಬೀಸಿ ಹಿಟ್ಟು ಮಾಡಿ, ಅದನ್ನು ನೀರಲ್ಲಿ ಬೆರೆಯಿಸಿ ಕಾಸಿ ಪಾತ್ರೆಯಲ್ಲಿ ಹಾಕಿ ಮಗನಿಗೆ ಕೊಟ್ಟಳು. ಉಪಮನ್ಯುವು ಅದನ್ನು ಕುಡಿದನು. ಅವನು ವ್ಯಾಕುಲತೆಯಿಂದ– 'ಮಾತೆ, ಇದು ಹಾಲು ಅಲ್ಲ' ಎಂದು ರೋದಿಸ ತೊಡಗಿದನು. ಆಗ ಆ ತೇಜಸ್ವಿನಿ ತಾಯಿಯು–'ಮಗೂ, ನಾವು ದರಿದ್ರರು. ನಮ್ಮಲ್ಲಿ ಹಾಲು ಇಲ್ಲ. ಬೀಜದ ಹಿಟ್ಟನ್ನು ನೀರಲ್ಲಿ ಬೆರೆಯಿಸಿ ಕೊಟ್ಟೆನು. ನಾನು ಧನದ ಸಲುವಾಗಿ ಶಿವನನ್ನು ಪೂಜಿಸಲಿಲ್ಲ. ನನಗೆ ಧನ, ಸಂಪತ್ತು ಅಸ್ಥಿರವೆಂಬ ಭಾವವಿದೆ. ಆದುದರಿಂದ ನನಗೆ ಗೋಸಂಪತ್ತು ಲಭ್ಯವಾಗಿಲ್ಲ.

ಪೂರ್ವಜನ್ಮನಿ ಯದ್ದತ್ತಂ ಶಿವಮುದ್ದಿ ಶ್ಯವೈ ಸುತ ।
ತದೈವ ಲಭ್ಯತೇನಾನ್ಯದ್ವಿಷ್ಣುಮುದ್ದಿಶ್ಯ ವಾ ಪ್ರಭುಂ ॥

(ಶಿ. ಪು. ವಾ. ಸಂ. ಪೂ. ೩೦ ೩೪೧–೩೨)

ಉಪಮನ್ಯು–ಮಾತೆ, ಪಾರ್ವತಿ ಸಹಿತ ಪರಮೇಶ್ವರನು ದಯಾಸಿಂಧು ವಾಗಿ ವಿದ್ಯಮಾನನಾಗಿರುವಾಗ ಮಾನವರು ಚಿಂತಿಸುವದು ವ್ಯರ್ಥವು. ನೀನು ಭಯವನ್ನೂ ಶೋಕವನ್ನೂ ತ್ಯಾಗ ಮಾಡು. ನಾನು ಮಹಾದೇವನನ್ನು ಮೆಚ್ಚಿಸಿಕೊಂಡು ಅವನಿಂದ ಕ್ಷೀರಸಾಗರವನ್ನೇ ಪಡೆದುಕೊಳ್ಳುವೆನು.

ಮಾತೆ– ಮಗೂ, ನೀನು 'ನಮಃ ಶಿವಾಯ' ಪಂಚಾಕ್ಷರಿ ಮಂತ್ರದ ಜಪ ಮಾಡು. ಸಾಂಬಸದಾಶಿವನ ಭಜನೆ ಮಾಡು. ಶಿವನನ್ನು ಪೂಜಿಸು. ದಯಾಮಯ

ನಾದ ಸಾಂಬಶಿವನು ಪ್ರಸನ್ನನಾಗಿ ನಿನ್ನ ಕ್ಲೇಶಗಳನ್ನು ನಾಶಮಾಡಿ ಮನೋಭಿಲಾಷೆಗಳನ್ನು ಪೂರೈಸುವನು. ನೀನು ಈಗಲೇ ತಡಮಾಡದೆ ತಪವನ್ನಾರಂಭಿಸು.

ವಾಯುದೇವ–ತಾಯಿಯ ಆಜ್ಞೆಯನ್ನು ಶಿರಸಾ ವಹಿಸಿ ಅವಳ ಪಾದಗಳಿಗೆ ವಂದಿಸಿ ತಪೋವನಕ್ಕೆ ತೆರಳಿ, ಪಂಚಾಕ್ಷರ ಮಂತ್ರದಿಂದ ತಪಸ್ಸನ್ನಾರಂಭಿದನು. ಅವನು ತಪಾಚರಣೆ ಮಾಡುವಾಗ ಎಷ್ಟೋ ತೊಂದರೆಗಳೊದಗಿದರೂ ದೃಢಮನಸ್ಸಿನಿಂದ ತಪವನ್ನು ಸಾಗಿಸಿದನು. ಆಗ ಶಿವನು ಇಂದ್ರನ ರೂಪವನ್ನು ಧಾರಣ ಮಾಡಿ ಶಚಿಯಿಂದ ಕೂಡಿಕೊಂಡು ಉಪಮನ್ಯುವಿನ ಬಳಿಗೆ ಹೋದನು. ಆಗ ಅವನು ಐರಾವತವನ್ನೇರಿದ್ದನು. ಉಪಮನ್ಯುವು ಇಂದ್ರನ ಆಗಮನದಿಂದ ಸಂತುಷ್ಟನಾಗಿ ಅವನಿಗೆ ಪ್ರಣಾಮಗಳನ್ನರ್ಪಿಸಿದನು. ಆಗ ಅವನು ಇಂದ್ರನನ್ನುದ್ದೇಶಿಸಿ–ದೇವೇಶ್ವರಾ, ಶಚೀಪತಿಯೆ, ನೀನು ಬಂದುದರಿಂದ ನನ್ನ ಆಶ್ರಮವು ಪವಿತ್ರವಾಯಿತು, ಎಂದು ವಿನಯದಿಂದ ಮಾತನಾಡಿದನು.

ಇಂದ್ರರೂಪಧಾರಿ ಶಿವ–ಉತ್ತಮ ವ್ರತವನ್ನು ಪಾಲನೆ ಮಾಡುವ ಧೌಮ್ಯಾಗ್ರಜ ಉಪಮನ್ಯುವೆ, ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿರುವೆನು. ನಿನ್ನ ಇಚ್ಛೆಯಂತೆ ವರವನ್ನು ಕೇಳು.

ಉಪಮನ್ಯು–ಮಹೇಂದ್ರಾ, ನಾನು ಶಿವನನ್ನು ಬೇಡುವವನು. ಅನ್ಯ ದೇವತೆಗಳ ಅವಶ್ಯಕತೆ ನನಗಿಲ್ಲ.

ಇಂದ್ರರೂಪಿ ಶಿವ–ಉಪಮನ್ಯು ಮುನಿಯೆ, ನೀನು ನನ್ನನ್ನು ತಿಳಿದಿಲ್ಲವೆ? ನಾನು ದೇವತೆಗಳ ರಾಜನು, ಮೂರುಲೋಕಗಳ ಅಧಿಪತಿಯು. ನೀನು ನನ್ನ ಭಕ್ತನಾಗು. ನನ್ನನ್ನು ಪೂಜಿಸು, ನಾನು ನಿನ್ನ ಇಚ್ಛೆಯನ್ನು ಈಡೇರಿಸುವೆನು. ಆ ನಿರ್ಗುಣ ಶಿವನನ್ನು ತ್ಯಾಗ ಮಾಡು. ಅವನಿಂದ ನಿನ್ನ ಕಾರ್ಯವು ಸಿದ್ಧಿಸಲಾರದು. ಅವನು ದೇವತೆಗಳ ಪಂಕ್ತಿಯಿಂದ ದೂರವಾಗಿ ಪಿಶಾಚಭಾವವನ್ನು ಪ್ರಾಪ್ತ ಮಾಡಿಕೊಂಡಿರುವನು.

ಉಪಮನ್ಯು–ದೇವರಾಜಾ, ನೀನು ಶಿವನಿಂದೆ ಮಾಡತೊಡಗಿರುವೆ. ಇದೇ ಸಂದರ್ಭದಲ್ಲಿ ನೀನೇ ಪರಮಾತ್ಮನಾದ ಮಹಾದೇವನನ್ನು ನಿರ್ಗುಣನೆಂದು ಹೇಳಿ ಅವನ ಸಂಪೂರ್ಣ ಮಹತ್ವವನ್ನು ಸ್ಪಷ್ಟಪಡಿಸಿರುವೆ. ಭಗವಾನ್ ರುದ್ರದೇವನು ದೇವನಿಗೆ ದೇವನಾಗಿರುವನು. ಬ್ರಹ್ಮ ವಿಷ್ಣು ಮಹೇಶನ ಜನಕನು ಆ

ಮಹಾದೇವನು. ಆ ಸರ್ವೇಶ್ವರ ಶಿವನ ಹೊರತು ನಾನು ಯಾರಲ್ಲಿಯೂ ವರವನ್ನು ಯಾಚಿಸಲಾರೆನು. ಬ್ರಹ್ಮಾದಿ ಜನರು ಅವನನ್ನು ಸತ್‌–ಅಸತ್, ವ್ಯಕ್ತ–ಅವ್ಯಕ್ತ, ನಿತ್ಯ, ಅನೇಕ ಎಂದು ಹೇಳುವರು. ತತ್ವಜ್ಞಾನಿ ಪುರುಷರು ಅವನ ಉಪಾಸನೆ ಮಾಡುವರು. ಹಾಲಿಗಾಗಿ ನನ್ನ ತಪಾಚರಣೆಯಿರುವದು. ನಾನು ಆ ಇಚ್ಛೆಯನ್ನು ಬದಿಗಿರಿಸಿ, ಶಿವಾಸ್ತ್ರದಿಂದ ನಿನ್ನನ್ನು ವಧೆಗೊಳಿಸಿ ಈ ಶರೀರತ್ಯಾಗ ಮಾಡುವೆನು. ಶಿವನಿಂದಕರನ್ನು ನಾನು ಕ್ಷಮಿಸುವುದಿಲ್ಲ.

ವಾಯುದೇವ–ಉಪಮನ್ಯುವು ಹೀಗೆ ನುಡಿದು, ಅಘೋರಾಸ್ತ್ರದಿಂದ ಅಭಿಮಂತ್ರಿತ ಘೋರ ಭಸ್ಮವನ್ನು ಇಂದ್ರವಧೆಯ ಉದ್ದೇಶದಿಂದ ಪ್ರಹಾರ ಮಾಡಿದನು. ತರುವಾಯ ಅವನು ಸಿಂಹನಾದ ಮಾಡಿ ಶಂಭುವಿನ ಚರಣಾರ ವಿಂದವನ್ನು ಸ್ಮರಿಸುತ್ತ ತನ್ನ ದೇಹವನ್ನು ದಗ್ಧ ಮಾಡಲು ಸಿದ್ಧನಾಗಿ ಆಗ್ನೇಯಿಯನ್ನು ಧಾರಣ ಮಾಡಿದನು. ಆಗ ಶಿವನು ಯೋಗಿ ಉಪಮನ್ಯುವಿನ ಧಾರಣವನ್ನು ತನ್ನ ಸೌಮ್ಯದೃಷ್ಟಿಯಿಂದ ಸ್ತಂಭನಗೊಳಿಸಿದನು. ಅಘೋರಾಸ್ತ್ರವನ್ನು ನಂದೀಶ್ವರನ ಆಜ್ಞೆಯಂತೆ ಶಿವವಲ್ಲಭ ನಂದಿಯು ಮಧ್ಯದಲ್ಲಿ ನಿಲ್ಲಿಸಿದನು. ತರುವಾಯ ಭಗವಾನ್ ಶಿವನು ತನ್ನ ಬಾಲೇಂದುಶೇಖರನ ಸ್ವರೂಪವನ್ನು ಧರಿಸಿ ಉಪಮನ್ಯುವಿಗೆ ದರ್ಶನ ಕೊಟ್ಟನು. ಉಪಮನ್ಯು ಮುನಿಯು ಭಗವನ್ ಶಂಕರಾ, ಪ್ರಸನ್ನನಾಗು ! ಈ ಪಾಮರನನ್ನು ಕ್ಷಮಿಸು ! ಎಂದು ಮಹಾದೇವನ ಅಡಿಗಳಿಗೆ ಎರಗಿದನು. ಪರಮೇಶ್ವರನು ಭಗವತಿ ಪಾರ್ವತೀಸಹಿತವಾದ ನಿಜರೂಪವನ್ನು ತೋರಿಸಿದನು. ಅವನು ವೃಷಭಾರೂಢನಾಗಿದ್ದನು. ಆಗ ಆಗಸದಲ್ಲಿ ದೇವದುಂದುಭಿಗಳು ಮೊಳಗಿದವು. ದೇವ--ಗಂಧರ್ವರು ಪುಷ್ಪ ವೃಷ್ಟಿಯನ್ನು ಸುರಿಸಿದರು. ಬ್ರಹ್ಮ, ವಿಷ್ಣು, ಮಹೇಂದ್ರ ಮೊದಲಾದ ದೇವತೆ ಗಳೂ ವಿದ್ಯಾಧರರೂ ಅಲ್ಲಿ ನೆರದರು. ಶಿವನು ಕ್ಷೀರಸಾಗರವನ್ನು ಸುಧಾ ಸಾಗರವನ್ನೂ ಉಪಮನ್ಯುವಿಗೆ ದಯಪಾಲಿಸಿದನು.

ಶಿವ–ವತ್ಸಾ, ನೀನು ಇಚ್ಛಾನುಸಾರವಾಗಿ ಸುಖೋಪಭೋಗಗಳನ್ನ ನುಭವಿಸುವೆ. ನೀನು ಪರಮ ಶಿವಭಕ್ತನಿರುವೆ. ಶಿವ ತತ್ವಗಳನ್ನು ಬಲ್ಲವನಿರುವೆ. ಈ ಪಾರ್ವತೀ ದೇವಿಯು ನಿನ್ನ ಮಾತೆಯು. ಅವಳ ಕೃಪೆಯು ನಿನ್ನ ಮೇಲೆ ಸದೈವ ಅಕ್ಷಯವಾಗಿರುವದು. ನಾನು ನಿನಗೆ ಅಮರತ್ವವನ್ನೂ, ಗಣಪತಿಯ ಸನಾತನ ಪದವನ್ನೂ ಪ್ರದಾನ ಮಾಡಿರುವೆನು. ಪಾಶುಪತ ವ್ರತ, ಪಾಶುಪತ ಜ್ಞಾನ, ತಾತ್ವಿಕ

ವ್ರತಯೋಗ, ಚಿರಕಾಲವೂ ಅವುಗಳ ಪ್ರವಚನ ಪಟುತ್ವ ಮೊದಲಾದವುಗಳನ್ನು ಪ್ರದಾನ ಮಾಡಿರುವೆನು.

ಉಪಮನ್ಯು–ಮಹಾದೇವಾ, ನಾನು ನಿನ್ನ ದರ್ಶನದಿಂದ ಧನ್ಯನಾದೆನು. ಚಿರಕಾಲವೂ ಭಕ್ತಿಯು ನನ್ನಲ್ಲಿ ಚಿರವಾಗಿ ಉಳಿಯುವಂತೆ ಅನುಗ್ರಹಿಸು. ಶಿವನು ಸರ್ವೇಶ್ವರನೆಂಬ ಭಾವವು ನನ್ನಲ್ಲಿ ಸ್ಥಿರವಾಗಿ ಉಳಿಯಬೇಕು. ನನಗೆ ನಿನ್ನ ನಿತ್ಯ ಸಾಮೀಪ್ಯವು ಲಭಿಸುವಂತೆ ಆಶೀರ್ವದಿಸು.

ವಾಯುದೇವ–ಭಗವಾನ್ ಶಿವನೂ, ಪಾರ್ವತಿಯೂ ಯೋಗಿವರೇಣ್ಯ ಉಪಮನ್ಯುವಿಗೆ ಆಶೀರ್ವದಿಸಿ ಅಂತರ್ಧಾನರಾದರು. ತನಗೆ ದೊರೆತ ವರಗಳ ಬಗ್ಗೆ ಉಪಮನ್ಯುವು ತಾಯಿಗೆ ತಿಳಿಸಿದನು. ಮಾತೃ ಹೃದಯವು ಪುತ್ರ ವಾತ್ಸಲ್ಯದಿಂದ ಉಕ್ಕೇರಿತು. ಅವಳೂ ಪುತ್ರನನ್ನು ಹರಿಸಿ ಮುಂದ್ವಾಡಿದಳು.

ವಾಯುವೀಯ ಸಂಹಿತಾ (ಪೂರ್ವಖಂಡ) ಸಂಪೂರ್ಣ.

## ವಾಯುವೀಯ ಸಂಹಿತಾ (ಉತ್ತರಖಂಡ)

# ಪಾಶುಪತ ಜ್ಞಾನ

ಸೂತಪುರಾಣಿಕ–ಶೌನಕಾದಿ ಋಷಿಗಳೆ, ನೈಮಿಷಾರಣ್ಯನಿವಾಸಿ ಋಷಿಗಳು ವಾಯುದೇವನಿಗೆ ವಂದಿಸಿ, ಭಗವಾನ್ ಶ್ರೀಕೃಷ್ಣನು ಮಹಾಮುನಿ ಉಪಮನ್ಯುವಿನಿಂದ ಪರಮೋತ್ತಮವಾದ ಪಾಶುಪತ ಜ್ಞಾನವನ್ನು ಹೇಗೆ ಪ್ರಾಪ್ತಿ ಮಾಡಿಕೊಂಡನು? ದೇವಕಿನಂದನನು ಉಪಮನ್ಯು ಋಷಿಯ ತಪೋವನಕ್ಕೆ ಆಗಮಿಸಿದ ಉದ್ದೇಶವೇನು ?

ವಾಯುದೇವ–ಶ್ರೀಹರಿಯು ಧರ್ಮಸಂಸ್ಥಾಪನಾರ್ಥವಾಗಿ ದೇವಕಿ ದೇವಿಯ ಗರ್ಭದಿಂದ ಅವತರಿಸಿದನು. ಅವನು ಪುತ್ರಪ್ರಾಪ್ತಿಗಾಗಿ ತಪಶ್ಚರ್ಯ ಮಾಡಲು ಉಪಮನ್ಯುವಿನ ತಪೋವನಕ್ಕೆ ಬಂದನು. ಮಹಾ ತಪಸ್ವಿಯಾದ ಉಪಮನ್ಯುವಿನ ದರ್ಶನ ಮಾಡಿಕೊಂಡನು. ಉಪಮನ್ಯುವು ತ್ರಿಪುಂಡ್ರಧಾರಿ ಯಾಗಿದ್ದನು. ರುದ್ರಾಕ್ಷ ಮಾಲೆಗಳು ಅವನಿಗೆ ಆಭೂಷಣವಾಗಿದ್ದವು. ಹಾಲಿಗಾಗಿ ಘೋರ ತಪಸ್ಸು ಮಾಡಿ ಮಹಾದೇವನಿಂದ ಕ್ಷೀರಸಾಗರವನ್ನು ಪಡೆದುಕೊಂಡ

ಮಹಾಯೋಗಿಯವನು. ಅವನು ಯಾವಾಗಲೂ ಶಿವಧ್ಯಾನದಲ್ಲಿ ಮಗ್ನನಾಗಿ ರುತ್ತಿದ್ದನು. ಶ್ರೀಕೃಷ್ಣನು ಉಪಮನ್ಯು ಋಷಿಯ ದರ್ಶನ ಮಾಡಿಕೊಂಡು ಮೂರುಬಾರಿ ಅವನಿಗೆ ಪ್ರದಕ್ಷಿಣೆ ಮಾಡಿ ಶಿರ ಬಾಗಿದನು. ಉಪಮನ್ಯುವು ವಿಧಿಪೂರ್ವಕವಾಗಿ 'ಅಗ್ನಿರಿತಿ ಭಸ್ಮ:' ಮೊದಲಾದ ಮಂತ್ರಗಳಿಂದ ಶ್ರೀಕೃಷ್ಣನಿಗೆ ಭಸ್ಮಲೇಪನ ಮಾಡಿದನು. ಅವನಿಂದ ಹನ್ನೆರಡು ತಿಂಗಳು ಪಾಶುಪತ ವ್ರತವನ್ನು ಮಾಡಿಸಿದನು. ಆ ವ್ರತದ ಸಮಯದಲ್ಲಿ ದಿವ್ಯ ಪಾಶುಪತ ಮುನಿಗಳು ಅವನ ಸುತ್ತಲೂ ನೆರೆದಿರುತ್ತಿದ್ದರು. ಆಗ ಶ್ರೀಕೃಷ್ಣನು ಪುತ್ರಪ್ರಾಪ್ತಿಗಾಗಿ ಭಗವಾನ್ ಸಾಂಬಶಿವನ ಆರಾಧನೆ ಮಾಡಿದನು. ಆಗ ಸದಾಶಿವನು ತನ್ನ ಪಾರ್ಷದರಿಂದ ಸಹಿತನಾಗಿ ಅವನಿಗೆ ದರ್ಶನ ಕೊಟ್ಟು ಪುತ್ರಪ್ರದಾನ ಮಾಡಿದನು. ಶಿವನ ವರದಿಂದ ಶ್ರೀಕೃಷ್ಣನು ಪುತ್ರಪ್ರಾಪ್ತಿ ಹೊಂದಿದನು. ಜಾಂಬವತಿಯ ಉದರದಿಂದ ಒಬ್ಬ ಸಾಮರ್ಥ್ಯಶಾಲಿ ಪುತ್ರನು ಜನಿಸಿದನು. ಶಿವನ ವರದಿಂದ ಜನಿಸಿದ್ದರಿಂದ ಶ್ರೀಕೃಷ್ಣನು ಅವನಿಗೆ ಸಾಂಬನೆಂದು ನಾಮಕರಣ ಮಾಡಿದನು. ಶ್ರೀಕೃಷ್ಣನಿಗೆ ಮಹಾದೇವನಿಂದ ಪುತ್ರಲಾಭವೂ, ಮಹಾಮಹಿಮ ಉಪಮನ್ಯು ಮುನಿಯಿಂದ ಪಾಶುಪತ ಜ್ಞಾನ ಲಾಭವೂ ಆಯಿತು.

ನೈಮಿಷಾರಣ್ಯವಾಸಿ ಮುನಿಗಳು–ಪಾಶುಪತ ಜ್ಞಾನದ ಬಗ್ಗೆ ಉಪಮನ್ಯು ಮುನಿಯು ಶ್ರೀಕೃಷ್ಣನಿಗೆ ಯಾವ ಬಗೆಯಿಂದ ಉಪದೇಶಿಸಿದನೆಂಬುದನ್ನು ವಿವರಿಸಬೇಕು. ಶಿವನು ಪಶುಪತಿಯು ಹೇಗೆ ?

ವಾಯುದೇವ–ಋಷಿಗಳೆ, ಶ್ರೀಕೃಷ್ಣನು ಉಪಮನ್ಯುವಿಗೆ ಹೀಗೆಯೆ ವಿಚಾರಿಸಿದನು. ಉಪಮನ್ಯುವು ಅವನಿಗೆ ಉಪದೇಶಿಸಿದ ಸಂಗತಿಯನ್ನು ಕೇಳಿರಿ.

ಶ್ರೀಕೃಷ್ಣ–ಭಗವನ್, ಉಪಮನ್ಯು ಮುನೀಶ್ವರಾ, ಮಹಾದೇವನು ಭಗವತಿ ಪಾರ್ವತಿಗೆ ದಿವ್ಯ ಪಾಶುಪತ ಜ್ಞಾನವನ್ನು ಉಪದೇಶಿಸಿದನೆಂದು ಹೇಳಿದೆ. ಆ ಪಾಶುಪತ ಜ್ಞಾನವನ್ನು ವಿವರಿಸಬೇಕು.

ಉಪಮನ್ಯು–ದೇವಕಿನಂದನಾ, ಬ್ರಹ್ಮನಿಂದ ಮೊದಲ್ಗೊಂಡು ಎಲ್ಲ ಸ್ಥಾವರ, ಜಂಗಮಾತ್ಮಕ ಚರಾಚರ ಪ್ರಾಣಿಗಳು ಭಗವಾನ್ ಶಿವನ ಪಶುಗಳು. ಅವುಗಳಿಗೆಲ್ಲ ಮಹಾದೇವನು ಪತಿಯು. ಆದುದರಿಂದ ರುದ್ರದೇವನಿಗೆ ಪಶುಪತಿ ಎಂಬ ಹೆಸರು ಪ್ರಾಪ್ತವಾಗಿದೆ. ಪಶುಪತಿಯು ಪಶುಗಳನ್ನು ಮಾಯೆಯಿಂದ

ಬಂಧನದಲ್ಲಿ ಕೆಡಹುವನು. ಯಾವ ಭಕ್ತನು ಅವನನ್ನು ಭಕ್ತಿಪೂರ್ವಕವಾಗಿ ಆರಾಧನೆ ಮಾಡುವನೋ ಅವನು ಬಂಧನದಿಂದ ಮುಕ್ತನಾಗುವನು. ಇಪ್ಪತ್ತುನಾಲ್ಕು ತತ್ವಗಳು ಮಾಯೆಯ ಕಾರ್ಯ ಮತ್ತು ಗುಣಗಳಾಗಿವೆ. ಅವೇ ವಿಷಯಗಳು. ಇವು ಜೀವಿಗಳನ್ನು ಬಂಧಿಸುವ ಪಾಶಗಳು. ಈ ಪಾಶಗಳು ಬ್ರಹ್ಮನಿಂದ ಕೀಟದವರೆಗಿನ ಸಮಸ್ತ ಪಶುಗಳನ್ನು ಬಂಧಿಸಿರುವವು. ಆ ಪಶುಪತಿ ದೇವನು ಅವುಗಳಿಂದ ಕಾರ್ಯಗಳನ್ನು ಮಾಡಿಸುವನು. ಆ ಮಹೇಶ್ವರನ ಆಜ್ಞೆಯಿಂದ ಪ್ರಕೃತಿಯು ಪುರುಷೋಚಿತ ಬುದ್ಧಿಯನ್ನು ಉತ್ಪನ್ನ ಮಾಡುವದು. ಬುದ್ಧಿಯು ಅಹಂಕಾರವನ್ನು ಪ್ರಕಟ ಮಾಡುವದು. ಅಹಂಕಾರವು ಕಲ್ಯಾಣದಾಯಿಯಾದ ದೇವಾಧಿದೇವ ಶಿವನ ಆಜ್ಞೆಯಿಂದ ಹನ್ನೊಂದು ಇಂದ್ರಿಯಗಳನ್ನೂ ಐದು ತನ್ಮಾತ್ರೆಗಳನ್ನೂ ಉತ್ಪನ್ನ ಮಾಡುವದು. ತನ್ಮಾತ್ರೆಗಳು ಆ ಮಹೇಶ್ವರನ ಶಾಸನದಿಂದ ಪ್ರೇರಿತವಾಗಿ ಪಂಚಮಹಾಭೂತಗಳನ್ನು ಉತ್ಪನ್ನ ಮಾಡುವವು. ಈ ಎಲ್ಲ ಮಹಾ ಭೂತಗಳು ಶಿವನ ಆಜ್ಞೆಯಿಂದ ದೇಹಧಾರಿಗಳಿಗಾಗಿ ದೇಹವನ್ನು ಸೃಷ್ಟಿಸುವವು. ಬುದ್ಧಿಯು ಕರ್ತವ್ಯವನ್ನು ನಿಶ್ಚಯಿಸುವದು. ಅಹಂಕಾರವು ಅಭಿಮಾನ ಮಾಡುವದು. ಚಿತ್ತವು ಚೇತನ ಕೊಡುವದು. ಮನವು ಸಂಕಲ್ಪ ವಿಕಲ್ಪಗಳನ್ನು ಮಾಡುವದು. ಶ್ರವಣಾದಿ ಜ್ಞಾನೇಂದ್ರಿಯಗಳು ಬೇರೆ ಬೇರೆಯಾಗಿ ಶಬ್ದಾದಿ ವಿಷಯಗಳನ್ನು ಗ್ರಹಿಸುವವು.

ಭಗವಾನ್ ಶಿವನ ಆಜ್ಞೆಯು ದೇವತೆಗಳ ಸಲುವಾಗಿ ಅಲಂಘನೀಯವಿರುವದು. ಆ ಆಜ್ಞೆಯಿಂದಲೇ ಇಂದ್ರನು ದೇವಲೋಕದ ಒಡೆಯನಾಗಿ ತನ್ನ ಕಾರ್ಯ ಮಾಡುವನು. ವರುಣನು ಜಲತತ್ವಪಾಲನೆ ಮಾಡುವನು. ಧನದ ಸ್ವಾಮಿಯಾದ ಯಕ್ಷರಾಜ ಕುಬೇರನು ಧನವನ್ನು ಕೊಡುವನು. ಬ್ರಹ್ಮ ವಿಷ್ಣು ಮಹೇಶ್ವರರು ಪರಶಿವನ ಆಜ್ಞೆಯಿಂದ ಸೃಷ್ಟಿ–ಸ್ಥಿತಿ–ಲಯಾದಿಗಳನ್ನು ನಡೆಯಿಸುತ್ತಿರುವರು. ಭಗವಾನ್ ಸೂರ್ಯದೇವನು ಶಿವನ ಆಜ್ಞೆಯಿಂದ ಪ್ರೇರಿತನಾಗಿ ಕಿರಣಗಳಿಂದ ಪ್ರಕಾಶವನ್ನು, ವರುಣನು ವೃಷ್ಟಿಯನ್ನು ಕೊಡುವನು. ಚಂದ್ರಮನು ಔಷಧಿಗಳನ್ನು ಪೋಷಿಸುವನು. ಆದಿತ್ಯ, ವಸು, ರುದ್ರ, ಅಶ್ವಿನೀ ಕುಮಾರ, ಮರುದ್ಗಣ ಮೊದಲಾದವರು ಕಾರ್ಯತತ್ಪರರಾಗಿರುವದು ಶಿವಾಜ್ಞೆಯಿಂದಲೇ.

# ಶಿವ-ಶಿವೆಯರ ಸ್ವರೂಪ

ಉಪಮನ್ಯು-ಯಾದವೇಂದ್ರಾ, ಬ್ರಹ್ಮ, ವಿಷ್ಣು, ರುದ್ರ, ಮಹೇಶ, ಸದಾಶಿವ ಇವರು ಪರಮೇಶ್ವರನ ಐದು ಮೂರ್ತಿಗಳು. ಇವರ ಹೊರತು ಐದು ಶರೀರಗಳಿದ್ದು ಅವಕ್ಕೆ ಪಂಚಬ್ರಹ್ಮ ಎಂದು ಅನ್ನುವರು. ಈ ಮೂರ್ತಿಗಳಿಂದ ವ್ಯಾಪ್ತವಾಗದ ವಸ್ತುಗಳೇ ಇಲ್ಲ. ಈಶಾನ, ತತ್ಪುರುಷ, ಅಘೋರ, ವಾಮದೇವ ಸದ್ಯೋಜಾತ ಇವರು ಅವನ ಶ್ರೇಷ್ಠತಮ ಮೂರ್ತಿಗಳಾಗಿದ್ದಾರೆ. ಇವುಗಳಲ್ಲಿ ಈಶಾನನು ಆದಿಶ್ರೇಷ್ಠತಮ ಮೂರ್ತಿಯು. ಮೂರ್ತಿಮಾನ್ ಪ್ರಭುವಾದ ಶಿವನ ತತ್ಪುರುಷ ನಾಮಕ ಮೂರ್ತಿಯು. ಮೂರ್ತಿಮಾನ್ ಪ್ರಭುವಾದ ಶಿವನ ತತ್ಪುರುಷ ನಾಮಕ ಮೂರ್ತಿಯು ಗುಣಗಳ ಆಶ್ರಯ ಸ್ವರೂಪನಾಗಿದ್ದು ಭೋಗ್ಯ ಅವ್ಯಕ್ತದಲ್ಲಿ ಅಧಿಷ್ಠಿತನಾಗಿದ್ದಾನೆ. ಶಿವನ ಅಘೋರನಾಮಕ ಮೂರ್ತಿಯು ಧರ್ಮಾದಿ ಎಂಟು ಅಂಗಗಳಿಂದ ಯುಕ್ತವಾದ ಬುದ್ಧಿ ತತ್ವವನ್ನು ಅಧಿಷ್ಠಾನಗೊಳಿಸಿ ಕೊಂಡಿದೆ. ವಿಧಾತಾ ಮಹಾದೇವನ ವಾಮದೇವ ನಾಮಕ ಮೂರ್ತಿಯನ್ನು ಆಗಮವೇತ್ತಾ ವಿದ್ವಾನರು ಅಹಂಕಾರದ ಅಧಿಷ್ಠಾತೃವೆಂದು ಹೇಳುವರು. ಅಮಿತ ತೇಜಸ್ವಿಯಾದ ಶಿವನ ಸದ್ಯೋಜಾತ ನಾಮಕನನ್ನು ಮನದ ಅಧಿಷ್ಠಾತೃವೆಂದು ಹೇಳುತ್ತಾರೆ. ಭಗವಾನ್ ಶಿವನ ಈಶಾನ ನಾಮಕ ಮೂರ್ತಿಯನ್ನು ಶ್ರವಣೇಂದ್ರಿಯ, ವಾಣಿ, ಶಬ್ದ, ಆಕಾಶ ಮೊದಲಾದವುಗಳ ತತ್ವಗಳ ಸ್ವಾಮಿ ಯೆಂದು ಅನ್ನುವರು. ಮಹೇಶ್ವರನ ತತ್ಪುರುಷ ನಾಮಕ ವಿಗ್ರಹವನ್ನು ತ್ವಚೆ, ಕೈಗಳು ಹಾಗೂ ವಾಯು ತತ್ವದ ಸ್ವಾಮಿಯೆಂದು ತಿಳಿದಿರುವರು. ಮಹಾದೇವನ ಅಘೋರನಾಮಕ ಮೂರ್ತಿಯನ್ನು ನೇತ್ರ, ಕಾಲು, ರೂಪ, ಅಗ್ನಿತತ್ವ ಮೊದಲಾದವುಗಳ ಅಧಿಷ್ಠಾತೃ ವೆಂದು ಗಣಿಸಿರುವರು. ಮಹಾದೇವನ ಈ ಐದೂ ಮೂರ್ತಿಗಳು ಕಲ್ಯಾಣದ ಹೇತುವಾಗಿದ್ದಾರೆ. ಮಹಾದೇವನ ಅಷ್ಟಮೂರ್ತಿ ಗಳಂತೆ ಈ ಜಗವು ಇರುವದು. ಈ ವಿಶ್ವವು ಶಿವನ ಎಂಟು ಮೂರ್ತಿಗಳಿಂದ ಓತಪ್ರೋತ ಭಾವದಿಂದ ಸ್ಥಿತವಾಗಿದೆ.

ಶರ್ವ, ಭವ, ರುದ್ರ, ಉಗ್ರ, ಭೀಮ, ಪಶುಪತಿ, ಈಶಾನ, ಮಹಾದೇವ ಇವು ಶಿವನ ವಿಖ್ಯಾತವಾದ ಅಷ್ಟಮೂರ್ತಿಗಳು. ಮಹೇಶ್ವರನ ಈ ಎಂಟು ಮೂರ್ತಿಗಳು ಕ್ರಮವಾಗಿ ಭೂಮಿ, ಜಲ, ಅಗ್ನಿ, ವಾಯು, ಕ್ಷೇತ್ರಜ್ಞ, ಸೂರ್ಯ, ಚಂದ್ರಮ ಮೊದಲಾದವುಗಳಲ್ಲಿ ಅಧಿಷ್ಠಿತವಾಗಿವೆ. ಅವುಗಳಲ್ಲಿ ಪೃಥ್ವಿಮಯಿ

ಯಾದ ಮೂರ್ತಿಯು ಸಂಪೂರ್ಣ ಚರಾಚರ ಜಗತ್ತನ್ನು ಧಾರಣ ಮಾಡಿದೆ. ಅದರ ಅಧಿಷ್ಠಾತೃವಿನ ಹೆಸರು ಶರ್ವ ಎಂದಿರುವದು. ಆದುದರಿಂದ ಇದಕ್ಕೆ ಶಿವನ ಶಾರ್ವೀ ಮೂರ್ತಿ ಎಂದೆನ್ನುವರು. ಅವನ ಜಲಮಯಿ ಮೂರ್ತಿಯು ಸಂಪೂರ್ಣ ಜಗತ್ತಿನ ಜೀವನದಾಯಿನಿಯಾಗಿದೆ. ಜಲವು ಪರಮಾತ್ಮನಾದ ಭವನ ಮೂರ್ತಿಯಾಗಿದ್ದು ಭಾವಿ ಎಂದೆನ್ನುವರು. ಶಿವನ ತೇಜೋಮಯಿಯಾದ ಶುಭ ಮೂರ್ತಿಯು ವಿಶ್ವದ ಒಳಗೂ ಹೊರಗೂ ವ್ಯಾಪ್ತವಾಗಿ ಸ್ಥಿತವಾಗಿರುವದು. ಆ ಘೋರರೂಪಿ ಮೂರ್ತಿಯ ಹೆಸರು ರುದ್ರ ಎಂದಿರುವರು. ಆದುದರಿಂದ ಅದಕ್ಕೆ ರೌದ್ರಿ ಎಂದೆನ್ನುವರು. ಭಗವಾನ್ ಶಿವನು ವಾಯುರೂಪದಿಂದ ಸ್ವಯಂ ಗತಿಶೀಲನಾಗಿ ಈ ಜಗತ್ತನ್ನು ಗತಿಶೀಲವನ್ನಾಗಿ ಮಾಡುವನು; ಹಾಗೂ ಅದರ ಭರಣ, ಪೋಷಣ ಮಾಡುವನು. ಭಗವಾನ್ ವಾಯುವು ಉಗ್ರದ ಮೂರ್ತಿಯಾಗಿರುವನು. ಆದುದರಿಂದ ಸಾಧುಪುರುಷರು ಅವನನ್ನು ಔಗ್ರಿ ಎಂದೆನ್ನುವರು. ಭಗವಾನ್ ಭೀಮನ ಆಕಾಶರೂಪಿಯಾದ ಮೂರ್ತಿಯು ಎಲ್ಲರಿಗೂ ಅವಕಾಶ ಕೊಡುವಂತಹದೂ, ಸರ್ವವ್ಯಾಪಿನಿಯೂ, ಭೂತ ಸಮುದಾಯದ ಭೇದಕವೂ ಆಗಿದೆ. ಅದು ಭೀಮನಾಮದಿಂದ ಪ್ರಸಿದ್ಧವಾಗಿದೆ. ಆದುದರಿಂದ ಅದಕ್ಕೆ ಭೈಮೀ ಮೂರ್ತಿಯೆಂದು ಹೇಳುವರು. ಎಲ್ಲ ಕ್ಷೇತ್ರಗಳಲ್ಲಿ ನಿವಾಸ ಮಾಡುವ ಹಾಗೂ ಸಂಪೂರ್ಣ ಆತ್ಮಗಳ ಅಧಿಷ್ಠಾತೃ ಶಿವಮೂರ್ತಿಯನ್ನು 'ಪಶುಪತಿ' ಎಂದು ತಿಳಿಯಬೇಕು. ಅವನು ಪಶುಗಳನ್ನು ಪಾಶದಿಂದ ಮುಕ್ತ ಮಾಡುವನು. ಮಹೇಶ್ವರನ ಈಶಾನಮೂರ್ತಿಯು ಸೂರ್ಯನು; ಸಮಸ್ತ ಜಗತ್ತನ್ನು ಪ್ರಕಾಶಗೊಳಿಸುತ್ತ ಆಕಾಶದಲ್ಲಿ ವಿಚರಣ ಮಾಡುತ್ತಿರುವನು. ಅಮೃತ ಕಿರಣಗಳಿಂದ ತುಂಬಿದ ಹಾಗೂ ಜಗತ್ತನ್ನು ಅಮೃತದಿಂದ ಅಪ್ಯಾಯಮಾನ ಮಾಡುವ ಚಂದ್ರದೇವನು ಭಗವಾನ್ ಶಿವನ ಮಹಾದೇವನಾಮಕ ವಿಗ್ರಹನಾಗಿದ್ದಾನೆ. ಇವನು ಭಗವಾನ್ ಶಿವನ ಎಂಟನೆಯ ಮೂರ್ತಿಯು. ಅವನು ಶಿವನ ಸಾಕ್ಷಾತ್ ಸ್ವರೂಪವು. ಈ ಮೂರ್ತಿಯು ಎಲ್ಲ ಮೂರ್ತಿಗಳಲ್ಲಿ ವ್ಯಾಪಕ ವಾಗಿದೆ. ಈ ಸಮಸ್ತ ವಿಶ್ವವು ಶಿವರೂಪವಾಗಿದೆ. ವೃಕ್ಷದ ಬೇರುಗಳಿಗೆ ಜಲಸಿಂಚನ ಮಾಡುವುದರಿಂದ ಶಾಖೋಪಶಾಖೆಗಳು ಪುಷ್ಟವಾಗುವಂತೆ ಭಗವಾನ್ ಶಿವನ ಅರ್ಚನೆ ಮಾಡುವುದರಿಂದ ಅವನ ಸ್ವರೂಪಭೂತವಾದ ಜಗತ್ತು ಪೋಷಣೆ ಹೊಂದುವದು. ಆದುದರಿಂದ ಎಲ್ಲರಿಗೂ ಅಭಯದಾನ ಮಾಡುವದು, ಎಲ್ಲರ

ಮೇಲೆಯೂ ಅನುಗ್ರಹ ಮಾಡುವದು, ಎಲ್ಲರಿಗೂ ಉಪಕಾರ ಮಾಡುವದು ಮೊದಲಾದ ಕಾರ್ಯಗಳು ಶಿವನ ಆರಾಧನೆಯೆಂದು ಭಾವಿಸಲ್ಪಟ್ಟಿವೆ. ಸಂಪೂರ್ಣ ಜಗತ್ತು ಪ್ರಸನ್ನಗೊಳ್ಳುವುದರಿಂದ ಭಗವಾನ್ ಶಂಕರನು ಪ್ರಸನ್ನನಾಗುವನು. ಯಾವ ಪ್ರಾಣಿಗಳನ್ನಾದರೂ ಪೀಡಿಸಿದರೆ ಶಿವನನ್ನು ಪೀಡಿಸಿದಂತೆಯೇ ಆಗುವದು. ಅಷ್ಟಮೂರ್ತಿರೂಪದಿಂದ ವಿಶ್ವವನ್ನೇ ವ್ಯಾಪಿಸಿರುವ ಶಿವನನ್ನು ನೀನು ಆರಾಧನೆ ಮಾಡಬೇಕು.

ಶ್ರೀಕೃಷ್ಣ–ಭಗವನ್, ಅಮಿತ ತೇಜಸ್ವಿಯಾದ ಶಿವನ ಅಷ್ಟಮೂರ್ತಿಗಳ ಮಹಿಮೆಯನ್ನು ಕೇಳಿದೆನು. ಪರಮೇಶ್ವರೀ ಶಿವಾ ಹಾಗೂ ಮಹೇಶ್ವರ ಶಿವನ ಬಗ್ಗೆ ಯಥಾರ್ಥ ಜ್ಞಾನವನ್ನು ಮಾಡಿಕೊಡಬೇಕು.

ಉಪಮನ್ಯು–ದೇವಕೀ ನಂದನಾ, ಸಾಕ್ಷಾತ್ ಮಹಾದೇವಿ ಪಾರ್ವತಿಯು ಶಕ್ತಿಯು. ಮಹಾದೇವನು ಶಕ್ತಿಮಾನನು. ಈ ಎರಡೂ ವಿಭೂತಿಗಳ ಲೇಶಮಾತ್ರ ಸ್ವರೂಪವೇ ಸಂಪೂರ್ಣ ಚರಾಚರ ವಿಶ್ವವಾಗಿದೆ. ಇದರಲ್ಲಿ ಕೆಲವು ವಸ್ತುಗಳು ಜಡಸ್ವರೂಪವೂ ಕೆಲವು ಚೇತನ ಸ್ವರೂಪವೂ ಆಗಿರುವವು. ಚಿನ್ಮಂಡಲವು ಜಡಮಂಡಲದೊಡನೆ ಸಂಯುಕ್ತವಾಗಿ ಸಂಸಾರದಲ್ಲಿ ಪರಿಭ್ರಮಣ ಮಾಡುತ್ತಿರುವದು. ಶಿವ–ಶಿವೆಯರ ವಶದಲ್ಲಿ ಈ ವಿಶ್ವವಿರುವುದು; ಆದರೆ ಅವರು ವಿಶ್ವದ ವಶದಲ್ಲಿಲ್ಲ. ಜಗತ್ತು ಶಿವ–ಶಿವೆಯರ ಶಾಸನಕ್ಕೊಳಪಟ್ಟಿರುವುದು. ಆದುದರಿಂದ ಅವರು ವಿಶ್ವೇಶ್ವರ–ವಿಶ್ವೇಶ್ವರಿಯರಾಗಿರುವರು. ಶಿವೆಯು ದೇವಿಯಾಗಿರುವಳು; ಶಿವನು ದೇವನಾಗಿದ್ದಾನೆ. ಚಂದ್ರಮ–ಚಂದ್ರಿಕೆಯರಲ್ಲಿ ಭೇದವಿರದಂತೆ ಶಿವೆ–ಶಿವರಲ್ಲಿ ಅಂತರವಿಲ್ಲ. ಚಂದ್ರಿಕೆಯಿಲ್ಲದೆ ಚಂದ್ರಮನು ಸುಶೋಭಿತನಾಗುವುದಿಲ್ಲ. ಅದರಂತೆ ಶಿವೆಯಿಲ್ಲದೆ ಶಿವನು ಶೋಭಾಯಮಾನನಾಗುವುದಿಲ್ಲ. ಪ್ರಭೆಯಿಲ್ಲದೆ ಸೂರ್ಯದೇವನಿರುವುದಿಲ್ಲ; ಸೂರ್ಯನಿರದೆ ಪ್ರಭೆಯಿರುವುದಿಲ್ಲ. ಅದರಂತೆ ಶಕ್ತಿಯಿಲ್ಲದೆ ಶಕ್ತಿಮಾನನಿರುವುದಿಲ್ಲ; ಶಕ್ತಿಮಾನನಿಲ್ಲದೆ ಶಕ್ತಿಯು ಇರುವುದಿಲ್ಲ.

ಚಂದ್ರೋ ನ ಖಲು ಭಾತ್ಯೇಷ ಯಥಾ ಚಂದ್ರಿಕಯಾ ವಿನಾ ।
ನ ಭಾತಿ ವಿದ್ಯಮಾನೋಽಪಿ ತಥಾ ಶಕ್ತ್ಯಾ ವಿನಾ ಶಿವಃ ॥

ಪ್ರಭಯಾ ಹಿ ವಿನಾ ಯದ್ವದ್ಭಾನುರೇಷ ನ ವಿದ್ಯತೇ ।
ಪ್ರಭಾ ಚ ಭಾನುನಾ ತೇನ ಸುತರಾಂ ತದುಪಾಶ್ರಯಾ ॥
ಏವಂ ಪರಸ್ಪರಾಪೇಕ್ಷಾ ಶಕ್ತಿ ಶಕ್ತಿಯತೋಃ ಸ್ಥಿತಾ ।
ನ ಶಿವೇನ ವಿನಾ ಶಕ್ತಿರ್ನ ಶಕ್ತ್ಯಾ ಚ ವಿನಾ ಶಿವಃ ॥

(ಶಿ. ಪು. ವಾ. ಸಂ. ಉ. ಖಂ. ೪ ೧೦–೧೨)

ಶಿವನು ಯಾರ ಮುಖಾಂತರವಾಗಿ ಸದಾ ದೇಹಧಾರಿಗಳಿಗೆ ಭೋಗ, ಮೋಕ್ಷಗಳನ್ನು ಕೊಡಲು ಸಮರ್ಥನಾಗುವನೋ ಆ ಅದ್ವಿತೀಯ ಚಿನ್ಮಯಿ ಪರಾಶಕ್ತಿಯು ಶಿವನ ಆಶ್ರಿತಳಾಗಿರುವಳು. ಜ್ಞಾನಿಗಳು ಈ ಕಾರಣದಿಂದಲೇ ಶಕ್ತಿದೇವಿಯನ್ನು ಪರಶಿವನ ಸಹಧರ್ಮಿಣಿಯೆಂದು ಭಾವಿಸಿರುವರು. ಆ ಚಿನ್ಮಯ ಪರಾಶಕ್ತಿಯು ಸೃಷ್ಟಿ ಧರ್ಮಿಣಿಯಾಗಿರುವಳು. ಅವಳು ಶಿವೇಚ್ಛೆಯಿಂದ ನಾನಾ ಪ್ರಕಾರದ ವಿಶ್ವರಚನೆ ಮಾಡುತ್ತಿರುವಳು. ಆ ಶಕ್ತಿಯು ಮೂಲಪ್ರಕೃತಿಯು, ಮಾಯೆಯು, ತ್ರಿಗುಣೆಯು ಎಂದು ಹೇಳಿಸಿಕೊಳ್ಳುವವಳು. ಆ ಶಕ್ತಿರೂಪ ಶಿವೆಯು ಈ ವಿಶ್ವದ ವಿಸ್ತಾರ ಮಾಡಿರುವಳು.

ಶರೀರಾಂತರ ಭೇದದಿಂದ ಶಕ್ತಿಯಲ್ಲಿ ಅನೇಕ ರೂಪಗಳಾಗಿವೆ. ರುದ್ರನ ಶಕ್ತಿಯು ರೌದ್ರಿಯು, ವಿಷ್ಣುವಿನ ಶಕ್ತಿಯು ವೈಷ್ಣವಿಯು, ಬ್ರಹ್ಮನ ಶಕ್ತಿಯು ಬ್ರಹ್ಮಾಣಿಯು, ಇಂದ್ರನ ಶಕ್ತಿಯು ಇಂದ್ರಾಣಿಯು ಆಗಿರುವಳು. ವಿಶ್ವವು ಶಕ್ತ್ಯಾತ್ಮದಿಂದ ವ್ಯಾಪ್ತವಾಗಿದೆ. ಪರಾಶಕ್ತಿಯು ಈಶ್ವರನ ಇಚ್ಛೆಯಂತೆ ಚರಾಚರ ಜಗತ್ತನ್ನು ಸೃಷ್ಟಿಸುವಳು. ಜ್ಞಾನ, ಕ್ರಿಯಾ, ಇಚ್ಛಾಶಕ್ತಿಯಿಂದ ಈಶ್ವರನು ವಿಶ್ವವ್ಯಾಪಿಯಾಗಿ ಸ್ಥಿತನಾಗಿರುವನು. ಈಶ್ವರನ ಈ ಮೂರೂ ಶಕ್ತಿಗಳಿಂದ ವಿಶ್ವದ ಉತ್ಥಾನವಾಗಿದೆ. ಪ್ರಸವಧರ್ಮವುಳ್ಳ ಶಕ್ತಿಯು ಸಂಯೋಗದಿಂದ ಶಿವನು ಶಕ್ತಿಮಾನನೆನಿಸಿಕೊಳ್ಳುತ್ತಿರುವನು. ಆದುದರಿಂದ ಜಗತ್ತಿಗೆ ಶಾಕ್ತ ಹಾಗೂ ಶೈವ ಎಂದೆನ್ನುವರು. ಭವ–ಭವಾನಿಯ ಹೊರತು ಈ ಸೃಷ್ಟಿಯ ಉತ್ಪತ್ತಿಯಾಗು ವುದಿಲ್ಲ. ಶಿವನು ಮಹೇಶ್ವರನಾಗಿರುವನು; ಶಿವೆಯು ಮಾಯೆಯಾಗಿರುವಳು. ಭಗವಾನ್ ಶಿವನು ಅತ್ರಿಯಾಗಿರುವನು; ಪಾರ್ವತಿಯು ಅನಸೂಯೆಯಾಗಿರು ವಳು. ಕಾಲಹಂತಾ ಶಿವನು ಕಶ್ಯಪನು; ಮಹೇಶ್ವರಿ ಉಮೆಯು ಅದಿತಿಯು. ಕಾಮನಾಶಕ ಶಿವನು ವಸಿಷ್ಠನಾಗಿರುವನು; ದೇವಿ ಪಾರ್ವತಿಯು ಅರುಂಧತಿಯು. ಭಗವಾನ್ ಶಂಕರನು ಪುರುಷನು; ಮಹೇಶ್ವರಿ ಶಿವೆಯು ಸ್ತ್ರೀಯು.

ಶ್ರೀಕೃಷ್ಣಾ, ಭಗವಾನ್ ಶಿವನ ಹಾಗೂ ಭಗವತಿ ಶಿವೆಯ ಸ್ವರೂಪದ ಯಥಾರ್ಥವಾದ ವರ್ಣನೆ ಮಾಡಿದೆನು. ತನ್ನ ಚಿತ್ತವನ್ನು ಮಹೇಶ್ವರನ ಚರಣಾರವಿಂದದಲ್ಲಿ ಸಮರ್ಪಣೆ ಮಾಡಿದವನು ಸದ್ಭಕ್ತನೆನಿಸಿಕೊಳ್ಳುವನು.

## ಯೋಗಾಚಾರ್ಯರ ಹಾಗೂ ಅವರ ಶಿಷ್ಯರ ನಾಮಾವಳಿ

## ಷಡಕ್ಷರ ಮಂತ್ರ ಮಹಿಮೆ

ಶ್ರೀಕೃಷ್ಣ–ಭಗವನ್, ಸಮಸ್ತ ಯುಗಾವರ್ತದಲ್ಲಿ ಯೋಗಾಚಾರ್ಯರ ಸ್ತೋತ್ರದಿಂದ ಭಗವಾನ್ ಶಂಕರನ ಅವತಾರಗಳಾಗುತ್ತಿರುವವು. ಆ ಅವತಾರಗಳ ಶಿಷ್ಯರು ಯಾರು ಯಾರೆಂಬುದನ್ನು ವಿವರಿಸಬೇಕು.

ಉಪಮನ್ಯು–ಶ್ವೇತ, ಸುತಾರ, ಮದನ, ಸುಹೋತ್ರ, ಕಂಕ, ಲೋಗಾಕ್ಷಿ ಮಹಾಮಾಯಾವಿ, ಜೈಗೀಷವ್ಯ, ದಧಿವಾಹ, ಋಷಭ ಮುನಿ, ಉಗ್ರ, ಅತ್ರಿ, ಜಟಾಮಾಲಿ, ಅಟ್ಟಹಾಸ, ದಾರುಕ, ಲಾಂಗುಲಿ, ಮಹಾಕಾಲ, ಶೂಲಿ, ದಂಡಿ, ಮುಂಡೀಶ, ಸಹಿಷ್ಣು, ಸೋಮಶರ್ಮಾ, ನಕುಲೀಶ್ವರ ಮೊದಲಾದ ಇಪ್ಪತ್ತೆಂಟು ಯೋಗಾಚಾರ್ಯರು ವಾರಾಹ ಕಲ್ಪದ ಏಳನೆಯ ಮನ್ವಂತರದಲ್ಲಿ ಯುಗ ಕ್ರಮದಿಂದ ಪ್ರಕಟರಾದರು. ಇವರಿಗೆ ಶಾಂತಚಿತ್ತವುಳ್ಳ ನಾಲ್ಕು ನಾಲ್ಕು ಜನ ಶಿಷ್ಯರಾದರು, ಅವರ ಹೆಸರುಗಳು : – ಶ್ವೇತ, ಶ್ವೇತಶಿಖ, ಶ್ವೇತಾಶ್ವ, ಶ್ವೇತಲೋಹಿತ, ದುಂದುಭಿ, ಶತರೂಪ, ಋಚೀಕ, ಕೇತುಮಾನ, ವಿಕೋಶ, ವಿಕೇಶ, ವಿಪಾಶ, ಪಾಶನಾಶನ, ಸುಮುಖ, ದುರ್ಮುಖ, ದುರ್ಗಮ, ದುರತಿಕ್ರಮ, ಸನತ್ಕುಮಾರ, ಸನಕ, ಸನಂದನ, ಸನಾತನ, ಸುಧಾಮಾ, ವಿರಜಾ, ಶಂಖ, ಅಂಡಜ, ಸಾರಸ್ವತ, ಮೇಘ, ಮೇಘವಾಹಕ, ಸುವಾಹಕ, ಕಪಿಲ, ಆಸುರಿ, ಪಂಚಶಿಖ, ಬಾಷ್ಕಲ, ಪರಾಶರ, ಗರ್ಗ, ಭಾರ್ಗವ, ಅಂಗೀರಾ, ಬಲಬಂಧು, ನಿರಾಮಿತ್ರ, ಕೇತುಶೃಂಗ, ತಪೋಧನ, ಲಂಬೋದರ, ಲಂಬ, ಲಂಬಾತ್ಮಾ, ಲಂಬಕೇಶಕ, ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸಿದ್ಧಿ, ಸುಧಾಮಾ, ಕಶ್ಯಪ, ವಸಿಷ್ಠ, ವಿರಜಾ, ಅತ್ರಿ, ಉಗ್ರ, ಗುರುಶ್ರೇಷ್ಠ, ಶ್ರವಣ, ಶ್ರವಿಷ್ಟಕ, ಕುಣಿ, ಕುರ್ಣಬಾಹು, ಕುಶರೀರ, ಕುನೇತ್ರಕ, ಕಾಶ್ಯಪ, ಉಶನಾ, ಚ್ಯವನ, ಬೃಹಸ್ಪತಿ, ಉತಥ್ಯ,

ವಾಮದೇವ, ಮಹಾಕಾಲ, ಮಹಾನಿಲ, ವಾಚಃ ಶ್ರವಾ, ಸುವೀರ, ಶ್ಯಾವಕ, ಮತೀಶ್ವರ, ಹಿರಣ್ಯನಾಭ, ಕೌಶಲ್ಯ, ಲೋಕಾಕ್ಷಿ ಕುಥುಮಿ, ಸುಮಂತು, ಜೈಮಿನಿ, ಕುಬಂಧ, ಕುಶಕಂಧರ, ಪ್ಲಕ್ಷ, ದಾರ್ಭಾರ್ಯಣಿ, ಕೇತುಮಾನ, ಗೌತಮ, ಭಲ್ಲವಿ, ಮಧುಪಿಂಗ, ಶ್ವೇತಕೇತು, ಉಶಿಜ, ಬೃಹದಶ್ವ, ದೇವಲ, ಕವಿ, ಶಾಲಿ ಹೋತ್ರ, ಸುವೇಷ, ಯುವನಾಶ್ವ, ಶರದ್ವಸು, ಛಗಲ, ಕುಂಭಕರ್ಣ, ಕುಂಭ, ಪ್ರಬಾಹುಕ, ಉಲೂಕ, ವಿದ್ಯುತ್, ಶಂಬೂಕ, ಆಶ್ವಲಾಯನ, ಅಕ್ಷಪಾದ, ಕಣಾದ, ಉಲೂಕ, ವತ್ಸ, ಕುಶಿಕ, ಗರ್ಗ, ಮಿತ್ರಕ, ರುಷ್ಯ ಮೊದಲಾದವರು ಯೋಗಾಚಾರ್ಯರೂಪಿ ಮಹೇಶ್ವರನ ಶಿಷ್ಯರು. ಇವರ ಸಂಖ್ಯೆಯು ಒಂದು ನೂರಾ ಹನ್ನೆರಡು. ಇವರೆಲ್ಲರೂ ಸಿದ್ಧ ಪಾಶುಪತರು. ಇವರು ಭಸ್ಮ ವಿಭೂಷಿತರು. ಇವರು ಸಂಪೂರ್ಣ ಶಾಸ್ತ್ರಗಳ ತತ್ವಜ್ಞರೂ, ವೇದವೇದಾಂತ ಪಾರಂಗತ ವಿದ್ವಾನರೂ, ಶಿವಾಶ್ರಮದಲ್ಲಿ ಅನುರಕ್ತರೂ, ಶಿವಜ್ಞಾನ ಪರಾಯಣರೂ, ಅನಾಸಕ್ತನೂ, ಭಗವಾನ್ ಶಿವನ ಧ್ಯಾನದಲ್ಲಿ ರತರಾದವರೂ, ದ್ವಂದ್ವಾತೀತರೂ ಧೀರರೂ, ಸರ್ವಭೂತಹಿತ ಕಾರಿಗಳೂ, ಸಕಲರೂ, ಕೋಮಲರೂ, ಸ್ವಸ್ಥರೂ, ಕ್ರೋಧರಹಿತರೂ, ಜಿತೇಂದ್ರಿಯರೂ ಆಗಿರುವರು. ರುದ್ರಾಕ್ಷ ಮಾಲೆಯು ಅವರ ಅಭೂಷಣವು. ತ್ರಿಪುಂಡ್ರಾಂಕಿತರಾದ ಇವರು ಜಟಾಧಾರಿಗಳಾಗಿರುವರು; ಹಲವರು ಶಿಖಾ ಹೀನರೂ ಇರುವರು. ಇವರು ಫಲ–ಮೂಲಾಹಾರಿಗಳು; ಹಾಗೂ ಪ್ರಾಣಾ ಯಾಮ ತತ್ಪರರು. ಶಿವಾಭಿಮಾನಿಗಳಾದ ಇವರು ಯಾವಾಗಲೂ ಶಿವನ ಚಿಂತನೆಯಲ್ಲಿ ಮಗ್ನರಾಗಿರುವರು. ಇವರು ಸದಾ ಪರಮಧಾಮಕ್ಕೆ ಗಮನ ಮಾಡಲು ಕಟಿಬದ್ಧರು. ಯೋಗಾಚಾರ್ಯರಿಂದ ಸಹಿತರಾದ ಶಿಷ್ಯರು ಶಿವನ ಆರಾಧನೆ ಮಾಡುತ್ತ ಸಾಯುಜ್ಯವನ್ನು ಪ್ರಾಪ್ತ ಮಾಡಿಕೊಳ್ಳಲು ಸಿದ್ಧರಾಗಿರುವರು.

ಶ್ರೀಕೃಷ್ಣ–ಸರ್ವಜ್ಞನಾದ ಮಹರ್ಷಿಪ್ರವರಾ, ನೀನು ಜ್ಞಾನಸಾಗರನಿ ರುವೆ. ನಿನ್ನ ಮುಖದಿಂದ ಪಂಚಾಕ್ಷರ ಮಂತ್ರದ ಮಹಾತ್ಮೆಯನ್ನು ಕೇಳಲಿಚ್ಛಿಸು ವೆನು.

ಉಪಮನ್ಯು–ದೇವಕಿ ನಂದನಾ, ಪ್ರಣವಸಹಿತ ಪಂಚಾಕ್ಷರ ಮಂತ್ರವು ವೇದಗಳ ಸಾರತತ್ವವಾಗಿರುವದು. ಇದು ಮೋಕ್ಷದಾಯಕವಾಗಿದೆ. ಇದು ಶಿವಸ್ವರೂಪ ಮಂತ್ರವು. ಶಿವನು ಸಂಪೂರ್ಣ ದೇಹಧಾರಿಗಳ ಸಮಸ್ತ ಮನೋರಥದ ಸಿದ್ಧಿಗಾಗಿ 'ಓಂನಮಃ ಶಿವಾಯ' ಮಂತ್ರದ ಪ್ರತಿಪಾದನೆ

ಮಾಡಿರುವನು. ಇದು ಎಲ್ಲ ವಿದ್ಯೆಗಳ ಬೀಜಮಂತ್ರವಾಗಿದೆ. ನ್ಯಗ್ರೋಧ ಬೀಜದಲ್ಲಿ ಮಹಾವೃಕ್ಷವು ಅಡಗಿರುವಂತೆ ಈ ಮಂತ್ರವು ಮಹಾನ್ ಅರ್ಥದಲ್ಲಿ ಅಡಕವಾಗಿದೆ. 'ಓಂ' ಎಂಬ ಏಕಾಕ್ಷರೀ ಮಂತ್ರದಲ್ಲಿ ತ್ರಿಗುಣಾತೀತನೂ, ಸರ್ವಜ್ಞನೂ, ಸರ್ವಕರ್ತೃವೂ, ದ್ಯುತಿಮಾನನೂ ಸರ್ವವ್ಯಾಪಿಯೂ ಆದ ಶಿವನು ಪ್ರತಿಷ್ಠಿತನಾಗಿರುವನು. ಈಶಾನ ಮೊದಲಾದ ಏಕಾಕ್ಷರ ಬ್ರಹ್ಮರು 'ನಮಃ ಶಿವಾಯ' ಮಂತ್ರದಲ್ಲಿ ಕ್ರಮಶಃ ಸ್ಥಿತರಾಗಿರುವರು. ಸೂಕ್ಷ್ಮ ಷಡಕ್ಷರ ಮಂತ್ರದಲ್ಲಿ ಪಂಚಬ್ರಹ್ಮರೂಪಧಾರಿಯಾದ ಸಾಕ್ಷಾತ್ ಭಗವಾನ್ ಶಿವನು ಸ್ವಭಾವತಃ ವಾಚ್ಯ ವಾಚಕ ಭಾವದಿಂದ ವಿರಾಜಮಾನನಾಗಿರುವನು. ಅವನು ಅಪ್ರಮೇಯ ನಿದ್ದುದರಿಂದ ಶಿವನು ವಾಚ್ಯನಾಗಿದ್ದು, ಮಂತ್ರವು ಅವನ ವಾಚಕವೆಂದು ತಿಳಿಯಲ್ಪಟ್ಟಿದೆ. ಷಡಕ್ಷರ ಮಂತ್ರವು ಪರಮ ಪದವಾಗಿದೆ. ಈ ಮಂತ್ರದಲ್ಲಿ ಆರು ಅಂಗಗಳ ಸಹಿತವಾದ ವೇದಗಳೂ ಶಾಸ್ತ್ರಗಳೂ ವಿದ್ಯಮಾನವಾಗಿರುವವು. ಷಡಕ್ಷರ ಮಂತ್ರದ ಸಮಾನವಾದ ಮಂತ್ರವು ಬೇರೊಂದಿಲ್ಲ. ಶಿವಜ್ಞಾನವು ಷಡಕ್ಷರ ಮಂತ್ರರೂಪಿ ಸೂತ್ರದ ಸಂಕ್ಷಿಪ್ತ ಭಾಷ್ಯವು. ಯಾರ ಹೃದಯದಲ್ಲಿ 'ಓಂ ನಮಃ ಶಿವಾಯ' ಷಡಕ್ಷರ ಮಂತ್ರದ ಪ್ರತಿಷ್ಠಾಪನೆಯಾಗಿರುವದೋ ಅವನಿಗೆ ವಿಸ್ತೃತ ಶಾಸ್ತ್ರಗಳಿಂದ ಏನು ಪ್ರಯೋಜನವಿರುವದು? ಪ್ರಣವಾಕ್ಷರ ಸಹಿತವಾದ ಪಂಚಾಕ್ಷರ ಮಂತ್ರವೇ ಷಡಕ್ಷರ ಮಹಾಮಂತ್ರವು. ಇದು ಮನುಷ್ಯನನ್ನು ಪಾಪಪುಂಜದಿಂದ ಮುಕ್ತಮಾಡುವದು.

## ಯೋಗ

ಶ್ರೀಕೃಷ್ಣ–ಭಗವನ್, ನೀನು ನನಗೆ ಪರಮ ದುರ್ಲಭವಾದ ಯೋಗದ ಬಗ್ಗೆ ಪರಿಚಯ ಮಾಡಿಕೊಡಬೇಕು.

ಉಪಮನ್ಯು–ಎರಡನೆಯ ವೃತ್ತಿಗಳನ್ನು ನಿರೋಧಗೊಳಿಸಿ, ತನ್ನ ಚಿತ್ತವನ್ನು ಭಗವಾನ್ ಶಿವನಲ್ಲಿ ನಿಶ್ಚಲಗೊಳಿಸುವದೇ ಯೋಗವು. ಯೋಗಗಳು ಐದು ಪ್ರಕಾರದವಿರುವವು. ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವ ಯೋಗ, ಮಹಾಯೋಗ, ಇವು ಐದು ವಿಧದ ಯೋಗಗಳು. ಮಂತ್ರ ಜಪದ ಅಭ್ಯಾಸವಶ ಮಂತ್ರದ ವಾಚ್ಯಾರ್ಥದಲ್ಲಿ ಸ್ಥಿತವಾದ ವಿಕ್ಷೇಪರಹಿತ ಮನದ ವೃತ್ತಿಯು

ಹೆಸರು ಮಂತ್ರಯೋಗವು. ಮನದ ಅದೇ ವೃತ್ತಿಯು ಪ್ರಾಣಾಯಾಮಕ್ಕೆ ಪ್ರಾಧಾನ್ಯ ಕೊಟ್ಟರೆ ಅದರ ನಾಮವು ಸ್ಪರ್ಶಯೋಗವು. ಆ ಸ್ಪರ್ಶಯೋಗವು ಮಂತ್ರ ಸ್ಪರ್ಶದಿಂದ ರಹಿತವಾದರೆ ಭಾವಯೋಗವಾಗುವದು. ಸಂಪೂರ್ಣ ವಿಶ್ವದ ರೂಪ ಮಾತ್ರದ ಅವಯವಗಳು ವಿಲೀನವಾದರೆ ಅದಕ್ಕೆ ಅಭಾವಯೋಗವೆನ್ನುವರು. ಏಕಮಾತ್ರ ಉಪಾಧಿಶೂನ್ಯ ಶಿವಸ್ವಭಾವದ ಚಿಂತನೆ ಮಾಡುತ್ತ ಶಿವಮಯವಾದರೆ ಅದಕ್ಕೆ ಮಹಾಯೋಗವೆನ್ನುವರು.

ಕಂಡ, ಕೇಳಿದ ಲೌಕಿಕ–ಪಾರಲೌಕಿಕ ವಿಷಯಗಳ ಬಗೆಗೆ ಯಾರ ಮನವು ವಿರಕ್ತವಾಗಿರುವದೋ ಅವರಿಗೆ ಯೋಗದ ಅಧಿಕಾರವಿದೆ; ಬೇರೆಯವರಿಗೆ ಅಧಿಕಾರವಿಲ್ಲ. ಲೌಕಿಕ–ಪಾರಲೌಕಿಕ ಇವೆರಡೂ ವಿಷಯಗಳ ಬಗ್ಗೆ ದೋಷಗಳ ಹಾಗೂ ಶಿವನ ಗುಣಗಳ ದರ್ಶನ ಮಾಡುವದರಿಂದ ಮನವು ವಿರಕ್ತವಾಗುವದು. ಪ್ರಾಯಶಃ ಎಲ್ಲ ಯೋಗಗಳು ಎಂಟು ಇಲ್ಲವೆ ಆರು ಅಂಗಗಳಿಂದ ಯುಕ್ತ ವಾಗುವವು. ಯಮ, ನಿಯಮ, ಸ್ವಸ್ತಿಕಾದಿ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಮೊದಲಾದವುಗಳು ಯೋಗದ ಎಂಟು ಅಂಗಗಳೆಂದು ವಿದ್ವಾಂಸರು ಹೇಳಿರುವರು. ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಇವು ಯೋಗದ ಆರು ಲಕ್ಷಣಗಳಾಗಿವೆ. ಶಿವ ಶಾಸ್ತ್ರದಲ್ಲಿ ಇವುಗಳ ಬೇರೆ ಬೇರೆ ಲಕ್ಷಣಗಳು ಹೇಳಲ್ಪಟ್ಟಿವೆ. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಇವುಗಳಿಗೆ ಸತ್ಪುರುಷರು ಯಮವೆಂದು ಹೇಳಿದ್ದಾರೆ. ಈ ಪ್ರಕಾರ ಯಮವು ಐದು ಅವಯವಗಳ ಯೋಗದಿಂದ ಯುಕ್ತವಾಗಿದೆ. ಶೌಚ, ಸಂತೋಷ, ತಪ, ಜಪ, ಪ್ರಣಿಧಾನ ಈ ಐದು ಭೇದಗಳಿಂದ ಯುಕ್ತವಾದ ಎರಡನೆಯ ಯೋಗಾಂಗಕ್ಕೆ ನಿಯಮವೆಂದು ಅನ್ನುವರು. ನಿಯಮವು ತನ್ನ ಅಂಶಗಳ ಭೇದದಿಂದ ಐದು ಪ್ರಕಾರದ್ದಿರುವದು. ಎಂಟು ಪ್ರಕಾರದ ಆಸನಗಳು ಹೇಳಲ್ಪಟ್ಟಿವೆ. ಸ್ವಸ್ತಿಕ ಆಸನ, ಪದ್ಮಾಸನ, ಅರ್ಧಚಂದ್ರಾಸನ, ವೀರಾಸನ, ಯೋಗಾಸನ, ಪ್ರಸಾಧಿತಾಸನ, ಪರ್ಯಂಕಾಸನ, ಮತ್ತು ರುಚಿಗೆ ಸರಿಯಾದ ಆಸನ ಮೊದಲಾದವುಗಳು ಆಸನದ ಭೇದಗಳಾಗಿವೆ. ನಮ್ಮ ಶರೀರದಲ್ಲಿ ಪ್ರಕಟವಾದ ವಾಯುವು ಪ್ರಾಣವಾಯುವು. ಅದನ್ನು ಪ್ರತಿಬಂಧಿಸುವದಕ್ಕೆ ಆಯಾಮವೆನ್ನುವರು. ಆ ಪ್ರಾಣಾಯಾಮವು ಮೂರು ಪ್ರಕಾರದ್ದಿರುವದು. ರೇಚಕ, ಪೂರಕ, ಕುಂಭಕ ಇವು ಪ್ರಾಣಾಯಾಮದ

ಭೇದಗಳಾಗಿವೆ. ನಾಸಿಕದ ಒಂದು ಛಿದ್ರವನ್ನು ಮುಚ್ಚಿ ಎರಡನೆಯ ಛಿದ್ರದಿಂದ ಉದರಸ್ಥ ವಾಯುವನ್ನು ಹೊರಗೆ ಕಳುಹಿಸುವದಕ್ಕೆ, ರೇಚಕವೆಂದೆನ್ನುವರು. ತರುವಾಯ ಎರಡನೆಯ ಛಿದ್ರದಿಂದ ಬಾಹ್ಯ ವಾಯುವನ್ನು ಶರೀರದ ಒಳಗೆ ತೆಗೆದುಕೊಳ್ಳುವದಕ್ಕೆ ಪೂರಕವೆನ್ನುವರು. ಸಾಧಕನು ಒಳಗಿನ ವಾಯುವನ್ನು ಹೊರಗೆ ಬಿಡದೆ, ಹೊರಗಿನ ವಾಯುವನ್ನು ಗ್ರಹಣ ಮಾಡದೆ ಅವಿಚಲ ಭಾವದಿಂದ ಸ್ಥಿತನಾಗಿರುವದಕ್ಕೆ ಕುಂಭಕವೆನ್ನುವರು. ಸಾಧಕನು ಇವುಗಳನ್ನು ಅಭ್ಯಾಸ ಮಾಡಬೇಕು.

ಚಿತ್ತವನ್ನು ಒಂದು ಸ್ಥಾನ ವಿಶೇಷದಲ್ಲಿ ನಿಲ್ಲಿಸುವದು–ಸ್ಥಿರಪಡಿಸುವದು ಇದು ಧಾರಣಾಸ್ವರೂಪವು. ಏಕಮಾತ್ರ ಶಿವನು ಸ್ಥಾನವಾಗಿರುವನು. ನಿಯಮಿತ ಕಾಲದವರೆಗೆ ಸ್ಥಾನಸ್ವರೂಪ ಶಿವನಲ್ಲಿ ಮನವು ಸ್ಥಿರವಾಯಿತೆಂದರೆ ಧಾರಣಾದ ಸಿದ್ಧಿಯಾಯಿತೆಂದು ಭಾವಿಸಬೇಕು. ವಿಕ್ಷೇಪರಹಿತ ಚಿತ್ತದಿಂದ ಶಿವನ ಚಿಂತನೆ ಮಾಡುವದೇ ಧ್ಯಾನವು. ಧ್ಯೇಯದಲ್ಲಿ ಸ್ಥಿತವಾದ ಚಿತ್ತದ ಧ್ಯೇಯಾಕಾರ ವೃತ್ತಿಯಾಗಿ, ಮಧ್ಯದಲ್ಲಿ ಎರಡನೆಯ ವೃತ್ತಿಯು ಸೇರದೆ ಅದೇ ಧ್ಯೇಯಾಕಾರ ವೃತ್ತಿಯು ಪ್ರವಾಹರೂಪದಿಂದ ನಿರ್ಮಾಣವಾಗುವದೇ ಧ್ಯಾನವು. ಬೇರೆ ವಸ್ತುಗಳನ್ನು ತ್ಯಾಗಮಾಡಿ ಕೇವಲ ಕಲ್ಯಾಣಕಾರಿಯಾದ ಪರಮದೇವ ದೇವೇಶ್ವರ ಶಿವನ ಧ್ಯಾನದಲ್ಲಿ ಮಗ್ನವಾಗಬೇಕು. ಶಿವನಂತೆ ಶಿವಾದೇವಿಯೂ ಪರಮ ಧ್ಯೇಯಳಾಗಿರುವಳು. ಶಿವನೂ ಶಿವೆಯೂ ಸಂಪೂರ್ಣ ಭೂತಗಳಲ್ಲಿ ವ್ಯಾಪ್ತರಾಗಿ ರುವರು. ಧ್ಯಾನದಿಂದ ಎರಡು ಪ್ರಯೋಜನಗಳಾಗುವವು. ಮೊದಲನೆಯ ಉಪಯೋಗವೆಂದರೆ ಮೋಕ್ಷಸಾಧನೆಯು; ಅಣಿಮಾದಿ ಸಿದ್ಧಿಯ ಉಪಲಬ್ಧಿಯೇ ಎರಡನೆಯ ಪ್ರಯೋಜನವು. ಧ್ಯಾತಾ, ಧ್ಯಾನ, ಧ್ಯೇಯ, ಧ್ಯಾನ ಪ್ರಯೋಜನ ಇವುಗಳನ್ನು ಚೆನ್ನಾಗಿ ತಿಳಿದುಕೊಂಡು ಯೋಗವೇತ್ತಾ ಪುರುಷನು ಯೋಗಾಭ್ಯಾಸ ಮಾಡಬೇಕು. ಜ್ಞಾನ–ವೈರಾಗ್ಯ ಸಂಪನ್ನನೂ, ಶ್ರದ್ಧಾಳುವೂ, ಕ್ಷಮಾಶೀಲನೂ, ಮೋಹರಹಿತನೂ ಉತ್ಸಾಹಿಯೂ ಆದ ಪುರುಷನು ಧ್ಯಾತಾ ಎಂದೆನಿಸಿಕೊಂಡು ಧ್ಯಾನದಲ್ಲಿ ಸಫಲತೆ ಹೊಂದುವನು.

ಸಾಧಕನು ಧ್ಯಾನ ಮಾಡಿ ದಣಿದ ಬಳಿಕ ಜಪವನ್ನು ಮಾಡಬೇಕು; ಜಪವನ್ನು ಮಾಡಿ ದಣಿದ ಬಳಿಕ ಧ್ಯಾನ ಮಾಡಬೇಕು. ಹೀಗೆ ಧ್ಯಾನ ಜಪಗಳಲ್ಲಿ ನಿರತನಾದ ಪುರುಷನ ಯೋಗವು ಬೇಗನೆ ಸಿದ್ಧಿಸುವದು. ಹನ್ನೆರಡು

ಪ್ರಾಣಾಯಾಮಗಳಾದರೆ ಒಂದು ಧಾರಣವಾಗುವದು. ಹನ್ನೆರಡು ಧಾರಣಗಳಿಗೆ ಧ್ಯಾನವಾಗುವದು. ಹನ್ನೆರಡು ಧ್ಯಾನಗಳಿಗೆ ಒಂದು ಸಮಾಧಿಯಾಗುವದು. ಸಮಾಧಿಯು ಯೋಗದ ಅಂತಿಮ ಅಂಗವಾಗಿದೆ. ಸಮಾಧಿಯಿಂದ ಬುದ್ಧಿಯ ಪ್ರಕಾಶವು ಸರ್ವತ್ರವೂ ವಿಸ್ತರಿಸುವದು. ಧ್ಯಾನದಿಂದ ಧ್ಯಾತಾನು ನಿಶ್ಚಲ ಮಹಾಸಾಗರದಂತೆ ಸ್ಥಿರಭಾವದಿಂದ ಸ್ಥಿತನಾಗುವನು. ಅವನು ಧ್ಯಾನಸ್ವರೂಪ ದಿಂದ ಶೂನ್ಯನಾಗುವನು. ಈ ಅವಸ್ಥೆಗೆ ಸಮಾಧಿ ಎಂದೆನ್ನುವರು. ಅವನು ಮಾತಾಡುವದಿಲ್ಲ; ಕೇಳುವದಿಲ್ಲ; ನೋಡುವದಿಲ್ಲ; ಸ್ಪರ್ಶಾನುಭವ ಹೊಂದುವದಿಲ್ಲ. ಮನದಲ್ಲಿ ಸಂಕಲ್ಪ, ವಿಕಲ್ಪಗಳನ್ನು ಹೊಂದುವದಿಲ್ಲ; ಅವನಿಗೆ ಅಭಿಮಾನದ ಉದಯವಾಗುವದಿಲ್ಲ. ಅವನ ಬುದ್ಧಿಗೆ ಏನೂ ತೋಚುವದಿಲ್ಲ. ಅವನು ನಿಶ್ಚಲನಾಗಿರುವನು. ಈ ಪ್ರಕಾರವಾಗಿ ಶಿವನಲ್ಲಿ ಲೀನ ಚಿತ್ತನಾಗುವದಕ್ಕೆ ಸಮಾಧಿ ಎಂದೆನ್ನುವರು. ವಾಯುರಹಿತ ಸ್ಥಾನದಲ್ಲಿದ್ದ ದೀಪದಂತೆ ಆ ಯೋಗಿಯು ನಿಸ್ಪಂದನಾಗಿರುವನು. ಸಮಾಧಿನಿಷ್ಠನೂ ಚಿತ್ತಶುದ್ಧಿಯವನೂ ಆದ ಯೋಗಿಯು ಸಮಾಧಿಯಿಂದ ವಿಚಲಿತನಾಗುವದಿಲ್ಲ. ಈ ಪ್ರಕಾರವಾಗಿ ಯೋಗಾಭ್ಯಾಸ ಮಾಡುವ ಯೋಗಿಯ ಸರ್ವ ಅಂತರಾಯವು ಶೀಘ್ರವಾಗಿ ನಷ್ಟವಾಗುವದು.

## ಅರವತ್ನಾಲ್ಕು ಐಶ್ವರ್ಯಗಳು

ಉಪಮನ್ಯು–ಯಮನಂದನಾ, ಆಲಸ್ಯ, ತೀಕ್ಷ್ಣವ್ಯಾಧಿಗಳು, ಪ್ರಮಾದ, ಸ್ಥಾನಸಂಶಯ, ಅನವಸ್ಥಿತ ಚಿತ್ತತೆ, ಅಶ್ರದ್ಧಾ, ಭ್ರಾಂತಿ ದರ್ಶನ, ದುಃಖ, ದೌರ್ಮನಸ್ಯ, ವಿಷಯಲೋಲುಪತೆ ಮೊದಲಾದವುಗಳು ಯೋಗ ಮಾರ್ಗದಲ್ಲಿಯ ವಿಘ್ನಗಳಾಗಿವೆ. ಯೋಗಿಗಳ ಶರೀರ ಹಾಗೂ ಚಿತ್ತದಲ್ಲಿ ಆಲಸತಾ ಭಾವವು ಉತ್ಪನ್ನವಾಗುವದಕ್ಕೆ ಆಲಸ್ಯವೆನ್ನುವರು. ವಾತ ಪಿತ್ತ ಕಫಗಳ ವಿಷಮತೆ ಯಿಂದ ಉತ್ಪನ್ನವಾಗುವ ದೋಷಕ್ಕೆ ವ್ಯಾಧಿಯೆನ್ನುವರು. ಅಸಾವಧಾನತೆಯಿಂದ ಸಾಧನಗಳನ್ನು ಹೊಂದದಂತಾಗುವದಕ್ಕೆ ಪ್ರಮಾದವೆನ್ನುವರು. 'ಇದು ಇರುವದೋ ಇಲ್ಲವೋ' ಎಂಬ ಉಭಯಕೋಟಿಯಿಂದ ಆಕ್ರಾಂತವಾಗುವ ಜ್ಞಾನದ ಹೆಸರು ಸ್ಥಾನಸಂಶಯವು. ಮನವು ಸ್ಥಿರತೆ ಹೊಂದದೆ ಇರುವದು ಅನವಸ್ಥಿತ ಚಿತ್ತತಾ (ಮನದ ಅಸ್ಥಿರತೆ) ಆಗಿರುವದು. ಯೋಗಮಾರ್ಗದಲ್ಲಿ ಭಾವರಹಿತ

ಮನಸದ ವೃತ್ತಿಗೆ ಅಶ್ರದ್ಧಾ ಎಂದೆನ್ನುವರು. ವಿಪರೀತ ಭಾವನಾ ಯುಕ್ತವಾದ ಬುದ್ಧಿಗೆ ಭ್ರಾಂತಿಯೆನ್ನುವರು. ಕಷ್ಟವುಂಟಾಗುವದಕ್ಕೆ ದುಃಖ ವೆನ್ನುವರು. ದುಃಖದಲ್ಲಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬ ಮೂರು ಭೇದಗಳಿವೆ. ಮನುಷ್ಯನ ಚಿತ್ತದ ಅಜ್ಞಾನ ಜನಿತ ದುಃಖವು ಆಧ್ಯಾತ್ಮಿಕ ದುಃಖವು. ಪೂರ್ವಕೃತ ಕರ್ಮಗಳ ಪರಿಣಾಮದಿಂದ ರೋಗವು ಉತ್ಪನ್ನವಾಗುವದಕ್ಕೆ ಅಧಿಭೌತಿಕವೆನ್ನುವರು. ವಿದ್ಯುತ್ಪಾತ, ಅಸ್ತ್ರ, ಶಸ್ತ್ರ, ವಿಷ ಮೊದಲಾದವುಗಳಿಂದ ಕಷ್ಟವು ಉತ್ಪನ್ನವಾಗುವದಕ್ಕೆ ಆಧಿದೈವಿಕ ದುಃಖವೆನ್ನುವರು. ಇಚ್ಛೆಗೆ ಆಘಾತ ವಾಗುವದರಿಂದ ಉಂಟಾಗುವ ಮನದ ಕ್ಷೋಭೆಗೆ ದೌರ್ಮನಸ್ಯವೆನ್ನುವರು. ವಿಷಯಗಳಲ್ಲಿ ಸುಖದ ಭ್ರಮೆಯುಂಟಾಗುವದಕ್ಕೆ ವಿಷಯ ಲೋಲುಪತೆ ಯೆಂದೆನ್ನುವರು.

ಯೋಗಪರಾಯಣನಾದ ಯೋಗಿಯ ಈ ವಿಘ್ನಗಳು ಶಾಂತವಾದ ಬಳಿಕ ದಿವ್ಯ ಉಪಸರ್ಗವು ಪ್ರಾಪ್ತವಾದರೆ ಅದು ಸಿದ್ಧಿಸೂಚಕವಾಗಿದೆ. ಪ್ರತಿಭಾ, ಶ್ರವಣ, ವಾರ್ತಾ, ದರ್ಶನ, ಆಸ್ವಾದ, ವೇದನಾ ಮೊದಲಾದ ಆರು ಪ್ರಕಾರದ ಸಿದ್ಧಿಗಳು ಉಪಸರ್ಗಗಳೆನಿಸಿಕೊಳ್ಳುವವು. ಇವು ಯೋಗಶಕ್ತಿಯು ಅಪವ್ಯಯವಾಗುವದಕ್ಕೆ ಕಾರಣಗಳಾಗಿವೆ. ಪದಾರ್ಥವು ಸೂಕ್ಷ್ಮವಿರಲಿ, ಯಾವುದಾದರೂ ಆತಂಕದಲ್ಲಿರಲಿ, ಭೂತಕಾಲದಲ್ಲಿರಲಿ, ಬಹಳ ದೂರವಿರಲಿ, ಭವಿಷ್ಯಕಾಲದಲ್ಲಿ ಆಗುವದಿರಲಿ ಅದರ ಪ್ರತಿಭಾಸವು ( ಜ್ಞಾನವು) ಆಗುವದಕ್ಕೆ 'ಪ್ರತಿಭಾ' ಎಂದೆನ್ನುವರು. ಕೇಳುವ ಪ್ರಯತ್ನವನ್ನು ಮಾಡದೆಯೆ ಕೇಳಿ ಬರುವದಕ್ಕೆ 'ಶ್ರವಣ' ಎಂದೆನ್ನುವರು. ಸಮಸ್ತ ದೇಹಧಾರಿಗಳ ಮಾತುಗಳನ್ನು ತಿಳಿದುಕೊಳ್ಳುವದಕ್ಕೆ 'ವಾರ್ತೆ' ಎಂದೆನ್ನುತ್ತಾರೆ. ಪದಾರ್ಥವಿಲ್ಲದೆ ಯಾವುದೊಂದು ಪದಾರ್ಥವನ್ನು ತೋರಿಸುವದಕ್ಕೆ 'ದರ್ಶನ' ವೆನ್ನುವರು. ದಿವ್ಯರಸದ ಸ್ವಾದವನ್ನು ಪ್ರಾಪ್ತಿ ಮಾಡಿಕೊಡುವದಕ್ಕೆ 'ಆಸ್ವಾದ' ಎಂದೆನ್ನುವರು. ಅಂತಃಕರಣದ ದ್ವಾರವಾಗಿ ದಿವ್ಯಸ್ಪರ್ಶದ ಹಾಗೂ ಬ್ರಹ್ಮ ಲೋಕದವರೆಗಿನ ದಿವ್ಯಗಂಧಾದಿಗಳ, ದಿವ್ಯಭೋಗಗಳ ಅನುಭವಕ್ಕೆ 'ವೇದನಾ' ಎಂದೆನ್ನುತ್ತಾರೆ.

ಸಿದ್ಧ ಯೋಗಿಯಲ್ಲಿ ರತ್ನಗಳು ಉಪಸ್ಥಿತವಾಗುವವು. ಅವನು ಬೇಡಿದ ವಸ್ತುಗಳನ್ನು ಕೊಡುವನು. ಅವನ ಮುಖದಿಂದ ಇಚ್ಛಾನುಸಾರವಾಗಿ ಮಧುರ ವಾಣಿಯು ಹೊರಡುವದು. ಎಲ್ಲ ಪ್ರಕಾರದ ರಸಾಯನಗಳೂ, ದಿವ್ಯೌಷಧಿಗಳೂ ಸಿದ್ಧವಾಗುವವು. ದೇವಾಂಗನೆಯರು ಇಂಥ ಯೋಗಿಗೆ ಪ್ರಣಾಮ ಮಾಡಿ

ಮನೋವಾಂಛಿತ ವಸ್ತುಗಳನ್ನು ಕೊಡುವರು. ಯೋಗಸಿದ್ಧಿಯಿಂದ ಸಾಕ್ಷಾತ್ಕಾರ ವಾಗಿ ಮೋಕ್ಷವು ಲಭಿಸುವದು. ಕೃಶತೆ, ಸ್ಥೂಲತೆ, ಬಾಲ್ಯಾವಸ್ಥೆ, ವೃದ್ಧಾವಸ್ಥೆ, ಯುವಾವಸ್ಥೆ, ನಾನಾ ಜಾತಿಯ ಸ್ವರೂಪವು ಪೃಥ್ವಿ, ಜಲ, ಅಗ್ನಿ, ವಾಯು ಈ ನಾಲ್ಕು ತತ್ವಗಳಿಂದ ಶರೀರವನ್ನು ಧಾರಣ ಮಾಡುವವು. ನಿತ್ಯವೂ ಅಪಾರ್ಥಿವವೂ ಮನೋಹರವೂ ಆದ ಗಂಧವನ್ನು ಗ್ರಹಣ ಮಾಡುವದು, ಇವು ಪಾರ್ಥಿವ ಐಶ್ವರ್ಯದ ಎಂಟು ಗುಣಗಳಾಗಿವೆ.

ಜಲದಲ್ಲಿ ನಿವಾಸ ಮಾಡುವದು, ಭೂಮಿಯ ಮೇಲೆ ಜಲವನ್ನು ತರುವದು, ಇಚ್ಛೆಯಿರದಿದ್ದರೂ ಸಮುದ್ರವನ್ನು ಕುಡಿಯಲು ಸಮರ್ಥನಾಗು ವದು, ಈ ಪ್ರಪಂಚದಲ್ಲಿ ಬೇಕಾದಲ್ಲಿ ಜಲದ ದರ್ಶನ ಮಾಡಿಕೊಳ್ಳುವದು, ಕೊಡವಿಲ್ಲದೆ ಕೈಗಳ ಮೇಲೆ ಜಲರಾಶಿಯನ್ನು ಧಾರಣ ಮಾಡುವದು, ವಿರಸ ವಸ್ತುಗಳನ್ನು ತಿನ್ನುವ ಇಚ್ಛೆಯಾದಾಗ ಅವುಗಳನ್ನು ಸರಸಗೊಳಿಸುವದು, ಜಲ ತೇಜ ವಾಯುಗಳನ್ನು ಶರೀರದಲ್ಲಿ ಧಾರಣ ಮಾಡುವದು, ದೇಹದ ಗುರುಳೆಗಳನ್ನು ಕಳೆಯುವದು ಮೊದಲಾದವುಗಳು ಪಾರ್ಥಿವ ಐಶ್ವರ್ಯದ ಎಂಟು ಗುಣ ಗಳೊಡನೆ ಕೂಡಿ ಹದಿನಾರು ಜಲೀಯ ಐಶ್ವರ್ಯದ ಹದಿನಾರು ಅದ್ಭುತ ಗುಣಗಳಾಗಿವೆ.

ಶರೀರದಿಂದ ಅಗ್ನಿಯನ್ನು ಪ್ರಕಟಮಾಡುವದು, ಅಗ್ನಿಯ ಉರಿಯಿಂದ ಸುಟ್ಟು ಹೋಗುವ ಭಯವನ್ನು ಹೋಗಲಾಡಿಸುವದು, ಈ ಜಗತ್ತನ್ನು ಸುಟ್ಟು ಹಾಕುವ ಸಾಮರ್ಥ್ಯವನ್ನು ಹೊಂದುವದು, ನೀರಮೇಲೆ ಅಗ್ನಿಯ ಪ್ರತಿಷ್ಠಾಪನೆ ಮಾಡುವದು, ಕೈಯಲ್ಲಿ ಅಗ್ನಿಯನ್ನು ಧಾರಣ ಮಾಡುವದು, ಸೃಷ್ಟಿಯನ್ನು ಭಸ್ಮ ಮಾಡಿ, ಅದು ಮೊದಲಿನ ಸ್ಥಿತಿಯನ್ನು ಹೊಂದುವ ಕ್ಷಮತೆಯನ್ನುಂಟು ಮಾಡಿಕೊಳ್ಳುವದು. ಬಾಯಿಯಲ್ಲಿ ಅನ್ನಾದಿಗಳನ್ನು ಪಚನಮಾಡುವದು, ತೇಜ ವಾಯು ತತ್ವಗಳಿಂದ ಶರೀರದ ರಚನೆ ಮಾಡುವದು ಮೊದಲಾದ ಎಂಟು ತೈಜಸ ಐಶ್ವರ್ಯಗಳು ಮೇಲಿನ ಹದಿನಾರು ಗುಣಗಳೊಡನೆಕೂಡಿ ಒಟ್ಟು ಇಪ್ಪತ್ತುನಾಲ್ಕು ಆಗುವವು. ಮನೋವೇಗ ಹೊಂದುವದು, ಪ್ರಾಣಿಗಳಲ್ಲಿ ಪ್ರವೇಶವಾಗುವದು. ಪ್ರಯತ್ನವಿಲ್ಲದೆ ಪರ್ವತಾದಿಗಳನ್ನು ಎತ್ತುವದು, ಬಹಳ ಭಾರವಾಗುವದು, ಬಹಳ ಹಗುರಾಗುವದು, ಕೈಯಲ್ಲಿ ವಾಯುವನ್ನು ಧಾರಣ ಮಾಡುವುದು, ಅಂಗುಲದ ಅಗ್ರ ಭಾಗದಿಂದ ಭೂಮಿಯನ್ನು ನಡುಗಿಸುವದು. ಏಕಮಾತ್ರ ವಾಯು ತತ್ವದಿಂದ

ಶರೀರವನ್ನು ನಿರ್ಮಿಸುವದು, ಇವು ಎಂಟು ಮೇಲಿನ ಇಪ್ಪತ್ತು ನಾಲ್ಕು ಗುಣಗಳೊಡನೆ ಕೂಡಿದರೆ ಮೂವತ್ತೆರಡು ಆಗುವವು. ಶರೀರದ ನೆರಳು ಬೀಳದಂತೆ ಮಾಡುವದು, ಇಂದ್ರಿಯಗಳಿಗೆ ಅಗೋಚರವಾಗುವದು, ಆಕಾಶದಲ್ಲಿ ಇಚ್ಛಾನುಸಾರವಾಗಿ ವಿಚರಣ ಮಾಡುವದು. ಇಂದ್ರಿಯಗಳ ಸಂಪೂರ್ಣ ವಿಷಯಗಳನ್ನು ಸಮನ್ವಯಗೊಳಿಸುವದು, ಆಕಾಶದಲ್ಲಿ ಉಡ್ಡಾಣ ಮಾಡುವದು, ತನ್ನ ದೇಹದಿಂದ ಅಲ್ಲಿ ನಿವಾಸಮಾಡುವದು, ಆಕಾಶವನ್ನು ಗಟ್ಟಿಮಾಡುವದು, ನಿರಾಕಾರವಾಗುವದು. ಈ ಎಂಟು ಗುಣಗಳು ಮೇಲಿನ ಮೂವತ್ತೆರಡು ಗುಣಗಳೊಡನೆ ಕೂಡಿಕೊಂಡು ಒಟ್ಟು ನಾಲ್ವತ್ತು ಗುಣಗಳಾಗುವವು. ಇವು ಸಂಪೂರ್ಣವಾಗಿ ಇಂದ್ರಿಯಗಳ ಐಶ್ವರ್ಯಗಳಾಗಿವೆ. ಇವುಗಳಿಗೆ ಐಂದ್ರ ಮತ್ತು ಅಂಬರ ಐಶ್ವರ್ಯಗಳೆಂದೂ ಹೇಳುವರು.

ಇಚ್ಛಾನುಸಾರವಾಗಿ ವಸ್ತುಗಳನ್ನು ಉಪಲಬ್ದಗೊಳಿಸುವದು, ಇಚ್ಛೆ ಯಾದಲ್ಲಿ ಹೊರಟು ಹೋಗುವದು, ಎಲ್ಲರನ್ನೂ ಅಭಿಭೂತಗೊಳಿಸುವದು, ಗುಹ್ಯ ಅರ್ಥಗಳನ್ನು ತಿಳಿದುಕೊಳ್ಳುವದು, ಕರ್ಮಾನುಸಾರವಾಗಿ ನಿರ್ಮಾಣ ಮಾಡುವುದು, ಸರ್ವವನ್ನೂ ವಶಪಡಿಸಿಕೊಳ್ಳುವುದು, ಯಾವಾಗಲೂ ಪ್ರಿಯ ವಸ್ತುವಿನ ದರ್ಶನ ಮಾಡಿಕೊಳ್ಳುವುದು, ಒಂದೇ ಸ್ಥಳದಿಂದ ಸಂಪೂರ್ಣ ಸಂಸಾರ ವನ್ನು ಕಂಡುಕೊಳ್ಳುವುದು ಇವು ಎಂಟು ಗುಣಗಳು ಮೇಲಿನ ನಾಲ್ವತ್ತು ಗುಣ ಗಳನ್ನು ಕೂಡಿ ಒಟ್ಟು ನಾಲ್ವತ್ತೆಂಟು ಗುಣಗಳಾಗುತ್ತವೆ. ಚಾಂದ್ರಮಸ ಐಶ್ವರ್ಯವು ಈ ನಾಲ್ವತ್ತೆಂಟು ಗುಣಗಳಿಂದ ಯುಕ್ತವಾಗಿರುವುದೆಂದು ಹೇಳಲ್ಪಟ್ಟಿದೆ. ಇದು ಮೊದಲಿನ ಐಶ್ವರ್ಯಗಳಿಗಿಂತ ಹೆಚ್ಚು ಗುಣವುಳ್ಳದ್ದಿರುವದು. ಇದಕ್ಕೆ ಮಾನಸ ಐಶ್ವರ್ಯವೆಂದು ಹೇಳುವರು. ಕಲಿಯುವುದು, ಕುಟ್ಟುವದು, ಕಟ್ಟುವುದು, ಬಿಡುಗಡೆ ಮಾಡುವುದು, ಸಂಸಾರದಲ್ಲಿರುವ ಎಲ್ಲ ಪ್ರಾಣಿಗಳನ್ನು ಗ್ರಹಣ ಮಾಡುವುದು, ಎಲ್ಲರನ್ನೂ ಪ್ರಸನ್ನಗೊಳಿಸುವದು, ವಶಪಡಿಸಿಕೊಳ್ಳುವುದು, ಮೃತ್ಯುವನ್ನು ಜಯಿಸುವದು; ಕಾಲದ ಮೇಲೆ ವಿಜಯ ಹೊಂದುವದು ಇವು ಅಹಂಕಾರಸಂಬಂಧವಾದ ಐಶ್ವರ್ಯದ ಅಂತರ್ಗತವಾದವುಗಳಾಗಿವೆ. ಅಹಂಕಾರಿಕ ಐಶ್ವರ್ಯಕ್ಕೆ 'ಪ್ರಾಜಾಪತ್ಯ' ಎಂದೆನ್ನುವರು. ಚಾಂದ್ರಮಸ ಐಶ್ವರ್ಯಗುಣಗಳೊಡನೆ ಇವು ಎಂಟು ಕೂಡಿ ಐವತ್ತಾರು ಆಗುವವು. ಮಹಾನ್ ಅಭಿಮಾನಿಕ ಐಶ್ವರ್ಯದವು ಈ ಐವತ್ತಾರು ಗುಣಗಳಿರುವವು. ಸಂಕಲ್ಪ

ಮಾತ್ರದಿಂದ ಸೃಷ್ಟಿ ರಚನೆ ಮಾಡುವುದು, ಪಾಲನೆ ಮಾಡುವುದು, ಸಂಹಾರ ಮಾಡುವುದು, ಎಲ್ಲರ ಮೇಲೆ ಅಧಿಕಾರವನ್ನು ಸ್ಥಾಪಿಸುವುದು, ಪ್ರಾಣಿಗಳ ಚಿತ್ತವನ್ನು ಪ್ರೇರಿಸುವುದು, ಸರ್ವರಿಗೂ ಅನುಪಮವಾಗುವುದು, ಈ ಜಗತ್ತಿನ ಹೊರತಾಗಿ ಬೇರೆ ಸಂಸಾರದ ರಚನೆ ಮಾಡುವುದು, ಶುಭವನ್ನು ಅಶುಭವನ್ನಾಗಿಯೂ, ಅಶುಭವನ್ನು ಶುಭವನ್ನಾಗಿಯೂ ಮಾಡುವುದು. ಇವು ಬೌದ್ಧ ಐಶ್ವರ್ಯಗಳಾಗಿವೆ. ಇವು ಪ್ರಾಜಾಪತ್ಯ ಐಶ್ವರ್ಯದ ಗುಣಗಳೊಡನೆ ಕೂಡಿ ಒಟ್ಟು ಅರವತ್ತುನಾಲ್ಕು ಗುಣಗಳಾಗುವವು. ಈ ಬೌದ್ಧಐಶ್ವರ್ಯಕ್ಕೆ ಬ್ರಾಹ್ಮ ಐಶ್ವರ್ಯವೆಂದೂ ಹೇಳುವರು. ಇದಕ್ಕಿಂತ ಉತ್ಕೃಷ್ಟವಾದ ಗೌಣ ಐಶ್ವರ್ಯಕ್ಕೆ ಪ್ರಾಕೃತವೆಂದೂ ವೈಷ್ಣವ ಐಶ್ವರ್ಯವೆಂದೂ ಅನ್ನುವರು. ಮೂರುಲೋಕಗಳ ಪಾಲನೆಯು ಅದರಲ್ಲಿ ಅಂತರ್ಗತನಾಗಿರುವದು. ಆ ಸಂಪೂರ್ಣ ವೈಷ್ಣವ ಪದವನ್ನು ಬ್ರಹ್ಮನೆಂದು ಹೇಳಲಾಗುವುದಿಲ್ಲ; ಬೇರೆ ಯಾವ ರೀತಿಯಿಂದಲೂ ಅದನ್ನು ಪೂರ್ಣವಾಗಿ ವರ್ಣಿಸಲು ಬರುವುದಿಲ್ಲ. ಅದಕ್ಕೆ ಪೌರುಷ ಪದವೆಂದೂ ಅನ್ನುವರು. ಗೌಣ ಮತ್ತು ಪೌರುಷ ಪದಕ್ಕಿಂತ ಉತ್ಕೃಷ್ಟವಾದ ಗಣಪತಿ ಪದವು ಇರುವದು. ಅದಕ್ಕೆ ಈಶ್ವರ ಪದವೆಂದೂ ಹೇಳುವರು. ಆ ಪದದ ಕಿಂಚಿತ್ ಜ್ಞಾನವು ವಿಷ್ಣುವಿಗಿರುವುದು. ಈ ಎಲ್ಲ ವಿಜ್ಞಾನ ಸಿದ್ಧಿಗಳು ಔಪಸರ್ಗಿಕವಾಗಿರುವವು. ಇವುಗಳನ್ನು ಪರಮ ವೈರಾಗ್ಯದಿಂದ ಸ್ತಂಭಿತಗೊಳಿಸಬೇಕು. ಅಶುದ್ಧ, ಪ್ರಾತಿಭಾಸಿಕ ಗುಣಗಳಲ್ಲಿ ಯಾವನ ಚಿತ್ತವು ಆಸಕ್ತವಾಗಿರುವದೋ ಅವನು ಸಂಪೂರ್ಣ ಕಾಮನೆಗಳನ್ನು ಪೂರ್ಣಮಾಡುವ ನಿರ್ಭಯ ಪರಮ ಐಶ್ವರ್ಯದ ಸಿದ್ಧಿಯನ್ನು ಹೊಂದಲು ಸಮರ್ಥನಾಗುವುದಿಲ್ಲ.

## ಧ್ಯಾನ

ಉಪಮನ್ಯು–ದೇವಕೀನಂದನಾ, ಶ್ರೀಕಂಠನಾಥನ ಸ್ಮರಣೆ ಮಾಡುವ ಜನರ ಮನೋರಥಗಳು ತತ್ಕಾಲಕ್ಕೆ ಸಿದ್ಧಿಸುವವು. ಕೆಲವರು ಮನದ ಸ್ಥಿರತೆಗಾಗಿ ಸ್ಥೂಲರೂಪದ ಧ್ಯಾನ ಮಾಡುವರು. ಸ್ಥೂಲರೂಪದ ಚಿಂತನೆಯಲ್ಲಿ ಮನವು ನಿಶ್ಚಲವಾಯಿತೆಂದರೆ ಸೂಕ್ಷ್ಮರೂಪದಲ್ಲಿ ಅದು ಸ್ಥಿರವಾಗುವುದು. ಶಿವನ ಚಿಂತನ ಮಾಡಿದ ಬಳಿಕ ಸಮಸ್ತ ಸಿದ್ಧಿಗಳು ಪ್ರತ್ಯಕ್ಷ ಸಿದ್ಧವಾಗುವವು. ಅನ್ಯ ಮೂರ್ತಿಗಳ

ಧ್ಯಾನ ಮಾಡಿದ ಮೇಲೆಯೂ ಶಿವರೂಪವನ್ನು ಅವಶ್ಯವಾಗಿ ಚಿಂತನಮಾಡಬೇಕು. ಯಾವ ಯಾವ ರೂಪದಲ್ಲಿ ಮನದ ಸ್ಥಿರತೆಯುಂಟಾಗಿರುವದೋ ಅದನ್ನು ಮೇಲಿಂದ ಮೇಲೆ ಧ್ಯಾನ ಮಾಡಬೇಕು. ಧ್ಯಾನವು ಮೊದಲು ಸವಿಷಯ ಆಗುವದು. ಹಿಂದಿನಿಂದ ಅದು ನಿರ್ವಿಷಯವಾಗುವದು. ಕೆಲವರ ಧ್ಯಾನವು ನಿರ್ವಿಷಯವಾಗುವುದಿಲ್ಲವೆಂದು ಕೆಲವು ಸತ್ಪುರುಷರ ಮತವಿದೆ. ನಿರ್ವಿಷಯ ಬುದ್ಧಿಯು ಕೇವಲ ನಿರ್ಗುಣ ನಿರಾಕಾರ ಬ್ರಹ್ಮನಲ್ಲಿ ಪ್ರವೃತ್ತವಾಗುವುದು.

ಸವಿಷಯ ಧ್ಯಾನವು ಪ್ರಾತಃಕಾಲದ ಸೂರ್ಯಕಿರಣ ಸಮಾನವಾಗಿ ಜ್ಯೋತಿಯ ಆಶ್ರಯ ತೆಗೆದುಕೊಳ್ಳುವಂತಹದಾಗಿದೆ. ನಿರ್ವಿಷಯ ಧ್ಯಾನವು ಸೂಕ್ಷ್ಮ ತತ್ವವನ್ನು ಅವಲಂಬನ ಮಾಡುವಂತಹದಿರುವುದು. ಇವೆರಡರ ಹೊರತು ಬೇರೆ ಧ್ಯಾನವು ವಾಸ್ತವವಾಗಿ ಇಲ್ಲವೇ ಇಲ್ಲ. ಸವಿಷಯ ಧ್ಯಾನವು ಸಾಕಾರ ರೂಪವನ್ನು ಅವಲಂಬನ ಮಾಡುವುದು. ನಿರಾಕಾರ ರೂಪದ ಅನುಭವವು ನಿರ್ವಿಷಯ ಧ್ಯಾನವೆಂದು ಭಾವಿಸಲ್ಪಟ್ಟಿದೆ. ಸವಿಷಯ, ನಿರ್ವಿಷಯ ಧ್ಯಾನಗಳು ಸಬೀಜ, ನಿರ್ಬೀಜಗಳೆಂದು ಹೇಳಲ್ಪಡುವವು. ನಿರಾಕಾರದ ಆಶ್ರಯ ಹೊಂದುವದರಿಂದ ನಿರ್ಬೀಜವೂ ಸವಿಷಯದ ಆಶ್ರಯ ಹೊಂದುವದರಿಂದ ಸಬೀಜವೂ ಎಂದು ಹೇಳಲಾಗಿದೆ. ಆದುದರಿಂದ ಮೊದಲು ಸವಿಷಯ ಸಬೀಜ–ಧ್ಯಾನಮಾಡಿ ಕೊನೆಯಲ್ಲಿ ಸರ್ವಪ್ರಕಾರದ ಸಿದ್ಧಿಗಾಗಿ ನಿರ್ವಿಷಯ ನಿರ್ಬೀಜ–ಧ್ಯಾನವನ್ನು ಮಾಡಬೇಕು. ಪ್ರಾಣಾಯಾಮದಿಂದ ಕ್ರಮಶಃ ಶಾಂತಿ ಮೊದಲಾದ ದಿವ್ಯಸಿದ್ಧಿಗಳು ಪ್ರಾಪ್ತವಾಗುವವು. ಶಾಂತಿ, ಪ್ರಶಾಂತಿ, ದೀಪ್ತಿ, ಪ್ರಸಾದ ಇವು ದಿವ್ಯ ಸಿದ್ಧಿಗಳು. ಎಲ್ಲ ಆಪತ್ತುಗಳ ಶಮನವೇ ಶಾಂತಿಯು. ಅಂತರಂಗ–ಬಹಿರಂಗಗಳಲ್ಲಿ ತಮವನ್ನು ನಾಶಮಾಡುವದು ಪ್ರಶಾಂತಿಯು. ಅಂತರಂಗ ಬಹಿರಂಗಗಳಲ್ಲಿ ಜ್ಞಾನವು ಪ್ರಕಾಶ ಹೊಂದುವದಕ್ಕೆ ದೀಪ್ತಿ ಎಂದೆನ್ನುವರು. ಬುದ್ಧಿಯು ಸ್ವಸ್ಥತೆ ಹೊಂದುವದಕ್ಕೆ ಪ್ರಸಾದವೆನ್ನುವರು. ಬಾಹ್ಯಾಭ್ಯಂತರ ಸಹಿತ ಸಮಸ್ತ ಕರಣಗಳು ಬುದ್ಧಿಯ ಪ್ರಸಾದದಿಂದ ಶೀಘ್ರವಾಗಿ ಪ್ರಸನ್ನವಾಗುವವು.

ಧ್ಯಾತಾ, ಧ್ಯಾನ, ಧ್ಯೇಯ, ಧ್ಯಾನ ಪ್ರಯೋಜನ ಇವು ನಾಲ್ಕನ್ನೂ ತಿಳಿದುಕೊಂಡು ಧ್ಯಾನ ಮಾಡಬೇಕು. ಜ್ಞಾನ–ವೈರಾಗ್ಯ ಸಂಪನ್ನನಾದವನು ಸದಾ ಶಾಂತಚಿತ್ತದಿಂದಿರುವನು. ಶ್ರದ್ಧಾಳುವಾಗಿಯೂ ಪ್ರಸಾದಗುಣದಿಂದ ಯುಕ್ತನಾಗಿಯೂ ಇರುವ ಸಾಧಕನಿಗೆ 'ಧ್ಯಾತಾ' ಎಂದೆನ್ನುವರು. ಭಗವಾನ್ ಶಿವನ

ಚಿಂತನಕ್ಕೆ ಧ್ಯಾನವೆನ್ನುವರು. ಅಲ್ಪ ಯೋಗಾಭ್ಯಾಸವು ಸಹ ಪಾಪವನ್ನು ನಾಶ ಮಾಡುವದು. ಆದರಂತೆ ಕಿಂಚಿತ್ ಧ್ಯಾನ ಮಾಡುವ ಪುರುಷನ ಪಾಪವು ಸಹ ನಾಶವಾಗುವದು. ಶ್ರದ್ಧಾ ಪೂರ್ವಕವೂ, ವಿಕ್ಷೇಪರಹಿತವೂ ಆದ ಚಿತ್ತದಿಂದ ಶಿವನ ಚಿಂತನೆ ಮಾಡುವದಕ್ಕೆ ಧ್ಯಾನವೆನ್ನುವರು. ಬುದ್ಧಿಯ ಪ್ರವಾಹರೂಪ ಧ್ಯಾನದ ಅವಲಂಬನಕ್ಕೆ ಧ್ಯೇಯವೆನ್ನುವರು. ಸ್ವಯಂ ಸಾಂಬ ಸದಾಶಿವನು ಆಧ್ಯೇಯ ವಾಗಿರುವನು. ಮೋಕ್ಷಸುಖದ ಪೂರ್ಣ ಅನುಭವವೂ, ಅಣಿಮಾದಿ ಐಶ್ವರ್ಯದ ಉಪಲಬ್ಧಿಯೂ ಪೂರ್ಣ ಶಿವಧ್ಯಾನದ ಸಾಕ್ಷಾತ್ ಪ್ರಯೋಜನಗಳಾಗಿವೆ. ಧ್ಯಾನದಿಂದ ಸೌಖ್ಯ, ಮೋಕ್ಷಗಳು ದೊರೆಯುವವು. ಧ್ಯಾನವಿಲ್ಲದೆ ಜ್ಞಾನ ವಾಗುವುದಿಲ್ಲ. ಯಾವನು ಯೋಗದ ಸಾಧನವನ್ನು ಮಾಡಿರುವದಿಲ್ಲವೋ ಅವನಿಗೆ ಧ್ಯಾನವು ಸಿದ್ಧಿಸುವದಿಲ್ಲ. ಧ್ಯಾನವೂ ಜ್ಞಾನವೂ ಪ್ರಾಪ್ತವಾಗಿದ್ದವನು ಭವಸಾಗರ ವನ್ನು ಸುಸೂತ್ರವಾಗಿ ದಾಟುವನು. ಯೋಗಾಭ್ಯಾಸಯುಕ್ತ ಯೋಗಿಯು ಸಮಸ್ತ ಉಪಾಧಿಗಳಿಂದ ರಹಿತನೂ, ನಿರ್ಮಲ ಜ್ಞಾನವುಳ್ಳವನೂ ಆಗಿರುವನು. ಪಾಪಪೂರಿತ ಬುದ್ಧಿಯವನಿಗೆ ಧ್ಯಾನ, ಜ್ಞಾನಗಳು ದುರ್ಲಭವಾಗುವವು.

ಧ್ಯಾನಕ್ಕೆ ಸಮಾನವಾದ ಯಾವ ತೀರ್ಥವೂ ಇಲ್ಲ; ಧ್ಯಾನಕ್ಕೆ ಸಮಾನವಾದ ಯಾವ ತಪವೂ ಇಲ್ಲ; ಧ್ಯಾನಕ್ಕೆ ಸಮಾನವಾದ ಯಾವ ಯಜ್ಞವೂ ಇಲ್ಲ. ಆದುದರಿಂದ ಧ್ಯಾನವನ್ನು ಅವಶ್ಯವಾಗಿ ಮಾಡಬೇಕು.

ನಾಸ್ತಿ ಧ್ಯಾನಸಮಂ ತೀರ್ಥಂ ನಾಸ್ತಿ ಧ್ಯಾನಸಮಂ ತಪಃ ।
ನಾಸ್ತಿ ಧ್ಯಾನರೂಪೋ ಯಜ್ಞಸ್ತಸ್ಮಾದ್ಧ್ಯಾನಂ ಸಮಾಚರೇತ್ ॥

(ಶಿ. ಪು. ವಾ. ಸಂ. ಉ. ಖಂ. ೩೯ ೨೮)

ತಮ್ಮ ಆತ್ಮವು ಪರಮಾತ್ಮ ಬೋಧೆಯನ್ನು ಮಾಡುವದರಿಂದ ಯೋಗಿ ಜನರು ಕೇವಲ ಜಲದಿಂದ ತುಂಬಿರುವ ತೀರ್ಥಗಳನ್ನೂ, ಶಿಲೆ–ಮೃತ್ತಿಕೆಗಳಿಂದ ನಿರ್ಮಾಣವಾದ ಮೂರ್ತಿಗಳನ್ನೂ ಆಶ್ರಯಿಸುವದಿಲ್ಲ. ಅವರು ಆತ್ಮತೀರ್ಥದಲ್ಲಿ ಅವಗಾಹನ ಮಾಡುವರು; ಆತ್ಮದೇವನ ಧ್ಯಾನದಲ್ಲಿ ಮಗ್ನರಾಗುವರು. ಅಯೋಗಿ ಪುರುಷರು ಮಣ್ಣು–ಕಟ್ಟಿಗೆಗಳಿಂದ ಮಾಡಿದ ಮೂರ್ತಿಯನ್ನು ಪ್ರತ್ಯಕ್ಷ ಕಾಣು ವಂತೆ, ಯೋಗಿಗಳು ಈಶ್ವರನ ಸೂಕ್ಷ್ಮ ಸ್ವರೂಪದ ಪ್ರತ್ಯಕ್ಷ ದರ್ಶನ ಹೊಂದುವರು. ಭಗವಾನ್ ಶಂಕರನನ್ನು ಅಂತಃಕರಣದಲ್ಲಿ ಧ್ಯಾನ ಮಾಡುವ ಭಕ್ತನು ಅವನಿಗೆ

ಹೆಚ್ಚು ಪ್ರಿಯನಾಗುವನಲ್ಲದೆ, ಬಾಹ್ಯ ಆಚಾರಗಳ ಆಶ್ರಯ ಮಾಡುವ ಕರ್ಮಕಾಂಡಿಗೆ ಅವನು ಮೆಚ್ಚುವದಿಲ್ಲ. ಬಾಹ್ಯಕರ್ಮಿ ಪುರುಷನು ಧ್ಯಾನ ಯೋಗಿಯಂತೆ ಫಲಪ್ರಾಪ್ತಿ ಹೊಂದುವದಿಲ್ಲ.

ಜ್ಞಾನಯೋಗದ ಸಾಧನೆಗೆ ಉದ್ಯತನಾದ ಪುರುಷನು ಮಧ್ಯದಲ್ಲಿ ಮೃತನಾದರೂ ರುದ್ರಲೋಕಕ್ಕೆ ಹೋಗುವನು. ಅಲ್ಲಿ ದಿವ್ಯ ಸುಖವನ್ನು ಭೋಗಿಸಿ ಮರಳಿ ಯೋಗಿಗಳ ಕುಲದಲ್ಲಿ ಜನ್ಮ ತಾಳಿ, ಮತ್ತೆ ಜ್ಞಾನಯೋಗದಿಂದ ಸಂಸಾರ ಸಾಗರವನ್ನು ದಾಟುವನು. ಯೋಗ ಜಿಜ್ಞಾಸು ಪುರುಷನು ಹೊಂದುವ ಗತಿಯನ್ನು ಯಜ್ಞಕರ್ತನು ಸಂಪೂರ್ಣ ಮಹಾಯಜ್ಞಗಳನ್ನು ಅನುಷ್ಠಾನ ಮಾಡುವದ ರಿಂದಲೂ ದೊರಕಿಸುವದಿಲ್ಲ. ಕೋಟಿ ಕೋಟಿ ವೇದವೇತ್ತರಾದ ದ್ವಿಜರ ಪೂಜೆಯಿಂದ ದೊರೆಯುವ ಫಲವು ಒಬ್ಬ ಶಿವಯೋಗಿಗೆ ಭಿಕ್ಷೆ ನೀಡುವದರಿಂದ ದೊರೆಯುವದು. ಶಿವಯೋಗಿಯ ನಿಂದೆ ಮಾಡಿದವನು ನರಕಭಾಜನ ನಾಗುವನು. ಶಿವಯೋಗ ಪರಾಯಣ ಮುನಿಯು ವಾಸಮಾಡಿಕೊಂಡಿರುವ ದೇಶವು ಪವಿತ್ರವಾದದ್ದಾಗುವದು. ಆದುದರಿಂದ ಚತುರನಾದ ವಿದ್ವಾಂಸನು ಸಂಸಾರದಿಂದ ಮುಕ್ತನಾಗುವದಕ್ಕಾಗಿ ಶಿವಯೋಗದ ಅಭ್ಯಾಸ ಮಾಡಬೇಕು.

## ಉಪಸಂಹಾರ

ಸೂತಪುರಾಣಿಕ–ಶೌನಕಾದಿ ಮಹರ್ಷಿಗಳೆ, ಭಗವಾನ್ ಶ್ರೀಕೃಷ್ಣನು ಯೋಗಯೋಗೀಶ್ವರ ಶಿವಯೋಗಿ ಉಪಮನ್ಯು ಮಹಾಮುನಿಯಿಂದ ಶಿವ ತತ್ವಮಯ ಜ್ಞಾನಯೋಗವನ್ನು ಪ್ರಾಪ್ತಮಾಡಿಕೊಂಡನು. ಈ ಸಂಗತಿಯನ್ನು ವಾಯುದೇವನು ನೈಮಿಷಾರಣ್ಯ ವಾಸಿಗಳಾದ ಮುನಿಗಳಿಗೆ ಬೋಧಿಸಿ ಸಾಯಂಕಾಲಕ್ಕೆ ಅಂತರ್ಧಾನನಾದನು. ತರುವಾಯ ಪ್ರಾತಃಕಾಲವಾಗುತ್ತಲೆ ನೈಮಿಷಾರಣ್ಯದ ಸಮಸ್ತ ತಪಸ್ವಿ ಮುನಿಗಳು ಸತ್ರದ ಅಂತದಲ್ಲಿ ಅವಭೃತ ಸ್ನಾನಕ್ಕೆ ಸಿದ್ಧರಾದರು. ಆದೇ ಸಮಯದಲ್ಲಿ ಬ್ರಹ್ಮದೇವನ ಆದೇಶದಂತೆ ಸಾಕ್ಷಾತ್ ಸರಸ್ವತಿದೇವಿಯು ಸ್ವಾದಿಷ್ಟ ಜಲದಿಂದ ತುಂಬಿದ ಸ್ವಚ್ಛವೂ ಸುಂದರವೂ ಆದ ನದಿಯ ರೂಪದಿಂದ ಅಲ್ಲಿ ಹರಿಯಹತ್ತಿದಳು. ಸರಸ್ವತಿಯ ಆಗಮನದಿಂದ ಋಷಿ–ಮುನಿಗಳು ಅತ್ಯಂತ ಪ್ರಸನ್ನರಾದರು. ಕೇವಲ ಪಾವನತರಳಾದ ಸರಸ್ವತಿ

ನದಿಯಲ್ಲಿ ಅವಭೃತ ಸ್ನಾನಮಾಡಿ ಪಿತೃಗಳಿಗೂ ದೇವತೆಗಳಿಗೂ ತರ್ಪಣಕೊಟ್ಟರು. ತರುವಾಯ ಎಲ್ಲರೂ ವಾರಣಾಸಿಪುರಕ್ಕೆ ಆ ಸಮಯದಲ್ಲಿ ಹಿಮಾಲಯ ಪರ್ವತದಿಂದ ಕಾಶೀಪುರ ಬಳಿಯಲ್ಲಿ ಪ್ರವಹಿಸುತ್ತಿರುವ ಪವಿತ್ರತಮಳಾದ ಭಾಗೀರಥಿಯ ದರ್ಶನ ಹೊಂದಿ, ಅವಗಾಹನ ಮಾಡಿ ಅಲ್ಲಿ ಅವಿಮುಕ್ತೇಶ್ವರ ಲಿಂಗದ ಪೂಜೆಮಾಡಿ, ಎಲ್ಲ ಮುನಿಗಳು ಹೊರಡಬೇಕೆನ್ನುವಷ್ಟರಲ್ಲಿ ಆಕಾಶದಲ್ಲಿ ದಿವ್ಯವಾದ ಕೋಟಿ ಸೂರ್ಯರಂತೆ ಚಮಕಿಸುವ ತೇಜವನ್ನು ಅವರು ಕಂಡರು. ಕೂಡಲೆ ಭಸ್ಮಧಾರಿಗಳಾದ ಸಿದ್ಧಮುನಿಗಳು ಆ ತೇಜದಲ್ಲಿ ಲೀನರಾದರು. ಆ ಪಾಶುಪತ ಮುನಿಗಳು ಲೀನವಾದ ಕೂಡಲೆ ಆ ತೇಜವು ಅದೃಶ್ಯವಾಯಿತು. ತರುವಾಯ ನೈಮಿಷಾರಣ್ಯವಾಸಿ ಮುನಿಗಳು ಬ್ರಹ್ಮವನಕ್ಕೆ ತೆರಳಿದರು.

ಮುನಿಗಳು ಅಲ್ಲಿಗೆ ತಲುಪುವದಕ್ಕಿಂತ ಮುಂಚಿತವಾಗಿ ಲೋಕಪಾವನ ಕರನಾದ ಪವನದೇವನು ಅಲ್ಲಿಗೆ ತಲುಪಿದ್ದನು. ಅವನು ಋಷಿಗಳ ಮಹಾಯಾಗದ ಸಂಗತಿಯನ್ನೂ, ತಾನು ಮಾಡಿದ ಶಿವಧರ್ಮೋಪದೇಶದ ಸುದ್ದಿಯನ್ನೂ ಬ್ರಹ್ಮ ದೇವನಿಗೆ ತಿಳಿಸಿದ್ದನು. ಋಷಿಗಳು ಬ್ರಹ್ಮದೇವನ ನಿವಾಸಕ್ಕೆ ತೆರಳಿದಾಗ ಅಲ್ಲಿ ತುಂಬುರು, ನಾರದರ ಗಾಯನರಸದ ಅಸ್ವಾದನೆಯಲ್ಲಿ ಆ ದೇವನು ತಲ್ಲೀನನಾಗಿದ್ದನು. ಗಾಯನ ಸಮಾಪ್ತಿಯಾದ ಬಳಿಕ ಋಷಿಗಳಿಗೆ ನಾರದ ಮುನಿಯ ಮುಖಾಂತರವಾಗಿ ಪ್ರವೇಶ ದೊರೆತದ್ದರಿಂದ ಅವರು ಒಳಗೆ ಪ್ರವೇಶಮಾಡಿ ಬ್ರಹ್ಮದೇವನಿಗೆ ಪ್ರಣಾಮಗಳನ್ನರ್ಪಿಸಿದರು. ತರುವಾಯ ಅವರು ವಾಯುದೇವನ ಉಪದೇಶದ ಸಂಗತಿಯನ್ನೂ ಮಹಾಯಜ್ಞ, ಅವಭೃತ ಸ್ನಾನದ ಸಂಗತಿಯನ್ನೂ, ವಾರಣಾಸಿಯಲ್ಲಿ ತೇಜವು ಉದ್ಭವವಾದುದನ್ನೂ ತಿಳಿಸಿದರು.

ಬ್ರಹ್ಮದೇವ–ಮುನಿಗಳೆ, ನೀವು ವಾರಣಾಸಿಯ ನಭಪ್ರಾಂಗಣದಲ್ಲಿ ಕಂಡದ್ದು ಭಗವಾನ್ ವಿಶ್ವನಾಥನ ಜ್ಯೋತಿರ್ಲಿಂಗವು. ಮೇರು ಪರ್ವತದ ಶಿಖರದ ಮೇಲೆ ನನ್ನ ಮಾನಸ ಪುತ್ರನಾದ ಸನತ್ಕುಮಾರನು ವಾಸಿಸಿರುವನು. ಅವನು ಸರ್ವೋತ್ಕೃಷ್ಟನಾದ ಮುನಿಯಾಗಿರುವನು. ಅವನು ಭೂತನಾಥ ನಂದೀಶ್ವರನ ಆಗಮನವನ್ನು ಪ್ರತೀಕ್ಷಿಸುತ್ತಿರುವನು. ನೀವೆಲ್ಲರೂ ನಂದೀಶ್ವರನ ಆಗಮನವಾಗುವದಕ್ಕಿಂತ ಮುಂಚಿತವಾಗಿ ಮೇರುಗಿರಿಗೆ ತೆರಳಬೇಕು. ಯೋಗಿ ವರನಾದ ಸನತ್ಕುಮಾರನು ತಾನು ದೊಡ್ಡ ಯೋಗೀಶ್ವರನೆಂದು ಅಹಂಕಾರ ತಳೆದುದರಿಂದ ಅವನಿಗೆ ನಂದೀಶ್ವರನ ಶಾಪದಿಂದ ಉಷ್ಟ್ರಾಕಾರವು ಪ್ರಾಪ್ತ

ವಾಗಿತ್ತು. ಆಗ ಮಹಾದೇವನ ಆಜ್ಞೆಯಿಂದ ನಂದಿಯು ಅವನ ಮೇಲೆ ದಯೆಮಾಡಿ ಶಾಪವಿಮೋಚನೆ ಮಾಡಿದನು. ತರುವಾಯ ಅವನಿಗೆ ಶಿವತತ್ವದ ಉಪದೇಶ ಮಾಡಲು ಭಗವಾನ್ ಶಂಭುವು ನಂದಿಗೆ ಹೇಳಿರುವನು. ಸನತ್ಕುಮಾರನು ಮೇರುಪರ್ವತದಲ್ಲಿ ತಪಸ್ಸು ಮಾಡುತ್ತ ನಂದೀಶ್ವರನ ಆಗಮನವನ್ನು ನಿರೀಕ್ಷಿಸುತ್ತಿರುವನು. ನೀವು ಮೇರುಗಿರಿಯ ದಕ್ಷಿಣವರ್ತಿಯಾದ ಕುಮಾರ ಶಿಖರದ ಮೇಲೆ ಹೋಗಿ ಸನತ್ಕುಮಾರನ ದರ್ಶನ ಹೊಂದಿರಿ.

ಬ್ರಹ್ಮದೇವನ ಆಜ್ಞೆಯಂತೆ ನೈಮಿಷಾರಣ್ಯವಾಸಿ ಮುನಿಗಳು ಮೇರುಗಿರಿಗೆ ಪ್ರಯಾಣ ಮಾಡಿದರು. ಮೇರು ಪರ್ವತದ ಮೇಲೆ ಸಾಗರ ಸಮಾನವಾದ ಒಂದು ಮಹಾಸರೋವರವಿರುವದು. ಅದರ ಜಲವು ಸ್ವಾದಿಷ್ಟವೂ ಶೀತಲವೂ ನಿರ್ಮಲವೂ ಆಗಿರುವದು. ಆ ಸರೋವರದ ಉತ್ತರ ತಟದಲ್ಲಿ ಕಲ್ಪವೃಕ್ಷದ ಕೆಳಗೆ ವಜ್ರಶಿಲೆಯಿಂದ ರಚಿತವಾದ ವೇದಿಕೆಯ ಮೇಲೆ ಮೃಗ ಚರ್ಮವನ್ನು ಹಾಸಿ, ಸದಾ ಬಾಲರೂಪಧಾರಿಯಾದ ಯೋಗಿವರ ಸನತ್ಕುಮಾರನು ಕುಳಿತು ಶಿವಧ್ಯಾನದಲ್ಲಿ ಮಗ್ನನಾಗಿರುತ್ತಿದ್ದನು. ನೈಮಿಷಾರಣ್ಯದ ಮುನಿಗಳು ಆ ಯೋಗಿವರನ ದರ್ಶನ ಹೊಂದಿ, ಅವನ ಚರಣಾರವಿಂದಗಳ ಮೇಲೆ ಮಸ್ತಕಗಳನ್ನಿರಿಸಿದರು. ಸನತ್ಕುಮಾರ ಮುನಿಯು ಅವರ ಆಗಮನದ ಕಾರಣವನ್ನು ವಿಚಾರಿಸುತ್ತಿರುವಾಗ ಆಕಾಶದಲ್ಲಿ ದೇವದುಂದುಭಿಗಳ ತುಮುಲನಿನಾದವು ಪ್ರಾರಂಭವಾಯಿತು. ಅದೇ ಸಮಯದಲ್ಲಿ ಸೂರ್ಯಸಮಪ್ರಭೆಯುಳ್ಳ ವಿಮಾನವು ದೃಷ್ಟಿಗೋಚರವಾಯಿತು. ಅದು ಅನೇಕ ಗಣೇಶ್ವರರಿಂದ ಸುತ್ತುವರಿಯಲ್ಪಟ್ಟಿತ್ತು. ಅದರಲ್ಲಿ ಅನೇಕ ಅಪ್ಸರೆಯರೂ ರುದ್ರಕನ್ಯೆಯರೂ ಇದ್ದರು. ಆ ವಿಮಾನವು ಮುತ್ತು-ರತ್ನಗಳಿಂದ ಸುಶೋಭಿತವಾಗಿತ್ತು. ವೀಣಾ ಮೃದಂಗ ಡೊಳ್ಳುಗಳು ಅದರಲ್ಲಿ ಧ್ವನಿಗೈಯತೊಡಗಿದ್ದವು. ಅದರಲ್ಲಿ ಸಿದ್ಧರು, ಗಂಧರ್ವರು, ಯಕ್ಷರು, ಚಾರಣರು, ಕಿನ್ನರರು ಗಾಯನ, ನರ್ತನ ಮಾಡುತ್ತಿದ್ದರು. ಅದರ ಮಧ್ಯದಲ್ಲಿರುವ ಪ್ರವಾಳ ಮೌಕ್ತಿಕಗಳಿಂದ ವಿಭೂಷಿತವಾದ ಸುವರ್ಣ ಸಿಂಹಾಸನದಲ್ಲಿ ಶಿಲಾದಪುತ್ರ ನಂದೀಶ್ವರನು ವಿರಾಜಮಾನನಾಗಿದ್ದನು. ಅವನು ದ್ವಿತೀಯ ಶಂಭುವು; ಗಣಾಧ್ಯಕ್ಷನು; ನಿಗ್ರಹಾನುಗ್ರಹ ಶಕ್ತಿ ಶಾಲಿಯು. ಸ್ವಲ್ಪ ವೇಳೆಯಲ್ಲಿ ಆ ವಿಮಾನವು ಭೂಮಿಗಿಳಿಯಿತು. ಸನತ್ಕುಮಾರನೂ ನೈಮಿಷಾರಣ್ಯವಾಸಿ ಮುನಿಗಳೂ ನಂದೀಶ್ವರನಿಗೆ ಸಾಷ್ಟಾಂಗ ಪ್ರಣಾಮಗಳನ್ನರ್ಪಿಸಿದರು.

ಸನತ್ಕುಮಾರ–ನಂದೀಶ್ವರಾ, ಈ ಋಷಿಗಳು ನೈಮಿಷಾರಣ್ಯವಾಸಿಗಳು. ಇವರು ವಾಯುದೇವನಿಂದ ಶಿವತತ್ವಗಳನ್ನು ತಿಳಿದುಕೊಂಡವರಾಗಿರುವರು. ನಾನಾದರೂ ನಿನ್ನ ದರ್ಶನಕ್ಕಾಗಿ ತಪಶ್ಚರ್ಯ ಮಾಡುತ್ತಿದ್ದೆನು. ಈ ಮಹರ್ಷಿಗಳು ನೈಮಿಷಾರಣ್ಯದಲ್ಲಿ ದೀರ್ಘಕಾಲದವರೆಗೆ ಯಜ್ಞ ಮಾಡಿದವರಾಗಿರುವರು. ಇವರು ಬ್ರಹ್ಮದೇವನ ಆದೇಶದಂತೆ ನಿನ್ನ ದರ್ಶನಕ್ಕಾಗಿ ಇಲ್ಲಿಗೆ ಧಾವಿಸಿ ಬಂದಿರುವರು, ಸಮರ್ಥನಾದ ನೀನು ಅವರ ಪಾಶವನ್ನು ನಿವಾರಿಸಬೇಕು.

ನಂದೀಶ್ವರನು ದೃಷ್ಟಿ ಪಾತದಿಂದ ಎಲ್ಲರ ಪಾಶಗಳ ನಿವಾರಣೆಯನ್ನು ಮಾಡಿದನು. ಅವರಿಗೆ ಈಶ್ವರೀಯ ಶೈವಧರ್ಮವನ್ನೂ ಜ್ಞಾನಯೋಗವನ್ನೂ ಉಪದೇಶಿಸಿದನು. ಸನತ್ಕುಮಾರನನ್ನು ಸಂತುಷ್ಟಗೊಳಿಸಿ ವಿಮಾನದಿಂದ ಭಗವಾನ್ ಮಹಾದೇವನ ಸನ್ನಿಧಿಗೆ ಹೊರಟು ಹೋದನು. ಸನತ್ಕುಮಾರನು ಈಶ್ವರೀಯ ಶೈವಧರ್ಮವನ್ನು ವೇದವ್ಯಾಸನಿಗೆ ಉಪದೇಶಿಸಿದನು. ಸನತ್ಕುಮಾರನು ಉಪದೇಶಿಸಿದ ಶೈವತತ್ವಗಳನ್ನು ನನ್ನ ಗುರುವಾದ ವೇದವ್ಯಾಸನು ನನಗೆ ಬೋಧಿಸಿದನು. ಶೌನಕಾದಿ ಋಷಿಗಳೆ, ನಾನು ನಿಮಗೆ ವ್ಯಾಸಪ್ರಣೀತ ಶಿವ ಪುರಾಣವನ್ನು ಕಥನ ಮಾಡಿದೆನು. ಶ್ರದ್ಧೆಯಿಂದ ಈ ಪುರಾಣವನ್ನು ಓದುವದರಿಂದ, ಕೇಳುವದರಿಂದ ಇಹ–ಪರಗಳಲ್ಲಿ ಸುಖವೂ ಸದ್ಗತಿಯೂ ದೊರಕುವವು. ಇದು ವೇದದಂತೆ ಪವಿತ್ರವಾದದ್ದಿರುವದು. ಭಗವಾನ್ ಮಹಾದೇವನು ದೇವೀ ಪಾರ್ವತಿಯೊಡನೆ ಪುರಾಣ ವಕ್ತಾರನ ಹಾಗೂ ಶ್ರೋತೃಗಳ ಕಲ್ಯಾಣ ಮಾಡುವನು.

ವಾಯವೀಯ ಸಂಹಿತಾ (ಉತ್ತರ ಖಂಡ) ಸಂಪೂರ್ಣ

॥ ಶಿವ ಪುರಾಣ ಸಂಪೂರ್ಣ ॥



# ಇತ್ತೀಚಿನ ಪ್ರಕಟಣೆಗಳು

ಗೃಹ ದೀಪಿಕೆ
ರೇಡಿಯೋ ನಾಟಕಗಳು
ಕಮಲೆಯ ಓಲೆಗಳು
ಆಯುರ್ವೇದ ಕುಟುಂಬ ಕೈಪಿಡಿ
ಹೊಸ ರೋಗಗಳಿಗೆ ಅಲೋಪತಿ ಚಿಕಿತ್ಸೆ
ಪ್ರಕೃತಿ ಚಿಕಿತ್ಸೆ
ಹಾಡು ಬಾ ನನ್ನೊಡನೆ ಗೆಳತಿ
ಅಂತರಂಗದ ಮಾತು
ಸೋನಕ್ಕ
ಶ್ರೀಮದ್ ದೇವಿಭಾಗವತ
ಹಠಯೋಗ ಪ್ರದೀಪಿಕೆ
ಬ್ರಹ್ಮಚರ್ಯವೇ ಜೀವನ
ಋಗ್ವೇದ ಒಂದು ಅಧ್ಯಯನ
ಯಜುರ್ವೇದ ಒಂದು ಅಧ್ಯಯನ
ಅಥರ್ವವೇದ ಒಂದು ಅಧ್ಯಯನ
ಸಾಮವೇದ ಒಂದು ಅಧ್ಯಯನ
ಧರ್ಮಸಿಂಧು
ಹಠಯೋಗ ದೀಪಿಕಾ
ಬಾಣ ಕಾದಂಬರಿ
ಜಾಗತಿಕ ಸತ್ಯಗಳು
ಮಹಾಭಾರತದಲ್ಲಿ ಧರ್ಮ
ತೆನ್ನಾಲಿ ರಾಮಕೃಷ್ಣನ ಕತೆಗಳು
ಮಕ್ಕಳ ನಿತ್ಯಪಾಠ
ಸಿರಿಗನ್ನಡ ಪಂಚತಂತ್ರ
ಕ್ರಿಯಾತ್ಮಕ ಯೋಗಾಸನಗಳು

ಹೊಯ್ಸಳರ ಇತಿಹಾಸ
ಚಾಲುಕ್ಯರ ಇತಿಹಾಸ
ರಾಷ್ಟ್ರಕೂಟರ ಇತಿಹಾಸ
ಕದಂಬ - ಗಂಗರ ಇತಿಹಾಸ
ಬೋಧ ರಹಸ್ಯ
ಕನ್ನಡ ಭಾಷಣ ಕಲೆ
ಮಕ್ಕಳ ರಾಮಾಯಣ
ಮಕ್ಕಳ ಮಹಾಭಾರತ
ಮಕ್ಕಳ ಭಾಗವತ
ಬೀರಬಲ್‌ನ ಕತೆಗಳು
ಫೋಟೋಗ್ರಾಫಿ
ಅಲೋಪತಿ ಚಿಕಿತ್ಸೆ
ಕರಾಟೆ
ಜೂಡೋ
ಶಿವಪುರಾಣ
ಪರಾಶರ ಸ್ಮೃತಿ
ಪ್ರತಿಫಲನ
ಆಧುನಿಕ ಹೊಲಿಗೆ ಶಾಸ್ತ್ರ
ಪಾಕ ರಸಾಯನ
ರಸಪಾಕ
ಆಟ-ಓಟ ಪಂದ್ಯಗಳು
ಪತಿಕೋ





Rs. 90/